# ಕರ್ನಾಟಕ ತಳವಾರರು ಸಾಂಸ್ಕೃತಿಕ ಅಧ್ಯಯನ

(ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ)


ಸಂಶೋಧಕರು

ವಿಠ್ಠಲ ತಳವಾರ

ಮಾರ್ಗದರ್ಶಕರು

ಡಾ.ಎಸ್.ಎಸ್.ಅಂಗಡಿ

ಪ್ರಾಧ್ಯಾಪಕರು








ಹಸ್ತಪ್ರತಿಶಾಸ್ತ್ರ ವಿಭಾಗ

ಭಾಷಾನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ- ೫೮೩ ೨೭೬

೨೦೧೬

# ಕರ್ನಾಟಕ ತಳವಾರರು ಸಾಂಸ್ಕೃತಿಕ ಅಧ್ಯಯನ

(ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ)

ಸಂಶೋಧಕರು

**ವಿಠ್ಠಲ ತಳವಾರ**

ಮಾರ್ಗದರ್ಶಕರು

**ಡಾ.ಎಸ್.ಎಸ್.ಅಂಗಡಿ**

ಪ್ರಾಧ್ಯಾಪಕರು






**ಹಸ್ತಪ್ರತಿಶಾಸ್ತ್ರ ವಿಭಾಗ**

ಭಾಷಾನಿಕಾಯ

**ಕನ್ನಡ ವಿಶ್ವವಿದ್ಯಾಲಯ, ಹಂಪಿ**

ವಿದ್ಯಾರಣ್ಯ ೫೮೩ ೨೭೬

೨೦೧೬

# ಸಂಶೋಧಕರ ಘೋಷಣಾ ಪತ್ರ

**ಕರ್ನಾಟಕ ತಳವಾರರು: ಸಾಂಸ್ಕೃತಿಕ ಅಧ್ಯಯನ** ಎಂಬ ಈ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ, **ಹಸ್ತಪ್ರತಿಶಾಸ್ತ್ರ ವಿಭಾಗದ,** ಪ್ರಾಧ್ಯಾಪಕರಾದ **ಡಾ.ಎಸ್.ಎಸ್.ಅಂಗಡಿ** ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ಮಹಾಪ್ರಬಂಧವನ್ನು ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರೆ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ಘೋಷಿಸುತ್ತೇನೆ.

ಸಂಶೋಧಕರು

**ವಿಠ್ಠಲ ತಳವಾರ**
ಪಿಎಚ್.ಡಿ.ಸಂಶೋಧನ ವಿದ್ಯಾರ್ಥಿ
ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

**ಸ್ಥಳ:** ವಿದ್ಯಾರಣ್ಯ
**ದಿನಾಂಕ:** 04/10/16

## ಮಾರ್ಗದರ್ಶಕರ ದೃಢೀಕರಣ ಪತ್ರ

**ವಿಠ್ಠಲ ತಳವಾರ** ಇವರು ಪಿಎಚ್.ಡಿ. ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ **ಕರ್ನಾಟಕ ತಳವಾರರು: ಸಾಂಸ್ಕೃತಿಕ ಅಧ್ಯಯನ** ಎಂಬ ಈ ಮಹಾ ಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ **ಹಸ್ತಪ್ರತಿಶಾಸ್ತ್ರ ವಿಭಾಗಕ್ಕೆ** ಸಲ್ಲಿಸುತ್ತಿದ್ದಾರೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರೇ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ದೃಢೀಕರಿಸಲಾಗಿದೆ.

ಮಾರ್ಗದರ್ಶಕರು

**ಡಾ.ಎಸ್.ಎಸ್.ಅಂಗಡಿ**
ಪ್ರಾಧ್ಯಾಪಕರು
ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

**ಸ್ಥಳ:** ವಿದ್ಯಾರಣ್ಯ
**ದಿನಾಂಕ:** 04/10/16

## ಪರಿವಿಡಿ

## ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ, ವೈಧಾನಿಕತೆ ಮತ್ತು ಸ್ವರೂಪ

ಒಂದು ಜನಸಮುದಾಯದ ಅಧ್ಯಯನವೆಂದರೆ ಅವರು ರೂಢಿಸಿಕೊಂಡು ಬಂದಿರುವ ಜೀವನ ಮೌಲ್ಯಗಳ ಅಧ್ಯಯನವೇ ಆಗಿದೆ. ಈ ದೃಷ್ಟಿಯಿಂದ ತಳವಾರರ ವೃತ್ತಿ ಮತ್ತು ಜೀವನಮೌಲ್ಯಗಳನ್ನು ಕಂಡುಕೊಳ್ಳುವುದೇ ಪ್ರಸ್ತುತ ಸಾಂಸ್ಕೃತಿಕ ಅಧ್ಯಯನದ ಮೂಲ ಉದ್ದೇಶವಾಗಿದೆ. ಇಲ್ಲಿ ಸಂಸ್ಕೃತಿಯೆಂದರೆ ಆಯಾ ಜನಾಂಗ ತಲೆತಲಾಂತರಗಳಿಂದ ರೂಢಿಸಿಕೊಂಡು ಬಂದ ಮೌಲ್ಯಗಳೇ ಆಗಿರುತ್ತವೆ. ಮಾನವವರ್ಗಗಳಲ್ಲಿ 'ಸಂಸ್ಕೃತಿ' ಇಲ್ಲದ ಯಾವುದೇ ಜನಾಂಗವನ್ನು ಕಾಣಲು ಸಾಧ್ಯವಿಲ್ಲ. ಮನುಷ್ಯರನ್ನು ಇನ್ನಿತರೆ ಜೀವಿಗಳಿಗಿಂತ ಬೇರೆ ರೀತಿಯಲ್ಲಿ ಕಾಣಲು ನಮಗಿರುವ ಆಧಾರವೇ ಸಂಸ್ಕೃತಿಯಾಗಿದೆ. ಇತರ ಜೀವಿಗಳಲ್ಲಿ ಸಾಮಾಜಿಕ ಸ್ವರೂಪಗಳನ್ನು ನಾವು ಅವುಗಳ ಜೈವಿಕ ಆಧಾರದಲ್ಲಿ ಗುರುತಿಸುವುದಾದರೆ, ಮಾನವ ಸಮಾಜವನ್ನು ಜೈವಿಕ ಅಂಶಗಳಿಗಿಂತ ಭಿನ್ನವಾಗಿ ಸಾಂಸ್ಕೃತಿಕ ಆಧಾರದಲ್ಲಿ ಹಾಗೂ ಇದೇ ಅಂಶದಿಂದ ಪ್ರಾಣಿಸಮಾಜವನ್ನು ಜೈವಿಕ ಸಮಾಜವೆಂದೂ, ಮಾನವಸಮಾಜವನ್ನು ಸಾಂಸ್ಕೃತಿಕ ಸಮಾಜವೆಂದೂ ಗುರುತಿಸಲಾಗುತ್ತದೆ. ಈ ಸಂಸ್ಕೃತಿಯ ಕಾರಣದಿಂದಾಗಿಯೇ ಮಾನವನು ಎಲ್ಲ ಪ್ರಾಣಿಗಳಿಗಿಂತ ಮೇಲ್ಮಟ್ಟದವನಾಗಿ ತನ್ನ ಬದುಕಿನಂತೆಯೇ ಇತರರ ಬದುಕನ್ನು ಗೌರವಿಸಿ ಸೌಹಾರ್ದ, ಸಾಮರಸ್ಯಗಳ ಮೂಲಕ ಸಹಜೀವನಕ್ಕೆ ಅವಕಾಶ ಮಾಡಿಕೊಟ್ಟಿದ್ದಾನೆ. ಸಂಸ್ಕೃತಿಯನ್ನು ಮಾನವನು ತನ್ನ ಅಗತ್ಯಕ್ಕೆ ತಕ್ಕಂತೆ ರೂಢಿಸಿಕೊಳ್ಳುವುದರಿಂದ ವ್ಯಕ್ತಿ ತನ್ನಲ್ಲಿರುವ ಪ್ರಜ್ಞೆಯನ್ನು ಬಳಸಿಕೊಂಡು ತನ್ನ ಹಾಗೂ ಸಮಾಜದ ಅಭಿವೃದ್ಧಿಗೆ ಶ್ರಮಿಸಿದ್ದಾನೆ.

"ಒಂದು ಸಂಸ್ಕೃತಿಯಿಂದ ಇನ್ನೊಂದು ಸಂಸ್ಕೃತಿಯು ಹರಿಯುವುದಕ್ಕೆ ಪ್ರೇರಣೆ ಮನುಷ್ಯನೇ ಆಗಿದ್ದಾನೆ. ಈ ಸಂಸ್ಕೃತಿ ಮಾನವನ ಜೀವನವನ್ನು ಅರಿಯಲು ಕಾರಣವಾಗಿದೆ. ಅಂದರೆ ಸಂಸ್ಕೃತಿಯು ಮಾನವನ ಆಂತರಿಕ ಮತ್ತು ಬಾಹ್ಯಜೀವನವನ್ನು ಅಭಿವ್ಯಕ್ತಿಗೊಳಿಸುತ್ತದೆ. ಆ ಹಿನ್ನೆಲೆಯಲ್ಲಿ ತಮ್ಮದೇ ಆದ ಸಮೃದ್ಧ ಸಾಂಸ್ಕೃತಿಕ ಪರಂಪರೆಯನ್ನು ಕಟ್ಟಿಕೊಳ್ಳುತ್ತವೆ. ಇವೆಲ್ಲಾ

ನಮ್ಮ ಸಂಸ್ಕೃತಿಯ ಒಳತಿರುಳನ್ನು ಅನಾವರಣಗೊಳಿಸುತ್ತವೆ. ಇವು ಮೇಲುನೋಟಕ್ಕೆ ದಿಗ್ಗನೆ ಎದ್ದು ಕಾಣದಿದ್ದರೂ ಅವುಗಳ ಸತ್ವ ಹಾಗೂ ಸ್ವಂತಿಕೆಗಳಿಂದಾಗಿ ಎಷ್ಟೋ ಕಾಲದಿಂದ ಉಳಿದು ಕೊಂಡು ಬಂದಿವೆ. ಅವುಗಳ ಬದಲಾದ ಸ್ಥಿತಿಯಲ್ಲಿ ಅಧ್ಯಯನಕಾರರ ಗಮನ ಸೆಳೆದಿವೆ" (ಗೋವಿಂದರಾಜ್, ಚಿನ್ನಾದೇವಿ ಅಗ್ರಹಾರ: ಜಾನಪದೀಯ ಅಧ್ಯಯನ, ೧೯೯೪, ಪು.೨). ಈ ಮಾತಿನನ್ವಯ ಭಾರತೀಯ ಸಂಕೀರ್ಣ ಸಂಸ್ಕೃತಿಯಲ್ಲಿ ಅದರ ಗುಣ ಲಕ್ಷಣಗಳನ್ನು ಒಂದೆರಡು ಅಂಶಗಳಲ್ಲಿ ಹೇಳುವುದು ಅಷ್ಟು ಸುಲಭವಲ್ಲ. ಆದರೂ ವೈದಿಕ ಸಂಸ್ಕೃತಿ ಇಲ್ಲಿಯ ಹಲವು ಸಂಸ್ಕೃತಿಗಳಲ್ಲಿ ತನ್ನ ದಟ್ಟ ಪ್ರಭಾವವನ್ನು ಬೀರಿರುವುದನ್ನು ಕಾಣುತ್ತೇವೆ. ಈ ಕಾರಣಕ್ಕಾಗಿ ಒಂದು ರೀತಿಯಿಂದ 'ಪ್ರಧಾನಸಂಸ್ಕೃತಿ' ಎಂಬ ಭಾವನೆಯನ್ನು ನಮ್ಮಲ್ಲಿ ಮೂಡಿಸಿಬಿಟ್ಟಿದೆ.

ಈ ಪ್ರಧಾನಸಂಸ್ಕೃತಿಯೊಳಗಡೆ ಇತರ ಅನೇಕ ಸಂಸ್ಕೃತಿಗಳು ಹುದುಗಿರುವ ಸುಳಿವು ಇವೆ. ಅವುಗಳನ್ನು ಉಪಸಂಸ್ಕೃತಿಗಳೆಂದು ಕರೆಯಲಾಗಿದೆ. ಈ ಸಂಸ್ಕೃತಿಗಳ ಅಧ್ಯಯನ ಫಲವಾಗಿ ಹೊರಬಂದುದೇ ಕರ್ನಾಟಕ ಸಾಹಿತ್ಯ ಅಕಾಡೆಮಿಯ 'ಉಪಸಂಸ್ಕೃತಿಯ' ಗ್ರಂಥಮಾಲೆ. ಈ ಅಧ್ಯಯನದಡಿಯಲ್ಲಿ ಸುಮಾರು ೩೬ ಭಿನ್ನ ಜನಾಂಗಗಳ ಸಂಸ್ಕೃತಿಗಳ ಕುರಿತು ಅಧ್ಯಯನ ಮಾಡಲಾಗಿದೆ. ಇದೇ ರೀತಿಯ ಅಧ್ಯಯನಗಳಿಂದ ಒಂದೊಂದು ಸಮುದಾಯಗಳ ಆಚಾರ-ವಿಚಾರ, ರೀತಿ-ನೀತಿ, ನಂಬಿಕೆ-ಸಂಪ್ರದಾಯ, ವೃತ್ತಿಯ ವೈವಿಧ್ಯತೆ, ದೈವ-ದೇವರುಗಳನ್ನು ವಿಶ್ಲೇಷಿಸಲಾಗಿದೆ. ಈ ದೃಷ್ಟಿಯಲ್ಲಿ ತಳವಾರರ ವೃತ್ತಿ ಬದುಕಿನಲ್ಲಿನ ಸಾಂಸ್ಕೃತಿಕ ಅಂಶಗಳನ್ನು ಹಾಗೂ ಕರ್ನಾಟಕ ವೃತ್ತಿಪರಂಪರೆಯಲ್ಲಿ ತಳವಾರರ ಸ್ಥಾನಮಾನಗಳ ಕುರಿತು ವಿಶ್ಲೇಷಿಸುವುದು ಪ್ರಸ್ತುತ ಅಧ್ಯಯನದ ಉದ್ದೇಶವಾಗಿದೆ.

ತಳವಾರಿಕೆ ಎನ್ನುವುದು 'ತಲವರ', 'ತಳವರ', 'ತಲಾರಿಕೆ', 'ತಳವಾರಿಕೆ', 'ತಲಾರ' ಇತ್ಯಾದಿ ರೂಪಗಳಲ್ಲಿ ಸಿಗುತ್ತದೆ. ಈ ಎಲ್ಲಾ ರೂಪಗಳಿಗೆ ಸಾಮಾನ್ಯವಾಗಿ ಒಂದೇ ಅರ್ಥ ಇದೆ. ಅದು ಗ್ರಾಮರಕ್ಷಣೆ, ಗ್ರಾಮ ಕಾವಲು, ಸಹಾಯಕ, ಖಡ್ಗವನ್ನು ಹಿಡಿದು ಗ್ರಾಮವನ್ನು ರಕ್ಷಿಸುವವನು ಗ್ರಾಮದ ಕಾವಲುಗಾರ, ತಳವಾರ ಎಂದು ಮುಂತಾಗಿ ಕರೆಯಲಾಗುತ್ತದೆ. ತಳವಾರಿಕೆಯನ್ನು ಹಳ್ಳಿಯ ಗಟ್ಟಿಮುಟ್ಟಾದ ಹಿಂದುಳಿದ ವರ್ಗಗಳ ವ್ಯಕ್ತಿಗಳು ಕೈಗೊಳ್ಳುತ್ತ ಬಂದಿದ್ದಾರೆ. ಅದರಲ್ಲೂ ಹೆಚ್ಚಾಗಿ ಬೇಡ ನಾಯಕ ಸಮುದಾಯದವರು ಈ ವೃತ್ತಿಯನ್ನು ಹೆಚ್ಚಾಗಿ ಅವಲಂಬಿಸಿದ್ದಾರೆ. ಕೈಯಲ್ಲೊಂದು ಕೋಲು ಇಲ್ಲವೆ ಖಡ್ಗವನ್ನು ಹಿಡಿದು ಗ್ರಾಮಶಾಂತಿಗಾಗಿ ಗಸ್ತು ತಿರುಗುವುದು, ಕೋಟೆ, ದಿಡ್ಡಿ ಬಾಗಿಲುಗಳನ್ನು ಕಾಯುವುದು, ಗ್ರಾಮದಲ್ಲಿ ಅಶಾಂತಿಗೆ ಎಡೆಗೊಡದಂತೆ ಎಚ್ಚರವಹಿಸುವುದು, ಕಳ್ಳಕಾಕರಿಂದ ಗ್ರಾಮವನ್ನು ರಕ್ಷಿಸುವುದು, ಅನೈತಿಕ ಚಟುವಟಿಕೆಗಳು ನಡೆಯದಂತೆ ಗಮನ ಹರಿಸುವುದು, ಗೌಡ, ಕುಲಕರ್ಣಿಯರ ಜೊತೆಗೆ ಕಂದಾಯ ವಸೂಲಿಗೆ ಹೋಗುವುದು, ಹಬ್ಬ-ಹರಿದಿನ ಜಾತ್ರೆ-ಉತ್ಸವಗಳಲ್ಲಿ ಸಕ್ರಿಯವಾಗಿ ಪಾಲ್ಗೊಂಡು ಶಾಂತಿ ಕದಡದಂತೆ ನೋಡಿಕೊಳ್ಳುವುದು ತಳವಾರನ ಪ್ರಮುಖ ಕರ್ತವ್ಯವಾಗಿತ್ತು.

ತಳವಾರಿಕೆ ಗ್ರಾಮದ ಕೆಲವು ಮನೆತನಕ್ಕೆ ಮಾತ್ರ ಸೀಮಿತವಾದುದು. ಊರಿನ ಎಲ್ಲಾ ಸಮುದಾಯದವರಿಗೆ ತಳವಾರಿಕೆ ಮಾಡುವ ಹಕ್ಕಿಲ್ಲ. ತಳವಾರನ ಗ್ರಾಮದ ಸೇವೆಗಾಗಿ ವತನಿ ಜಮೀನುಗಳುಂಟು. ಈತ ಇತರ ವೃತ್ತಿಯವರಂತೆ ರೈತರಿಂದ ಆಯ ಪಡೆಯುತ್ತಾನೆ. ವಾಲೇಕಾರಿಕೆ ವೃತ್ತಿಯವರು ಸುಗ್ಗಿಯ ಕಾಲದಲ್ಲಿ, ಹಬ್ಬ-ಹರಿದಿನಗಳಲ್ಲಿ ಇಂತಿಷ್ಟು ಎಂಬಂತೆ ಕಾಣಿಕೆಗಳನ್ನು ಪಡೆಯುತ್ತಾರೆ. ಇಂತಹ ವೃತ್ತಿಯನ್ನು ವಂಶಪಾರಂಪರ್ಯವಾಗಿ ಮುಂದುವರಿಸಿಕೊಂಡು ಬಂದಿರುವ ತಳವಾರರ ಕುರಿತಾಗಿ ಸಮಗ್ರ ಅಧ್ಯಯನ ಕೈಗೊಳ್ಳುವ ಉದ್ದೇಶ ಹಾಗೂ ವೃತ್ತಿ ಬದುಕಿನೊಂದಿಗೆ ಅಂಟಿಕೊಂಡುಬಂದ ಸಾಂಸ್ಕೃತಿಕ ಚಹರೆಗಳ ಕುರಿತಾಗಿ ಇಲ್ಲಿ ಅಧ್ಯಯನ ಮಾಡಲಾಗಿದೆ.

## ಅಧ್ಯಯನದ ಉದ್ದೇಶ

ತಳವಾರ ಹುದ್ದೆ ಹಾಗೂ ವೃತ್ತಿ, ಗ್ರಾಮೀಣ ಜನಜೀವನದಲ್ಲಿ ಪ್ರಮುಖ ಪಾತ್ರ ವಹಿಸಿದೆ. ಪ್ರಾಚೀನ ಕಾಲದಿಂದಲೂ ಆರಕ್ಷಣೆಯ ಹೊಣೆ ತಳವಾರನದಾಗಿತ್ತು. ರಾಜಪ್ರಭುತ್ವ, ಪಾಳೆಯಪಟ್ಟು, ಸಾಮಂತರಲ್ಲಿ ಸೇವಕನಾಗಿ ದುಡಿದ ತಳವಾರ, ಗ್ರಾಮಾಡಳಿತ ವ್ಯವಸ್ಥೆಯಲ್ಲಿ ಪ್ರಮುಖ ವ್ಯಕ್ತಿಯಾಗಿ ಕಾಣುತ್ತಾನೆ. ತಳವಾರರ ಜೀವನ ಸಾಂಘಿಕವಾದದ್ದು. ಇವರು ಕೌಟುಂಬಿಕ ಪದ್ಧತಿ, ಪಂಚಾಯಿತಿ ವ್ಯವಸ್ಥೆ, ಆರ್ಥಿಕ ವ್ಯವಸ್ಥೆಯನ್ನು ಹೊಂದಿದ್ದು, ಸಾಮಾಜಿಕ ವ್ಯವಸ್ಥೆಯಲ್ಲಿ ಸಬಲರಾಗಿದ್ದಾರೆ. ಈ ಮೂಲಕ ತಮ್ಮದೇ ಆದ ವೈಶಿಷ್ಟ್ಯತೆಯನ್ನು ರೂಪಿಸಿಕೊಂಡಿದ್ದಾರೆ. ಒಂದು ಸಮಾಜದ ಮಡಿಲಲ್ಲಿ ಜೀವಿಸುತ್ತಿರುವ ಇವರು ಇತರ ಸಮುದಾಯದೊಂದಿಗೂ ಸಾಮಾಜಿಕ ಬಾಂಧವ್ಯವನ್ನು ಹೊಂದಿದ್ದಾರೆ.

ತಳವಾರಿಕೆ ತಲೆತಲಾಂತರದಿಂದ ಬಂದಂತಹ ವೃತ್ತಿ. ಈ ವೃತ್ತಿಯ ಹಿನ್ನೆಲೆ ಏನು? ತಳವಾರರು ಯಾರು? ಇವರ ಪರಂಪರೆ ಎಂತಹದ್ದು? ಇವರ ಪ್ರಮುಖ ಸಾಂಸ್ಕೃತಿಕ ಆಚರಣೆಗಳೇನು? ಪ್ರಸ್ತುತ ದಿನಮಾನದಲ್ಲಿ ಇವರ ಸ್ಥಾನಮಾನ ಹಾಗೂ ಪರಿಸ್ಥಿತಿಗಳೇನು? ಎಂಬ ಸಂಗತಿಗಳನ್ನು ಚರ್ಚಿಸಲಾಗಿದೆ.

ತಲೆತಲಾಂತರದಿಂದ ವಂಶಪಾರಂಪರಿಕವಾಗಿ ಬಂದ ಈ ವೃತ್ತಿ ಇಂದು ಕಣ್ಮರೆಯಾಗುತ್ತಿದೆ. ಕಾರಣ ಆಧುನಿಕ ಶಿಕ್ಷಣ ವ್ಯವಸ್ಥೆ, ಆಡಳಿತ ವ್ಯವಸ್ಥೆ ಕಾರಣವಾಗಿರಬಹುದು. ಕಾಲದಿಂದ ಕಾಲಕ್ಕೆ ವೃತ್ತಿಗಳು ಬದಲಾಗಿ; ಬದಲಾದ ಸಾಮಾಜಿಕ ವ್ಯವಸ್ಥೆಗೆ ಹೊಂದಿಕೊಳ್ಳುವ ಅನಿವಾರ್ಯತೆ ಸಹಜವಾಗಿ ಎದುರಾಗುತ್ತದೆ. ಹಾಗಾಗಿ ಇಂದು ತಳವಾರಿಕೆ ಕುಟುಂಬದವರು ಸಹಜವಾಗಿ ಬೇರೆ ವೃತ್ತಿಯನ್ನು ಮಾಡುವ ಅನಿವಾರ್ಯತೆ ಸೃಷ್ಟಿಯಾಗಿದೆ. ಇಂದಿನ ಆಧುನಿಕ, ಸಾಮಾಜೀಕರಣ, ಸಂಸ್ಕೃತೀಕರಣ ಹಾಗೂ ಯಾಂತ್ರೀಕರಣ ಜೀವನದಿಂದಾಗಿ ಗ್ರಾಮದವರು ತಳವಾರನಿಗೆ ಅಷ್ಟಾಗಿ ಪ್ರಾಶಸ್ತ್ಯ ಕೊಡುತ್ತಿಲ್ಲ. ಹೀಗಾಗಿ ಈ ವೃತ್ತಿ ಇಂದು ಅವಸಾನದ ಅಂಚಿನಲ್ಲಿದೆ. ಈ ಅವಸಾನದ

ಅಂಚಿನಲ್ಲಿರುವ ತಳವಾರಿಕೆ ಮತ್ತು ಆಯಾ ವೃತ್ತಿ ಸಮುದಾಯದ ಹಿನ್ನೆಲೆ ಮತ್ತು ಅವರ ಒಟ್ಟಾರೆ ಸಾಂಸ್ಕೃತಿಕ ಬದುಕನ್ನು ದಾಖಲಿಸುವ ಉದ್ದೇಶವನ್ನು ಇಟ್ಟುಕೊಂಡಿದೆ.

ತಳವಾರರು ಸಾಮಾಜಿಕ ಸಮುದಾಯಗಳೊಂದಿಗೆ ಅವಿನಭಾವ ಸಂಬಂಧ ಹೊಂದಿರುವುದು ಕಂಡುಬರುತ್ತದೆ ತಳವಾರ ವೃತ್ತಿಯ ಬಗೆಗೆ ಪ್ರಾಚೀನ ಸಾಹಿತ್ಯ, ಶಾಸನ, ಐತಿಹ್ಯ, ಪುರಾಣ ಹಾಗೂ ಜಾನಪದದಲ್ಲಿ ತಳವಾರಿಕೆ ವೃತ್ತಿಯ ಉಲ್ಲೇಖಗಳು ಸಿಗುತ್ತವೆ. ಹೀಗೆ ಉಲ್ಲೇಖಗೊಂಡ ತಳವಾರಿಕೆಯ ಸಂಗತಿಗಳನ್ನು ಗುರುತಿಸಿ, ಅವುಗಳನ್ನು ಅಧ್ಯಯನಕ್ಕೆ ಒಳಪಡಿಸಿ ನಮ್ಮ ಸಾಂಸ್ಕೃತಿಕ ಬದುಕಿನಲ್ಲಿ ತಳವಾರಿಕೆಯ ಮಹತ್ವವನ್ನು ಅರಿಯುವುದಾಗಿದೆ.

ತಳವಾರಿಕೆ ವೃತ್ತಿಯ ಮೂಲಕ ಸಾಮಾಜಿಕ ಆವರಣದಲ್ಲಿ ಇವರು ರೂಢಿಸಿಕೊಂಡು ಬಂದ ಸಾಂಸ್ಕೃತಿಕ ಮೌಲ್ಯ, ಬದಲಾದ ಸಂದರ್ಭದಲ್ಲಿ ಕಟ್ಟಿಕೊಂಡ ಜೀವನ, ಅದರೊಂದಿಗೆ ಹೊಂದಿರುವ ಸಂಸ್ಕೃತಿ, ಧರ್ಮ, ಇವೆಲ್ಲವೂ ಭಿನ್ನ ಹಾಗೂ ವಿಶೇಷತೆಯಿಂದ ಕೂಡಿವೆ. ಇವೆಲ್ಲವೂ ಅಧ್ಯಯನಕ್ಕೆ ಒಳಪಡಿಸಿದೆ. ಒಂದು ವೃತ್ತಿ ಹಿನ್ನೆಲೆಯಿಂದ ಬಂದವರು ಸಮಾಜದಲ್ಲಿ ಹೇಗೆ? ಒಂದು ನಿಶ್ಚಿತ ಸ್ಥಾನಮಾನವನ್ನು ಪಡೆದುಕೊಂಡರು ಎಂಬುದನ್ನು ಅಧ್ಯಯನದ ಮೂಲಕ ಕಂಡುಕೊಳ್ಳಲಾಗಿದೆ.

ತಳವಾರರು ಚರಿತ್ರೆಯಲ್ಲಿ ಪೂರ್ಣಪ್ರಮಾಣದಲ್ಲಿ ದಾಖಲಾಗದಿದ್ದರೂ ಬೇರೆ ಬೇರೆ ಬಗೆಯಲ್ಲಿ ಉಲ್ಲೇಖಗೊಂಡಿರು ವುದು ಸ್ಪಷ್ಟವಾಗಿದೆ. ಈ ಕಾರಣದಿಂದ ಒಂದೆಡೆ ಇವರನ್ನು ಅಧ್ಯಯನಕ್ಕೆ ಒಳಪಡಿಸಿ ಆ ಮೂಲಕ ಅವರ ಜೀವನ ವೃತ್ತಾಂತವನ್ನು ಕಟ್ಟಿಕೊಡುವುದಾಗಿದೆ. ಒಟ್ಟಾರೆಯಾಗಿ ಕರ್ನಾಟಕ ತಳವಾರರ ಕುರಿತಾಗಿ ಬಂದ ಆಕರಗಳನ್ನು ಮತ್ತು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಸಂಗ್ರಹಿಸಿದ ಮಾಹಿತಿಯನ್ನು ಆಧರಿಸಿ ಈ ಅಧ್ಯಯನವನ್ನು ಪೂರೈಸಲಾಗಿದೆ.

## ಅಧ್ಯಯನದ ವ್ಯಾಪ್ತಿ

ತಳವಾರರು ಕರ್ನಾಟಕದಾದ್ಯಂತ ಬಹುತೇಕ ಜಿಲ್ಲೆಗಳಲ್ಲಿಯೂ ಕಂಡುಬರುತ್ತಾರೆ. ಅದರಲ್ಲೂ ಮುಖ್ಯವಾಗಿ ಉತ್ತರ ಕರ್ನಾಟಕದ ಎಲ್ಲಾ ಜಿಲ್ಲೆಯಲ್ಲಿಯೂ ಹೇರಳವಾಗಿ ವಾಸವಾಗಿದ್ದಾರೆ. ಅಧ್ಯಯನದ ದೃಷ್ಟಿಯಿಂದ ಉತ್ತರ ಕರ್ನಾಟಕದ ಬಳ್ಳಾರಿ, ಕೊಪ್ಪಳ, ಗದಗ, ಧಾರವಾಡ, ವಿಜಯಪುರ, ಬೆಳಗಾವಿ, ರಾಯಚೂರು, ಕಲಬುರ್ಗಿ, ಬಾಗಲಕೋಟೆ, ಹಾವೇರಿ ಜಿಲ್ಲೆಗಳನ್ನು ಮುಖ್ಯವಾಗಿರಿಸಿಕೊಂಡು ಅಧ್ಯಯನ ನಡೆಸಲಾಗಿದೆ. ಹಾಗೆಯೇ ದಕ್ಷಿಣ ಕರ್ನಾಟಕದ ಕೆಲವು ಜಿಲ್ಲೆಗಳನ್ನು ಸಾಂದರ್ಭಿಕವಾಗಿ ಪರಿಗಣಿಸುವ ಮೂಲಕ ಅಧ್ಯಯನದ ವ್ಯಾಪ್ತಿಯನ್ನು ಇಟ್ಟುಕೊಳ್ಳಲಾಗಿದೆ. ಈ ಎಲ್ಲಾ ಜಿಲ್ಲೆಗಳ ಕೆಲವು ಗ್ರಾಮಗಳಲ್ಲಿ ಕ್ಷೇತ್ರಕಾರ್ಯ ಕೈಗೊಂಡು, ವಕ್ತೃಗಳಿಂದ ದೊರೆತ ಮಾಹಿತಿಗಳನ್ನು ಪ್ರಸ್ತುತ ಅಧ್ಯಯನದಲ್ಲಿ ಬಳಸಿಕೊಂಡು ವಿಶ್ಲೇಷಿಸಿದೆ.

ತಳವಾರ ಮತ್ತು ತಳವಾರಿಕೆಯನ್ನು ಕರ್ನಾಟಕದ ಸಾಂಸ್ಕೃತಿಕ ಸಂದರ್ಭವನ್ನು ಗಮನದಲ್ಲಿರಿಸಿಕೊಂಡು ತಳವಾರ ಮತ್ತು ತಳವಾರಿಕೆಯ ಸಮಗ್ರ ಸ್ವರೂಪವನ್ನು ಕುರಿತು ವಿವೇಚಿಸುವುದಾಗಿದೆ. ಅವರ ಬಗೆಗೆ ಸಿಗುವ ಎಲ್ಲಾ ಆಕರಗಳಲ್ಲಿ ಹುದುಗಿದ ಸತ್ಯ ಸಂಗತಿಗಳನ್ನು ಮತ್ತು ಅವುಗಳ ಸ್ವರೂಪವನ್ನು ಕಂಡುಕೊಳ್ಳಲಾಗಿದೆ.

## ಅಧ್ಯಯನದ ಸ್ವರೂಪ

ತಳವಾರ ಮತ್ತು ತಳವಾರಿಕೆಯನ್ನು ಇಲ್ಲಿ ವೃತ್ತಿ ಹಿನ್ನೆಲೆ ಮತ್ತು ಪರಂಪರೆಯಿಂದ ಆರಂಭಿಸಿ ಈ ವೃತ್ತಿಯಲ್ಲಿ ಅಧಿಕ ಸಂಖ್ಯೆಯಲ್ಲಿ ಕಂಡುಬರುವ ಬೇಡನಾಯಕರನ್ನು ಕೇಂದ್ರೀಕರಿಸಿ, ಅವರ ಸಾಂಸ್ಕೃತಿಕ ಅಂಶಗಳ ಕಡೆಗೆ ಹೆಚ್ಚು ಮಹತ್ವ ನೀಡಲಾಗಿದೆ. ಈ ಅಧ್ಯಯನಕ್ಕೆ ಸಂಬಂಧಿಸಿದಂತೆ ಈವರೆಗೆ ಪ್ರಕಟಗೊಂಡ ಪ್ರಾಚೀನ ಕನ್ನಡ ಕಾವ್ಯ, ನಾಟಕ, ಕಥೆ, ವಚನ, ಜಾನಪದ ಸಾಹಿತ್ಯ, ದೇಸಿ–ವಿದೇಶಿ ಬರಹಗಳು ಮತ್ತು ಶಾಸನ, ವೀರಗಲ್ಲು, ಸ್ಮಾರಕ, ಆಯುಧಗಳು ಮುಂತಾದ ಆಕರಗಳನ್ನು ಬಳಸಿಕೊಳ್ಳಲಾಗಿದೆ. ಈ ಆಕರಗಳಲ್ಲಿ ತಳವಾರರ ಕುರಿತಾಗಿ ಉಕ್ತವಾಗಿರುವ ಭಾಗಗಳನ್ನು ಸಂಗ್ರಹಿಸಿ ಚರ್ಚಿಸಲಾಗಿದೆ ಹಾಗೂ ಕ್ಷೇತ್ರಕಾರ್ಯ ಮತ್ತು ವಕ್ತೃಗಳ ಹೇಳಿಕೆಗಳ ಆಧಾರದಿಂದ ತಳವಾರರ ಸಾಂಸ್ಕೃತಿಕ ಸಂಗತಿಗಳನ್ನು ವಿಶ್ಲೇಷಿಸಲಾಗಿದೆ.

ಪ್ರಾಚೀನ ಕಾಲದಿಂದ ಇಂದಿನವರೆಗೆ ಬೇಡ ನಾಯಕರಲ್ಲಿ ಪ್ರಚಲಿತವಿರುವ ತಳವಾರಿಕೆಯನ್ನು ಬಹುಮುಖಿ ಆಕರಗಳನ್ನು ಬಳಸಿಕೊಂಡು ತಳವಾರರ ಉಗಮ, ವಿಕಾಸ ಹಾಗೂ ಸಮಕಾಲೀನ ಸಂದರ್ಭದಲ್ಲಿ ತಳವಾರರ ಸ್ಥಿತಿಗತಿಯನ್ನು ಕುರಿತು ಒಂಬತ್ತು ಅಧ್ಯಾಯಗಳಲ್ಲಿ ಅಧ್ಯಯ ಮಾಡಿ ಚರ್ಚಿಸಲಾಗಿದೆ.

ಅಧ್ಯಾಯ ಒಂದರಲ್ಲಿ ಅಧ್ಯಯನದ ಉದ್ದೇಶ, ವ್ಯಾಪ್ತಿ ಹಾಗೂ ಇದುವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ ಮಾಡಲಾಗಿದೆ.

ಅಧ್ಯಾಯ ಎರಡರಲ್ಲಿ ತಳವಾರ ಪದದ ನಿಷ್ಪತ್ತಿ, ತಳವಾರರ ಹಿನ್ನೆಲೆ ಮತ್ತು ಅವರ ಚಾರಿತ್ರಿಕ ಅಧ್ಯಯನಕ್ಕೆ ಪೂರಕವಾಗಿ ಪರಂಪರೆ ಹಾಗೂ ಪೌರಾಣಿಕ ಸಂಗತಿಗಳನ್ನು ಚರ್ಚಿಸಲಾಗಿದೆ.

ಅಧ್ಯಾಯ ಮೂರರಲ್ಲಿ ಪ್ರಾಚೀನ ಕನ್ನಡ ಸಾಹಿತ್ಯ, ಕಾವ್ಯ, ನಾಟಕ, ಕಥೆ, ವಚನ, ಕೈಫಿಯತ್ತು, ಜಾನಪದ ಸಾಹಿತ್ಯ ಮತ್ತು ಶಾಸನ, ವೀರಗಲ್ಲುಗಳು, ಸ್ಮಾರಕಗಳನ್ನು ಅವಲೋಕಿಸಿ ತಳವಾರರ ಕುರಿತು ಮಾಹಿತಿಯನ್ನು ಸಂಗ್ರಹಿಸಿ ವಿಶ್ಲೇಷಿಸಲಾಗಿದೆ.

ಅಧ್ಯಾಯ ನಾಲ್ಕರಲ್ಲಿ ತಳವಾರರ ವೃತ್ತಿ ಮತ್ತು ಜೀವನ ಕುರಿತಾಗಿ ತಳವಾರಿಕೆ ಹಿನ್ನೆಲೆ ಮತ್ತು ಪರಂಪರೆಯನ್ನು ನಾಯಕ ಮತ್ತು ನಾಯಕೇತರ ತಳವಾರರು ಎಂಬ ಘಟಕದ ಮೂಲಕ ಚರ್ಚಿಸಲಾಗಿದೆ.

ಅಧ್ಯಾಯ ಐದರಲ್ಲಿ ತಳವಾರರ ಕೌಟುಂಬಿಕ ವ್ಯವಸ್ಥೆ, ಕುಲಗೋತ್ರ, ಬೆಡಗು, ವಸತಿ ಮುಂತಾದ ಸಂಗತಿಗಳನ್ನು ತಳವಾರರ ಸಾಮಾಜಿಕ, ಆರ್ಥಿಕ, ರಾಜಕೀಯ, ಧಾರ್ಮಿಕ ವ್ಯವಸ್ಥೆಯ ಸ್ಥಿತ್ಯಂತರಗಳನ್ನು ಕುರಿತು ಅಧ್ಯಯನಿಸಲಾಗಿದೆ.

ಅಧ್ಯಾಯ ಆರರಲ್ಲಿ ತಳವಾರರ ಸಾಂಸ್ಕೃತಿಕ ಬದುಕು, ಸಂಪ್ರದಾಯ, ಆಚರಣೆಗಳು ಅವರ ಮದುವೆ ಸಂಪ್ರದಾಯ, ಹಬ್ಬ-ಹರಿದಿನಗಳು, ಧಾರ್ಮಿಕ ವಿಧಿವಿಧಾನಗಳು, ಬೇಟೆ ಪದ್ಧತಿ, ನಂಬಿಕೆ ಮತ್ತು ನಿಷೇಧಗಳು, ಮನರಂಜನೆ ಮತ್ತು ಕ್ರೀಡೆಗಳು ಇವುಗಳ ಹಿನ್ನೆಲೆಯಲ್ಲಿ ಅವರ ಸಾಂಸ್ಕೃತಿಕ ಬದುಕನ್ನು ವಿವೇಚಿಸಲಾಗಿದೆ.

ಅಧ್ಯಾಯ ಏಳರಲ್ಲಿ ತಳವಾರರ ಸಾಮಾಜಿಕ ಸಹಭಾಗಿತ್ವ ಮತ್ತು ಇತರೆ ಸಮುದಾಯ ಗಳೊಂದಿಗಿನ ಸಾಂಸ್ಕೃತಿಕ ಬಾಂಧವ್ಯವನ್ನು ಕ್ಷೇತ್ರಕಾರ್ಯದ ಮಾಹಿತಿ ಆಧರಿಸಿ ಚರ್ಚಿಸಲಾಗಿದೆ.

ಅಧ್ಯಾಯ ಎಂಟರಲ್ಲಿ ಕರ್ನಾಟಕದಲ್ಲಿ ಪ್ರಸ್ತುತ ದಿನಮಾನದಲ್ಲಿ ತಳವಾರರು ಎದುರಿಸುತ್ತಿರುವ ಪ್ರಮುಖ ಸಮಸ್ಯೆ ಸವಾಲುಗಳ ಕುರಿತಾಗಿ ಚರ್ಚಿಸಲಾಗಿದೆ ಹಾಗೂ ತಳವಾರಿಕೆ ವೃತ್ತಿಯಲ್ಲಾದ ಸ್ಥಿತ್ಯಂತರಗಳಿಗೆ ಕಾರಣ ಮತ್ತು ಪರಿಣಾಮಗಳ ಕುರಿತಾಗಿ ವಿಶ್ಲೇಷಿಸಲಾಗಿದೆ.

ಅಧ್ಯಾಯ ಒಂಬತ್ತರಲ್ಲಿ ಒಟ್ಟಾರೆ ಅಧ್ಯಯನದ ಸಾರಂಶ, ಫಲಿತ ಹಾಗೂ ಕಂಡುಕೊಂಡ ಸಮಸ್ಯೆ ಸವಾಲುಗಳು ಮತ್ತು ತಳವಾರರ ಒಟ್ಟಾರೆ ಚಿತ್ರಣವನ್ನು ಸಮಾರೋಪದ ಮೂಲಕ ವಿಶ್ಲೇಷಿಸಲಾಗಿದೆ. ಕೊನೆಯಲ್ಲಿ ವಕ್ತೃಗಳ ವಿವರ, ಛಾಯಾಚಿತ್ರಗಳನ್ನು ಪರಾಮರ್ಶನ ಗ್ರಂಥಗಳನ್ನು ಹಾಕಲಾಗಿದೆ.

## ಅಧ್ಯಯನದ ವೈಧಾನಿಕತೆ

ಸಾಹಿತ್ಯ ಮತ್ತು ಇತರ ಪೂರಕ ಆಕರಗಳ ಮಾಹಿತಿಯೊಂದಿಗೆ 'ಕರ್ನಾಟಕ ತಳವಾರರು: ಸಾಂಸ್ಕೃತಿಕ ಅಧ್ಯಯನ' ಕೈಗೊಳ್ಳಲಾಗಿದೆ. ಈ ಅಧ್ಯಯನಕ್ಕೆ ಕ್ಷೇತ್ರಕಾರ್ಯದ ಮಾಹಿತಿಯನ್ನು ಪ್ರಮುಖ ಆಕರವಾಗಿ ಬಳಸಿ ಪೂರಕ ಆಕರಗಳಾಗಿ ಕನ್ನಡ ಸಾಹಿತ್ಯ, ಶಾಸನ, ವೀರಗಲ್ಲು, ಸ್ಮಾರಕಗಳನ್ನು ಬಳಸಿಕೊಳ್ಳಲಾಗಿದೆ. ಅಂದರೆ ತಳವಾರಿಕೆ ಕುರಿತು ಕೆಲವು ವಿದ್ವಾಂಸರ ಬರಹಗಳು, ಲೇಖನಗಳು, ಕೃತಿಗಳು, ಶಾಸನಗಳು ಆಕರಗಳಾಗಿವೆ. ಇವುಗಳಿಂದ ವಿಷಯ ಸಂಗ್ರಹಣೆ ಜೊತೆ ಜೊತೆಗೆ ಅವುಗಳನ್ನು ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಹೀಗಾಗಿ ಈ ಅಧ್ಯಯನವು ಆಕರಮುಖಿ ಮತ್ತು ವಿಶ್ಲೇಷಣೆಮುಖಿ ಮಾದರಿ ವಿಧಾನ ಹೊಂದಿದೆ. ತಳವಾರರು ಮತ್ತು ತಳವಾರಿಕೆ ಕುರಿತು ಪ್ರಾಚೀನ ಕನ್ನಡ ಕಾವ್ಯ, ಗದ್ಯ, ಶಾಸನ, ಜಾನಪದ ಸಾಹಿತ್ಯಗಳಲ್ಲಿ ಉಲ್ಲೇಖಗಳಿರುವುದರಿಂದ ಅವುಗಳ ವಿಶ್ಲೇಷಣಾತ್ಮಕ ವಿಧಾನವನ್ನು ಅನುಸರಿಸಲಾಗಿದೆ.

ಪ್ರಸ್ತುತ ಅಧ್ಯಯನಕ್ಕೆ ಮಾಹಿತಿ ಸಂಗ್ರಹಣೆ ಮುಖ್ಯವಾಗಿದೆ. ಆ ಕಾರಣದಿಂದ ಉತ್ತರ ಕರ್ನಾಟಕ ಹಲವು ಜಿಲ್ಲೆಗಳಲ್ಲಿ ಕ್ಷೇತ್ರಕಾರ್ಯ ಕೈಗೊಂಡು ಅವಲೋಕನ ಮತ್ತು ಸಂದರ್ಶನ ವಿಧಾನಗಳನ್ನು ಬಳಸಲಾಗಿದೆ. ಮಾಹಿತಿ ಸಂಗ್ರಹಣೆಯಲ್ಲಿ ನೇರವಾಗಿ ತಳವಾರರನ್ನು, ಊರಿನ ಹಿರಿಯರನ್ನು ಹಾಗೂ ವಿದ್ಯಾವಂತ ಯುವಕರನ್ನು ಸಂದರ್ಶಿಸಿ ಪ್ರಶ್ನಾವಳಿ ಮೂಲಕ ಮಾಹಿತಿ ಪಡೆಯಲಾಗಿದೆ. ಅಧ್ಯಯನದ ಅನುಕೂಲಕ್ಕಾಗಿ ಉತ್ತರ ಕರ್ನಾಟಕದ ಜಿಲ್ಲೆಗಳಲ್ಲಿ ಆಯ್ದ ಗ್ರಾಮಗಳ ಕ್ಷೇತ್ರಕಾರ್ಯ ಕೈಗೊಂಡು ಪ್ರಶ್ನಾವಳಿ ಮೂಲಕ ವಕ್ತೃಗಳಿಂದ ಮಾಹಿತಿ ಸಂಗ್ರಹಿಸಿ, ರೆಕಾರ್ಡ್ ಮಾಡಲಾಗಿದೆ ಹಾಗೂ ಅವರ ಹೇಳಿಕೆಗಳನ್ನು ನಿರ್ವಚಿಸುವ ವಿಧಾನಗಳನ್ನು ಈ ಮಹಾಪ್ರಬಂಧ ಒಳಗೊಂಡಿದೆ.

ತಳವಾರರ ಸಾಂಸ್ಕೃತಿಕ ಬದುಕಿನಲ್ಲಿ ಜೀವನಾವರ್ತನ ಆಚರಣೆಗಳು, ಸಂಪ್ರದಾಯ, ನಂಬಿಕೆ, ನಿಷೇಧ, ಮನೋರಂಜನೆ ಹಾಗೂ ಕಾರ್ಯ ಕರ್ತವ್ಯಗಳ ಕುರಿತಾದ ಮಾಹಿತಿಯನ್ನು ವರ್ತಮಾನದ ಆಲೋಚನೆ ಮೂಲಕ ಶೋಧಿಸುವ ಹಾಗೂ ಅರ್ಥೈಸುವ ಸಾಂಸ್ಕೃತಿಕ ವಿಧಾನವನ್ನು ಈ ಸಂಶೋಧನೆಯಲ್ಲಿ ಒಳಪಡಿಸಲಾಗಿದೆ.

ತಳವಾರಿಕೆಗೆ ಸಂಬಂಧಿಸಿದಂತೆ ಸಾಹಿತ್ಯ ಮತ್ತು ಕ್ಷೇತ್ರದ ಮಾಹಿತಿಗಳು ಪರಸ್ಪರ ಅಂತರ್ ಸಂಬಂಧ ಹೊಂದಿದ್ದು ಅವುಗಳಲ್ಲಿನ ಸಾಂಸ್ಕೃತಿಕ ಅಂಶಗಳನ್ನು ಶೋಧಿಸುವುದು ಇಲ್ಲಿಯ ಪ್ರಮುಖ ವಿಧಾನವಾಗಿದೆ. ಒಟ್ಟಾರೆಯಾಗಿ ಈ ಅಧ್ಯಯನವು ಬಹುಮುಖಿ ಆಕರಗಳ ಸಂಗ್ರಹ ಮತ್ತು ವಿಶ್ಲೇಷಣಾತ್ಮಕ ಮಾದರಿ ಅಧ್ಯಯನದೊಂದಿಗೆ ಕ್ಷೇತ್ರಕಾರ್ಯ ಆಧಾರಿತ ಅಧ್ಯಯನವಾಗಿದೆ.

## ಅಧ್ಯಯನದ ಸಮೀಕ್ಷೆ

ಕರ್ನಾಟಕದಲ್ಲಿ ಈವರೆಗೆ ತಳವಾರರನ್ನು ಮತ್ತು ತಳವಾರಿಕೆಯನ್ನು ಕುರಿತು ಪ್ರತ್ಯೇಕವಾಗಿ ಅಧ್ಯಯನ ಮಾಡಿಲ್ಲ. ವಿರೂಪಾಕ್ಷಿ ಪೂಜಾರಹಳ್ಳಿಯವರ 'ಕರ್ನಾಟಕದಲ್ಲಿ ತಳವಾರಿಕೆ' ಕೃತಿಯು ತಳವಾರಿಕೆಯ ಚಾರಿತ್ರಿಕ ಹಿನ್ನೆಲೆಗೆ ಮಹತ್ವ ನೀಡಲಾಗಿದೆ ಹೊರತು ಸಾಂಸ್ಕೃತಿಕ ಅಂಶಗಳ ಕಡೆ ಮಹತ್ವ ನೀಡಿಲ್ಲ. ನಾಯಕ ಸಮುದಾಯವನ್ನು ಪರಿಚಯಿಸುವಾಗ ತಳವಾರರನ್ನು ಅಲ್ಲಲ್ಲಿ ಆಂಶಿಕವಾಗಿ ಪ್ರಸ್ತಾಪಿಸಿದ್ದಾರೆ. ಬ್ರಿಟಿಷರ ಕಾಲದ ಗ್ಯಾಸೆಟಿಯರ್, ಎಡ್ಗರ್ ಥರ್ಸ್ಟನ್ ಮತ್ತು ಕೆ.ರಂಗಾಚಾರಿಯವರ ಜನಾಂಗಿಕ ಅಧ್ಯಯನಗಳು, ಮೆಕೆಂಜಿ ಕೈಫಿಯತ್ತುಗಳು, ಫ್ಲೀಟರು ಸಂಗ್ರಹಿಸಿದ ಲಾವಣಿಗಳು, ಶಾಸನಗಳು, ವೀರಗಲ್ಲುಗಳು ಇತರ ಆಕರಗಳು ಈ ವ್ಯವಸ್ಥೆಯನ್ನು ಸ್ವಲ್ಪಮಟ್ಟಿಗೆ ಅನಾವರಣಗೊಳಿಸುತ್ತವೆ. ತಳವಾರರ ಕುರಿತಾಗಿ ಅಲ್ಲಲ್ಲಿ ಬಿಡಿ ಬಿಡಿ ಲೇಖನಗಳು ಪ್ರಕಟವಾಗಿವೆ. ಅದರಲ್ಲಿ ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆಯಲ್ಲಿ ೧೯೫೭ ಡಿಸೆಂಬರ್‌ನಲ್ಲಿ ಪ್ರಕಟವಾದ 'ತಳವಾರ'ಎಂಬ ಲೇಖನವನ್ನು ದೇಸಾಯಿ ಪಾಂಡುರಂಗರಾಯರು ಬರೆದಿದ್ದಾರೆ. ಈ ಲೇಖನದಲ್ಲಿ ತಳವಾರ ಎಂಬ ಪದ ಅಧಿಕಾರ ಸೂಚಕವಾದುದು. ಕ್ರಿ.ಶ.೩ನೇ ಶತಮಾನದಲ್ಲಿ ಆಳಿದ ಇಕ್ಷ್ವಾಕು ಕುಲದ

ಅರಸರು ಮೊದಲು ಶಾತವಾಹನರ ಮಂಡಲಾಧಿಕಾರಿಗಳಾಗಿದ್ದರು. ತತ್ ಸೂಚಕವಾಗಿ ಅವರು 'ಮಹಾ ತಲವರ' ಎಂಬ ಪ್ರಶಸ್ತಿಯನ್ನು ಗೌರವಪೂರ್ವಕವಾಗಿ ಧರಿಸಿದ್ದರು. ಪುರಷರು ಮಾತ್ರ ವಲ್ಲ ಸ್ತ್ರೀಯರು 'ಮಹಾತಲವರಿ'ಎಂಬ ಪ್ರಶಸ್ತಿಯನ್ನು ಅಭಿಮಾನದಿಂದ ಧರಿಸಿದ್ದನ್ನು ವಿವರಿಸಿದ್ದಾರೆ. 'ಮಹಾತಲವರ' ನನ್ನು ಮಹಾ ಮಂಡಲೇಶ್ವರ ಎಂಬ ಉನ್ನತಾಧಿಕಾರಿಗೆ ಹೋಲಿಸಿದ್ದಾರೆ. ಮಂಡಲೇಶ್ವರನು ಬೆಳೆದು ಮಹಾಮಂಡಲೇಶ್ವರನಾದಂತೆ, ತಲವರ, ಮಹಾ ತಲವರನಾಗಿರಬೇಕೆಂದು ಊಹಿಸಿದ್ದಾರೆ. ಆದರೆ ಇವುಗಳಲ್ಲಿ ಯಾವುದೇ ರೀತಿಯ ಸಮಗ್ರ ಮತ್ತು ವ್ಯಾಪಕ ಅಧ್ಯಯನ ನಡೆದಿಲ್ಲ. ಈ ಕೊರತೆಯನ್ನು ಪಸ್ತುತ ಅಧ್ಯಯನವು ತಕ್ಕಮಟ್ಟಿಗೆ ನೀಗಬಲ್ಲದೆಂದು ಭಾವಿಸಿದ್ದೇನೆ.

ತಳವಾರರ ಮೂಲ ಶಬ್ದವಾದ 'ತಲವರ'ದ ನಿಷ್ಪತ್ತಿಯನ್ನು ಸಂಸ್ಕೃತ ಪದಗಳಾದ 'ಸ್ಥಲ' ಮತ್ತು 'ವರ'ಎಂಬ ಶಬ್ದದಿಂದ ಪ್ರಸ್ತುತಪಡಿಸಿದ್ದಾರೆ. 'ಸ್ಥಲ'ಎಂದರೆ ಪ್ರದೇಶ 'ವರ'ಎನ್ನುವುದಕ್ಕೆ ಮುಖ್ಯ, ಪ್ರಮುಖ ಅಧಿಕಾರಿ, ಒಂದು ಪ್ರದೇಶದ ಪ್ರಮುಖ ಅಧಿಕಾರಿಯನ್ನು 'ಸ್ಥಲವರ' ಎಂದು ಅರ್ಥೈಸಿದ್ದಾರೆ. ಇವರ ಲೇಖನದಲ್ಲಿ ಮೊದಲು ತಳವಾರ ಶಬ್ದ ಉಲ್ಲೇಖ ಮತ್ತು ನಿಷ್ಪತ್ತಿಯ ಬಗೆಗೆ ಮಾತ್ರ ವಿಶ್ಲೇಷಣೆ ನೀಡಿದ್ದಾರೆ.

'ಜಾನಪದ ಪರಿಕ್ರಮ'ಎಂಬ ಜಾನಪದ ಲೇಖನಗಳ ಸಂಗ್ರಹದಲ್ಲಿ ಶ್ರೀರಾಮ ಇಟ್ಟಣ್ಣವರು 'ತಳವಾರ' ಎಂಬ ಲೇಖನವನ್ನು ಬರೆದಿದ್ದಾರೆ. ಈ ಲೇಖನವು ಹಳ್ಳಿಯ ಸೇವೆಗೆ ಅಂಟಿಕೊಂಡ ತಳವಾರರ ಕುರಿತಾಗಿ ಅಲ್ಪಮಟ್ಟಿನ ಬೆಳಕು ಚೆಲ್ಲುತ್ತದೆ. ತಳವಾರ ಎಂಬ ಶಬ್ದವನ್ನು ಇವರು ಸಮಾಸ ಪದವೆಂದು ಹೇಳಿ, ತಳ+ವಾರ=ತಳವಾರ; 'ತಳ' ಎಂದರೆ ಹುಟ್ಟೂರು, 'ಪಾರ' ಎಂಬುದಕ್ಕೆ ಸಂರಕ್ಷಣೆ ಎಂದು ಅರ್ಥೈಸಿದ್ದಾರೆ. ತಳವಾರನನ್ನು ಕಾವಲುಗಾರ, ಗ್ರಾಮರಕ್ಷಕ, ನಗರ–ರಕ್ಷಕ ಎಂದು ಅರ್ಥೈಸುತ್ತಾರೆ. ಇದಕ್ಕೆ ಉದಾಹರಣೆಯಾಗಿ ವಡ್ಡಾರಾಧನೆಯ ಕಥೆಗಳನ್ನು, ವಚನಗಳಲ್ಲಿನ ಉಲ್ಲೇಖಗಳನ್ನು ವಿಶ್ಲೇಷಿಸಿದ್ದಾರೆ. ತಳವಾರನಿಗೆ ಸಮೀಪವರ್ತಿಯಾದ ಓಲೆಕಾರಿಕೆ, ಕೋಲುಕಾರಿಕೆಯನ್ನು 'ಹಳಬ'ರೆಂದು ಪರ್ಯಾಯ ಹೆಸರಿನಿಂದ ವಿವೇಚಿಸಿದ್ದಾರೆ ಹಾಗೂ ತಳವಾರಿಕೆ ವೃತ್ತಿಯನ್ನು ಕೈಗೊಂಡ ವಿವಿಧ ಸಮುದಾಯದವರನ್ನು ಅವರು ಕೈಗೊಂಡ ಕ್ಷೇತ್ರಕಾರ್ಯದ ಮಾಹಿತಿಯಿಂದ ತಿಳಿಸಿದ್ದಾರೆ. ಜೊತೆಗೆ ಗ್ರಾಮಾಡಳಿತ ರದ್ಧತಿ ಕಾಯಿದೆಯಿಂದಾಗಿ ಇಂದಿನ ಸಮಕಾಲೀನ ಸಂದರ್ಭದಲ್ಲಿ ತಳವಾರನ ಕಾರ್ಯ, ಕರ್ತವ್ಯ, ಸ್ಥಾನಮಾನಗಳ ಕುರಿತು ಚರ್ಚಿಸಿದ್ದಾರೆ. ಜಾನಪದ ಆಚರಣೆಗಳಲ್ಲಿ ತಳವಾರನು ಹೇಗೆ ಹೀಯಾಳಿಸಲ್ಪಡುತ್ತಾನೆ ಎಂಬುದನ್ನು ಗುಳ್ಳವ್ವನ ಹಾಡುಗಳ ಮೂಲಕ ಪ್ರಸ್ತುತಪಡಿಸಿದ್ದಾರೆ. ಒಟ್ಟಿನಲ್ಲಿ ತಳವಾರರ ಕುರಿತಾಗಿ ಉತ್ತರ ಕರ್ನಾಟಕದ ಕೆಲವು ಜಾನಪದ ಆಚರಣೆ ಮತ್ತು ವಚನ, ಶಾಸನ, ತ್ರಿಪದಿ ಗಳಿಂದ ಮತ್ತು ಅವರ ಅನುಭವಕ್ಕೆ ಬಂದ ತಳವಾರಿಕೆ ಕುರಿತಾಗಿ ಈ ಲೇಖನದಲ್ಲಿ ವಿಶ್ಲೇಷಿಸಿದ್ದಾರೆ. ಈ ಲೇಖನದಲ್ಲಿ ಸಮಗ್ರವಾಗಿ ಅಲ್ಲದಿದ್ದರೂ ಅಲ್ಪ ಪ್ರಮಾಣದಲ್ಲಿ ವಿವಿಧ ಆಕರಗಳ ಮೂಲಕ ತಳವಾರಿಕೆ ಕುರಿತಾಗಿ ವಿವರಣೆ ನೀಡಿದ್ದಾರೆ.

## ಕರ್ನಾಟಕದಲ್ಲಿ ತಳವಾರಿಕೆ

ವಿರೂಪಾಕ್ಷಿ ಪೂಜಾರಹಳ್ಳಿ ಅವರು ರಚಿಸಿರುವ 'ಕರ್ನಾಟಕದಲ್ಲಿ ತಳವಾರಿಕೆ' ಎಂಬ ಕೃತಿಯು ಕನ್ನಡದಲ್ಲಿ ತಳವಾರಿಕೆ ಮತ್ತು ತಳವಾರರ ಕುರಿತಾಗಿ ಬಂದ ಪ್ರಥಮ ಕೃತಿಯಾಗಿದೆ. ಈ ಕೃತಿ ತಳವಾರರನ್ನು ಐತಿಹಾಸಿಕವಾಗಿ ಹಾಗೂ ಚಾರಿತ್ರಿಕವಾಗಿ ಮತ್ತು ಪ್ರಸ್ತುತ ಕಾಲಮಾನದಲ್ಲಿ ಅವರ ಸ್ಥಾನಮಾನಗಳನ್ನು ಕುರಿತು ಕ್ಷೇತ್ರಕಾರ್ಯದ ಮೂಲಕ ಸಮಗ್ರವಾಗಿ ಅಲ್ಲದಿದ್ದರೂ ಸ್ಥೂಲವಾಗಿ ಅಧ್ಯಯನ ಮಾಡಿದ್ದಾರೆ. 'ತಳವಾರ' ಎನ್ನುವ ಹೆಸರು ಮತ್ತು ವೃತ್ತಿಯ ವಿವರವಾದ ಅಧ್ಯಯನದಿಂದ ತೊಡಗಿ ಇತಿಹಾಸದ ಬೇರೆ ಬೇರೆ ಸಂದರ್ಭಗಳಲ್ಲಿ ತಳವಾರರ ಪಾಲ್ಗೊಳ್ಳುವಿಕೆಯನ್ನು ಇಲ್ಲಿ ವಿವೇಚಿಸಲಾಗಿದೆ. ಇದಕ್ಕಾಗಿ ಇವರು ಲಿಖಿತ ಹಾಗೂ ಮೌಖಿಕ ಮೂಲದಿಂದ ಮಾಹಿತಿ ಸಂಗ್ರಹಿಸಿದ್ದಾರೆ. ಇವರ ಈ ಅಧ್ಯಯನದಲ್ಲಿ ತಳವಾರರ ಕುರಿತಾಗಿ ಚಾರಿತ್ರಿಕ ಮತ್ತು ಐತಿಹಾಸಿಕ ಮಾಹಿತಿಗೆ ಹೆಚ್ಚು ಮಹತ್ವ ನೀಡಿದ್ದಾರೆ.

ಮೊದಲನೇ ಅಧ್ಯಾಯದಲ್ಲಿ ತಳವಾರರು ಯಾರು? ಅವರ ಹಿನ್ನೆಲೆ, ಸಂಸ್ಕೃತಿ, ಪರಂಪರೆಯ ಬಗ್ಗೆ ಸೂಕ್ತ ಮಾಹಿತಿ ನೀಡಿದ್ದಾರೆ. ಎರಡನೇ ಅಧ್ಯಾಯದಲ್ಲಿ 'ಕರ್ನಾಟಕದಲ್ಲಿ ವಾಲ್ಮೀಕಿ, ನಾಯಕ, ತಳವಾರರ ಸಂಕ್ಷಿಪ್ತ ಪರಿಚಯಾತ್ಮಕ ಇತಿಹಾಸವನ್ನು ಒದಗಿಸಿಕೊಡುತ್ತಾರೆ. ಭಾರತದಲ್ಲಿರುವ ಆದಿ ಮತ್ತು ಪ್ರಾಚೀನ ಬುಡಕಟ್ಟುಗಳಲ್ಲಿ ನಾಯಕ ಸಮುದಾಯವೂ ಒಂದು ಎಂಬುದಕ್ಕೆ ಅಗತ್ಯ ದಾಖಲೆಗಳನ್ನು ಒದಗಿಸಿದ್ದಾರೆ. ವಾಲ್ಮೀಕಿ ಸಮುದಾಯದ ಪೌರಾಣಿಕ ಪರಂಪರೆಯನ್ನು ಪ್ರಸಿದ್ಧ ಋಷಿ ವಾಲ್ಮೀಕಿಯಿಂದ ಹಿಡಿದು ದ್ವಾಪರಯುಗದ ಪಾಂಡವರು, ಕೌರವರು, ಏಕಲವ್ಯರ ಶೌರ್ಯ, ಸಂಘರ್ಷಗಳ ಬಗ್ಗೆ ವಿವರವಾದ ಮಾಹಿತಿ ನೀಡಿದ್ದಾರೆ. ಹಾಗೆಯೇ ಐತಿಹಾಸಿಕ ಪರಂಪರೆಯನ್ನು ಬೇಡರಕಣ್ಣಪ್ಪನಿಂದ ಹಿಡಿದು ಕರ್ನಾಟಕದಲ್ಲಿ ಮೊದಲ ನಾಯಕ ರಾಜ್ಯ ಸ್ಥಾಪಿಸಿದ ಕುಮ್ಮಟದುರ್ಗದ ಪಾಳೆಯಗಾರರನ್ನು ಹಾಗೂ ವಿವಿಧ ಅರಸು ಮನೆತನಗಳನ್ನು ಪರಿಚಯಿಸುತ್ತ ಕಂಪಿಲರಾಯ, ಕುಮಾರರಾಮ ಮತ್ತು ವಿಜಯನಗರ ಸಾಮ್ರಾಜ್ಯದ ಹರಿಹರ–ಬುಕ್ಕ, ನರಸನಾಯಕ, ಶ್ರೀಕೃಷ್ಣದೇವರಾಯರ ಕಾಲದವರೆಗಿನ ತಳವಾರರ ಕುರಿತಾದ ವಿವರಗಳು, ಅವರ ವೃತ್ತಿ–ಕೌಶಲ್ಯಗಳ ಕುರಿತಾದ ವಿವರವಾದ ಮಾಹಿತಿಯನ್ನು ಒದಗಿಸಿದ್ದಾರೆ.

ಸ್ವಾತಂತ್ರ್ಯ ಬಂದ ನಂತರ ನಾಯಕ–ತಳವಾರರಲ್ಲಿ ಆದ ಪ್ರಮುಖ ಬದಲಾವಣೆಗೆ ಸಕಾರಣಗಳನ್ನು ಸೂಕ್ತವಾಗಿ ಒದಗಿಸಿದ್ದಾರೆ. ಬ್ರಿಟಿಷರ ದಬ್ಬಾಳಿಕೆಯಿಂದ ತಳವಾರರು ಅನಕ್ಷರತೆ, ಮುಗ್ಧತೆಗಳಿಂದ ಬಲಿಷ್ಠರ ಅಡಿ ಆಳಾಗಿ, ರಕ್ಷಣೆಯ ಜವಾಬ್ದಾರಿಯನ್ನು ಹೆಗಲ ಮೇಲೆ ಹೊತ್ತು, ಈ ನಾಡಿಗೆ ತಮ್ಮ ಕಾಣಿಕೆ ಸಲ್ಲಿಸುವುದರ ಬಗೆಗೆ ಮಾಹಿತಿ ನೀಡಿದ್ದಾರೆ. ಮುಂದಿನ ಅಧ್ಯಾಯಗಳಲ್ಲಿ ತಳವಾರಿಕೆಯ ಚಾರಿತ್ರಿಕ ಹಿನ್ನೆಲೆಯನ್ನು ಕುರಿತಾಗಿ 'ತಳವಾರ' ಎಂಬ ಪದದ ವಿಶ್ಲೇಷಣೆ ಮಾಡಿದ್ದಾರೆ.

'ತಳವಾರ' ಎಂಬುದು ಒಂದು ವೃತ್ತಿಸೂಚಕ ಪದವಾಗಿದ್ದು, ಇದೇ ಮುಂದೆ ಜಾತಿ ಸೂಚಕವಾಗಿಯೂ ಪ್ರಚಲಿತದಲ್ಲಿದೆ. 'ತಳವಾರ' ಎಂದರೆ ಊರಿನ ಕಾವಲುಗಾರ; ಗ್ರಾಮರಕ್ಷಕ, ಸಂರಕ್ಷಕ ಎಂಬ ಅರ್ಥಗಳನ್ನು ಪಡೆದುಕೊಂಡಿದೆ. ಕನ್ನಡ ಕಾವ್ಯ ಮತ್ತು ಶಾಸನಗಳಲ್ಲಿ 'ತಳಾರ', 'ತಳವಾರ', 'ತಲಕಾರ', 'ತಳಾರಿ' ಎಂದೆಲ್ಲಾ ಉಲ್ಲೇಖಗಳಿವೆ. ತಳವಾರ ಎಂಬುದು ಸೇವಾವರ್ಗದ ಹೆಸರು. ಈ ಪದ ಮೂಲತಃ 'ತಲಕಾರ'ದಿಂದ ವಿಕಾಸವಾಗಿದೆ ಎಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಹಾಗೆಯೇ ತಳವಾರನ ಕರ್ತವ್ಯ ಲಕ್ಷಣಗಳು ಹಾಗೂ ಪರಂಪರೆ ಕುರಿತಾಗಿ ಊರಿನ ಕಾವಲು ಕಾಯುವುದು, ತಪ್ಪಿತಸ್ಥರನ್ನು ಶಿಕ್ಷಿಸುವುದು ತಳವಾರನ ಪ್ರಮುಖ ಕರ್ತವ್ಯವಾಗಿತ್ತು. ಇವರು ರಾಜಕೀಯವಾಗಿ ಹಾಗೂ ಸಾಮಾಜಿಕವಾಗಿ ಕೊನೆಯ ಸ್ಥಾನದಲ್ಲಿದ್ದವ ರೆಂದು ಉಲ್ಲೇಖಿಸಿದ್ದಾರೆ. ಇವರ ಸಾಹಸಪ್ರವೃತ್ತಿ, ದೇಹ ರಚನೆ, ಧೈರ್ಯಶಾಲಿತನದಿಂದ ಸದಾ ಸಾಹಸ ಕಾರ್ಯಗಳಲ್ಲಿ ನಿರತರಾಗಿರುತ್ತಿದ್ದರು. ಅಂದಿನ ಅರಸರ ಅಂಗರಕ್ಷಕರಾಗಿ, ಸೇನಾ ಮುಖಂಡರಾಗಿ, ಊರಿನ ದಳಪತಿಗಳಾಗಿ ಕಾರ್ಯ ನಿರ್ವಹಿಸಿರುವುದರ ಬಗ್ಗೆ ಆಧಾರಸಹಿತ ದಾಖಲೆಗಳೊಂದಿಗೆ ಮಾಹಿತಿ ಒದಗಿಸಿದ್ದಾರೆ.

ಪ್ರಾಚೀನ ಕರ್ನಾಟಕದಲ್ಲಿ ತಳವಾರಿಕೆ ಕುರಿತಾಗಿ ಶಾತವಾಹನರ ಕಾಲದ 'ಸನ್ನತಿ' ಶಾಸನದಲ್ಲಿ 'ತಳಾರ' ಎಂಬ ಪದ ಬಳಕೆಯಾಗಿರುವುದನ್ನು ಗಮನಿಸಿದರೆ ಅಂದಿನ ಆಡಳಿತ ವ್ಯವಸ್ಥೆಯಲ್ಲಿಯೂ ತಳವಾರನಿದ್ದನೆಂಬ ಮಾಹಿತಿ ತಿಳಿಸಿದ್ದಾರೆ. ಶಾತವಾಹನರ ಕಾಲದಲ್ಲಿ 'ನಾಡ ತಳವಾರ', 'ಮಹಾನಾಡ ತಳವಾರ' ಎಂಬ ಹುದ್ದೆಗಳಿದ್ದವೆಂದು ಉಲ್ಲೇಖಿಸಿದ್ದಾರೆ. ಮಧ್ಯಕಾಲೀನ ಕರ್ನಾಟಕದಲ್ಲಿ ತಳವಾರಿಕೆ ಕುರಿತಾಗಿ ಇದನ್ನು ವಿಜಯನಗರ ಪೂರ್ವಕಾಲವೆಂದು ನಿರ್ಧರಿಸಿ, ಕಲ್ಯಾಣ ಚಾಲುಕ್ಯ, ರಾಷ್ಟ್ರಕೂಟ, ಹೊಯ್ಸಳ, ಕುಮ್ಮಟದುರ್ಗ ಇತರ ಸಣ್ಣ ಪುಟ್ಟ ಸಂಸ್ಥಾನಗಳಲ್ಲಿದ್ದ ತಳವಾರರ ಕುರಿತ ವಿವರಗಳನ್ನು ಸಂಕ್ಷಿಪ್ತವಾಗಿ ವಿವರಿಸಿದ್ದಾರೆ. ಅದೇ ಕಾಲದಲ್ಲಿ ಬಂದ ಪ್ರಮುಖ ಸಾಹಿತ್ಯ ಕೃತಿ ಕಾವ್ಯಗಳಲ್ಲಿಯೂ ಸಹ ತಳವಾರರ ಕುರಿತ ಮಾಹಿತಿಗಳು ದೊರೆಯುತ್ತವೆ. ಉದಾಹರಣೆಗೆ ಶಿವಕೋಟ್ಯಾಚಾರ್ಯನ 'ವಡ್ಡಾರಾಧನೆ'ಯ ಎಲ್ಲ ಕಥೆಗಳಲ್ಲಿಯೂ 'ತಳಾರ'ನ ಬಗೆಗೆ ಪ್ರಸ್ತಾಪವಿದೆ. ಇಲ್ಲಿ ತಳಾರ ಒಬ್ಬ ಗ್ರಾಮರಕ್ಷಕ, ಕಾವಲುಗಾರನಾಗಿ ಕಂಡರೆ. ಅದೇ ರೀತಿ 'ಯಶೋಧರ ಚರಿತೆ'ಯಲ್ಲಿ ರಾಜನ ಆಪ್ತ ಸೇವಕನಾಗಿದ್ದುದರ ಪಾತ್ರಚಿತ್ರಣವಿರುವುದು ಕಂಡುಬಂದಿದೆ.

ವಿಜಯನಗರ ಕಾಲದ ತಳವಾರಿಕೆ ಕುರಿತಾಗಿ ಸುದೀರ್ಘವಾಗಿ ಚರ್ಚಿಸಿದ್ದಾರೆ. ವಿಜಯನಗರ ಕಾಲದ ಚರಿತ್ರೆಯೊಂದಿಗೆ ತಳವಾರ ಎಂಬ ವೃತ್ತಿ ನಿರ್ವಹಿಸಿದ ಬಗ್ಗೆ ವಿಶ್ಲೇಷಿಸಲಾಗಿದೆ. ವಿಜಯನಗರ ಸ್ಥಾಪಕರಾದ ಹರಿಹರ-ಬುಕ್ಕರ ಮೂಲವನ್ನು, ಕುಮ್ಮಟದುರ್ಗದ ಇತಿಹಾಸವನ್ನು, ಸೂಕ್ತವಾಗಿ ತಾಳೆಹಾಕಿ ವಿವೇಚಿಸಿದ್ದಾರೆ. ವಿಜಯನಗರ ಕಾಲದ ಸಂಗಮ, ಸಾಳುವ, ಅರವೀಡು

ವಂಶಗಳ ಪ್ರಮುಖ ಅರಸರು ತಳವಾರಿಕೆಗೆ ಪ್ರೋತ್ಸಾಹ ಕೊಟ್ಟಿದ್ದು, ಗಮನಾರ್ಹವಾದುದು ಎಂಬುದಕ್ಕೆ ಅವರು ನೀಡಿದ ವಿಶೇಷ ಸ್ಥಾನಮಾನ, ಆಡಳಿತದಲ್ಲಿನ ವ್ಯವಸ್ಥೆ ಕುರಿತಾಗಿ ಮಾಹಿತಿಯನ್ನು ನೀಡಿದ್ದಾರೆ.

ವಿಜಯನಗರೋತ್ತರ ಕಾಲದ ತಳವಾರಿಕೆಯನ್ನು ಕುರಿತಾಗಿ ಮುಂದಿನ ಅಧ್ಯಾಯಗಳಲ್ಲಿ ಚರ್ಚಿಸಿದ್ದಾರೆ. ತಳವಾರರಿಗೆಲ್ಲಾ ಪಾಳೆಯಗಾರಿಕೆಗೆ ಬಡ್ತಿ ದೊರೆತಿದ್ದು ಆನಂತರದಲ್ಲಿ ಸ್ವತಂತ್ರ ಪಾಳೆಯಪಟ್ಟುಗಳನ್ನು ನಿರ್ಮಾಣ ಮಾಡಿಕೊಂಡು ಅರಸರಾಗಿ ಮೆರೆದಿದ್ದಾರೆ. ಉದಾಹರಣೆಗೆ ಚಿತ್ರದುರ್ಗದ ಪಾಳೆಯಗಾರರು ಸುರಪುರ ನಾಯಕರು, ಹರಪನಹಳ್ಳಿ ಪಾಳೆಯಗಾರರು ಮುಂತಾದವರ ಬಗೆಗೆ ಸಂಕ್ಷಿಪ್ತ ಮಾಹಿತಿ ದೊರೆಯುತ್ತದೆ. ಮುಂದಿನ ಅಧ್ಯಾಯಗಳಲ್ಲಿ ಬ್ರಿಟಿಷರ ಕಾಲದ ತಳವಾರಿಕೆ ಕುರಿತಾಗಿ ಹಿಂದಿನ ಕಾಲದಲ್ಲಿದ್ದ ವೃತ್ತಿಯಲ್ಲೇ ಕೆಲವರು ಮುಂದುವರಿದರೆ, ಇನ್ನು ಕೆಲವರು ಅದರಲ್ಲೂ ಬಳ್ಳಾರಿ ಜಿಲ್ಲೆಯ ತಳವಾರರು ಗ್ರಾಮೀಣ ವೃತ್ತಿ ಹಾಗೂ ಹುದ್ದೆಗಳಲ್ಲಿದ್ದ ನೌಕರರಂತೆಯೇ ಕಾರ್ಯ ನಿರ್ವಹಿದ್ದರು. ಆನಂತರದಲ್ಲಿ ತಳವಾರರನ್ನು ಗ್ರಾಮಾಧಿಕಾರಿಗಳು ಅಧೀನದಲ್ಲಿಟ್ಟುಕೊಂಡು ಮುಂದೆ ಗ್ರಾಮಸಹಾಯಕರಾಗಿ ಕಾರ್ಯ ನಿರ್ವಹಿಸು ವುದರ ಬಗ್ಗೆ ಮಾಹಿತಿ ನೀಡಿದ್ದಾರೆ.

ಅಧ್ಯಯನಕ್ಕೆ ಸಂಬಂಧಿಸಿದಂತೆ ಈವರೆಗೆ ಪ್ರಕಟಗೊಂಡ ಕಾವ್ಯಗಳನ್ನು ಶಾಸನಗಳನ್ನು ಹಾಗು ಬಿಡಿ ಲೇಖನಗಳನ್ನು ಆಕರಗಳನ್ನಾಗಿ ಮಾತ್ರ ಬಳಸಿಕೊಂಡಿದ್ದಾರೆ. ಶಾಸನ, ಮೌಖಿಕ ಸಾಹಿತ್ಯ ಕ್ಷೇತ್ರ ಅಧ್ಯಯನದ ಮಾಹಿತಿ, ಕಾವ್ಯಗಳನ್ನು ಹೊರತುಪಡಿಸಿ ಶಿಲ್ಪಕಲೆ, ನಾಟಕ, ಕಥೆ ಕಾದಂಬರಿ ಅವಲೋಕಿಸಿಲ್ಲ. ಚರಿತ್ರೆಯ ಸಿದ್ಧಾಂತಗಳ ಹಿನ್ನೆಲೆಯಲ್ಲಿ ಕೇವಲ ಚಾರಿತ್ರಿಕ ಹಾಗೂ ಸಾಮಾಜಿಕ ಹಿನ್ನೆಲೆಯನ್ನು ಗುರುತಿಸುವ ಕಾರ್ಯವನ್ನು ಮಾಡಿರುವುದು ಕಾಣುತ್ತದೆ. ಬೇಡ ನಾಯಕ, ತಳವಾರರ ಮೂಲ, ವೃತ್ತಿಯ ಹಿನ್ನೆಲೆ, ಸಂಸ್ಕೃತಿ, ಆಚಾರ-ವಿಚಾರಗಳ ಕುರಿತಾದ ಮಾಹಿತಿ ವಿವರಿಸಿಲ್ಲ.

ಈ ಎಲ್ಲ ಅಧ್ಯಯನಗಳನ್ನು ಗಮನಿಸಿದಾಗ ತಳವಾರರನ್ನು ಕುರಿತು ಸಮಗ್ರವಾಗಿ ಆಗಲಿ ಬಿಡಿ ಬಿಡಿಯಾಗಿ ಆಗಲಿ, ಅಧ್ಯಯನಗಳು ನಡೆದಿರುವುದಿಲ್ಲ. ಹಾಗಾಗಿ ಕರ್ನಾಟಕದ ಚರಿತ್ರೆಯಲ್ಲಿ ಬಹುಮುಖ್ಯ ಭಾಗವಾಗಿರುವ ರಕ್ಷಣೆ, ಕಾವಲುಗಾರಿಕೆ, ಸೈನ್ಯಕ್ಕೆ ಸಂಬಂಧಿಸಿದಂತೆ 'ತಳವಾರಿಕೆ' ಇಂದಿಗೂ ಪ್ರಸ್ತುತವೆನಿಸುವುದರಲ್ಲಿ ಸಂದೇಹವಿಲ್ಲ. ಇಂತಹ ಒಂದು ವೃತ್ತಿಜೀವನದ ಜನ ಸಮುದಾಯದ ಕುರಿತಾದ ಸಮಗ್ರ ಅಧ್ಯಯನವಾಗಬೇಕಾಗಿರುವುದು ಅನಿವಾರ್ಯವೆನಿಸಿದೆ.

## ಅಧ್ಯಾಯ ಎರಡು

# ತಳವಾರರ ಹಿನ್ನೆಲೆ ಮತ್ತು ಪರಂಪರೆ

ಯಾವುದೇ ಒಂದು ದೇಶ, ನಾಡು ಹಾಗೂ ಅಲ್ಲಿ ವಾಸಿಸುವ ಜನಾಂಗ ಜೀವನ ಮತ್ತು ವೃತ್ತಿ ಬದುಕನ್ನು ತಿಳಿಯಬೇಕಾದರೆ ಆ ಕುರಿತು ಕೆಲವು ಮೂಲಾಧಾರಗಳ ಅಧ್ಯಯನ ಮಾಡಬೇಕಾಗುತ್ತದೆ. ಮಾನವ ಸಮಾಜ ವ್ಯವಸ್ಥೆಗಳ ಸಮಗ್ರ ಅಧ್ಯಯನದ ದೃಷ್ಟಿಯಿಂದ ಒಟ್ಟು ಮಾನವನ ಸಂಸ್ಕೃತಿಯನ್ನು ಹಾಗೂ ಅವರ ಜೀವನವಿಧಾನಗಳನ್ನು ಅರಿಯುವ ಕಾರಣದಿಂದ ಹಾಗೂ ಪ್ರತಿಯೊಂದು ಸಮಾಜದ ಮತ್ತು ಅವರ ವೃತ್ತಿಯ ಬಗೆಗಿನ ಅಧ್ಯಯನ ಮಾಡುವ ಅಗತ್ಯವಿದೆ. ಆರಂಭದಲ್ಲಿ ವೃತ್ತಿ ಜೀವನವು ಅನಿವಾರ್ಯವಾಗಿ ಕಂಡರೆ ಅನಂತರ ಪ್ರವೃತ್ತಿಯಾಗಿ ದಿನನಿತ್ಯದ ಸಾಮಾಜಿಕ ಜೀವನದಲ್ಲಿ ಒಂದು ಅಂಗವಾಗಿ ಕಂಡುಬಂದಿದೆ. ಇಂತಹ ಕೆಲವು ವೃತ್ತಿಗಳ ಅಧ್ಯಯನ ಎಂದ ತಕ್ಷಣ ಆ ವೃತ್ತಿಗೆ ಹಿನ್ನೆಲೆಯಾದ ಪ್ರವೃತ್ತಿಗಳನ್ನು ಹಾಗೂ ಜೀವನ ವಿಧಾನಗಳನ್ನು ಅಭ್ಯಸಿಸಬೇಕಾಗುತ್ತದೆ. ಅದೇ ರೀತಿ ವೃತ್ತಿಯ ಹಿನ್ನೆಲೆಯಿಂದ ಉಂಟಾದ ಕೆಲವು ಜಾತಿ, ಜನಾಂಗ, ಪಂಗಡದ ಕುರಿತು ವಿವೇಚಿಸಬೇಕಾಗುತ್ತದೆ. ಈ ಹಿನ್ನೆಲೆಯಿಂದ 'ತಳವಾರ' ವೃತ್ತಿಯಲ್ಲಿರುವ ಅದರಲ್ಲೂ ಪ್ರಾತಿನಿಧಿಕವಾಗಿ ಬೇಡ ನಾಯಕ ಸಮುದಾಯಕ್ಕೆ ಸೇರಿದ ತಳವಾರರ ಸಾಂಸ್ಕೃತಿಕ ಪರಂಪರೆ ಮತ್ತು ವೃತ್ತಿ ಹಿನ್ನೆಲೆಯನ್ನು ತಿಳಿಯಪಡಿಸುವುದಾಗಿದೆ.

ಒಂದು ವೃತ್ತಿಸಂಬಂಧಿತ ಅಧ್ಯಯನವು ಇಂದು ಸಮಾಜವಿಜ್ಞಾನದ ಪ್ರಮುಖ ಅಂಗಗಳಲ್ಲಿ ಒಂದಾಗಿದೆ. ಮಾನವಕುಲ ತನ್ನ ಸಮುದಾಯದೊಂದಿಗೆ ಐಕ್ಯಮತ ಸಾಧಿಸಿ ಅಧಿಕಾರಾನ್ವೇಷಣೆಯ ವಿದ್ಯೆಯಲ್ಲಿ ಪರಿಣತಿಯನ್ನು ಪಡೆದು, ಮಾನವ ಕುಲಕ್ಕೆ ಶ್ರೇಷ್ಠವೆಂದು ಭ್ರಮಿಸಿದ್ದಾನೆ. ಆಳುವ ವರ್ಗ ಮತ್ತು ಆಳಿಸಿಕೊಳ್ಳುವವರ ನಡುವೆ ಕೊಂಡಿಯಾಗಿರುವ ತಳವಾರರು ನಾಗರಿಕತೆ ಮತ್ತು ಸಂಸ್ಕೃತಿಗಳಿಗೆ ತನ್ನದೇ ಆದ ವಿಶಿಷ್ಟ ಅಸ್ಮಿತೆ ಇತಿಹಾಸದುದ್ದಕ್ಕೂ ಇರುವುದನ್ನು ಗಮನಿಸಬಹುದು. ಇಂತಹ ವಿಶಿಷ್ಟ ವೃತ್ತಿಯನ್ನು ಪಾರಂಪರಿಕವಾಗಿ ತಮ್ಮ ಮುಂದಿನ ಪೀಳಿಗೆಗೂ ಮುಂದು ವರಿಸಿಕೊಂಡು ಬಂದ ತಳವಾರರ ವೃತ್ತಿಯ ಹಿನ್ನೆಲೆಯನ್ನು ಗುರುತಿಸುವುದು ಅವಶ್ಯಕ.

## ೨.೧. ತಳವಾರ ಪದ ನಿಷ್ಪತ್ತಿ ಮತ್ತು ಔಚಿತ್ಯ

ಒಂದು ಭಾಷೆಯ ಬೆಳವಣಿಗೆಯಲ್ಲಿ ಪ್ರತಿಯೊಂದು ಶಬ್ದಕ್ಕೂ ಮಹತ್ವದ ಸ್ಥಾನವಿರುತ್ತದೆ. ಆ ಶಬ್ದಗಳ ಮೂಲವನ್ನು ಪರಿಶೀಲಿಸಿ, ಅವುಗಳನ್ನು ಶಾಸ್ತ್ರೀಯವಾಗಿ ಅಧ್ಯಯನ ಕೈಗೊಂಡಾಗ ಭಾಷೆಯ ಚರಿತ್ರೆಯಲ್ಲಿ ಮತ್ತು ಒಂದು ಜನಾಂಗದ ಹಿನ್ನೆಲೆಯಲ್ಲಿ ಆ ಶಬ್ದದ ಪ್ರಾಮುಖ್ಯತೆ ತಿಳಿದುಬರುತ್ತದೆ. ಇಂಥ ಶಬ್ದಗಳ ಆಂತರ್ಯವನ್ನು ಅರಿಯಲು ಪ್ರಯತ್ನಿಸಿದ ಭಾಷಾತಜ್ಞರಿಗೆ ರೋಚಕ ಮತ್ತು ದಿಗ್ಭ್ರಮೆ ಸಾಮಾನ್ಯ ಸಂಗತಿ. ಒಂದು ಜನಾಂಗವನ್ನು ಬೆಳೆಸುವ ಮೊದಲು ಒಂದು ಭಾಷೆಯನ್ನು ಬೆಳೆಸಬೇಕು ಎಂಬ ಮಾತು ಅಕ್ಷರಶಃ ಸತ್ಯ. ಭಾಷೆಯೂ ಭಾವದ ವಾಹಕವಾಗಿರುವಂತೆ ಸಂಪರ್ಕ ಸಾಧನವೂ ಆಗಿದೆ. ಅದು ಸಂಸ್ಕೃತಿಯ ವಾಹಕ ಹಾಗೂ ವಿಕಾಸದ ಮಾಧ್ಯಮ. ಮಾನವನಿಗೆ ಚೈತನ್ಯ ನೀಡುವ ಭಾಷೆ ಆತನ ಬದುಕಿನ ಸಮಸ್ತ ಬದುಕಿನಲ್ಲೂ ಪ್ರಭಾವ ಬೀರುತ್ತದೆ.

"ಕನ್ನಡ ಭಾಷೆಯ ಬೆಳವಣಿಗೆಯಲ್ಲಿ ದೇಸಿ ಪದಗಳ ಅರ್ಥ, ಸ್ವರೂಪ ಹಾಗೂ ವಿಚಾರ ಬಹುಮುಖ್ಯವಾದದ್ದು. ಭಾಷೆ ಹುಟ್ಟಿನಿಂದ ಪರಭಾಷೆಯ ಪ್ರೇರಣೆ, ಪ್ರಭಾವ ಹಾಗೂ ಸವಾಲುಗಳ ಹಿನ್ನೆಲೆಯಲ್ಲಿ ಬೆಳೆದುಬಂದಿದ್ದರೂ ಕನ್ನಡ ಭಾಷೆ ಪ್ರಾದೇಶಿಕ ವೈಶಿಷ್ಟ್ಯಗಳಿಂದ ತನ್ನ ಸ್ವಂತಿಕೆ ಉಳಿಸಿಕೊಂಡಿರುವುದನ್ನು ಕಾಣಬಹುದಾಗಿದೆ. ಇದನ್ನು ಭಾಷಾಚರಿತ್ರೆಯ ಹಿನ್ನೆಲೆಯಲ್ಲಿ ಖಚಿತ ಪಡಿಸಬಹುದಾಗಿದೆ."[೧] ಮಧ್ಯಕಾಲೀನ ಕನ್ನಡ ಸಾಹಿತ್ಯ ಕಾಲದಲ್ಲಿ ದೇಸಿಯ ಚಿಂತನೆಯಲ್ಲಿ ಭಾಷೆಗೆ ಮಹತ್ವ ನೀಡಿ ಮಿತ ಅರ್ಥದಲ್ಲಿದ್ದ ಶಬ್ದದ ಅರ್ಥಗಳನ್ನು ಪಾರಿಭಾಷಿಕ ಅರ್ಥಗಳಲ್ಲಿ ಬಳಸಲಾರಂಭಿಸಿದರು. ಈ ಮೂಲಕವಾಗಿ ಜನರ ಬಾಯಿಯಲ್ಲಿ ಆಡುಭಾಷೆಯ ಅರ್ಥದಲ್ಲಿ ಕೆಲವು ವೃತ್ತಿ ಶಬ್ದಗಳು ಬಳಕೆಯಾದವು. ಇದಕ್ಕೆ ವಚನ ಸಾಹಿತ್ಯ ಸಾಕ್ಷಿಯಾಗಿದೆ. ಈ ರೀತಿಯಾಗಿ ಬಳಕೆಯಾದ ಕೆಲವು ವೃತ್ತಿ, ಜಾತಿ, ಜನಾಂಗಗಳು, ಶಬ್ದ, ರೂಪ, ಅರ್ಥಗಳಲ್ಲಿ ಬದಲಾವಣೆ ಹೊಂದುತ್ತಾ ಬಂದಿದೆ. ಅದರಲ್ಲಿ 'ತಳವಾರ' ಎಂಬ ವೃತ್ತಿಸೂಚಕ ಪದವೂ ಒಂದು.

'ತಳವಾರ' ಎಂದರೆ ಒಂದು ಸೇವಾವರ್ಗವನ್ನು ಸೂಚಿಸುವ ಪದವಾಗಿದೆ. 'ತಳವಾರ' ಎಂಬ ಪದನಿಷ್ಪತ್ತಿಯನ್ನು ಹಲವರು ಹಲವಾರು ರೀತಿಯಲ್ಲಿ ಅರ್ಥೈಸಲು ಪ್ರಯತ್ನಿಸಿದ್ದಾರೆ. ಅವುಗಳಲ್ಲಿ ಪ್ರಾಚೀನ ಕನ್ನಡ ಶಾಸನ ಮತ್ತು ಸಾಹಿತ್ಯದಲ್ಲಿ 'ತಳಾಱ'ಎಂಬ ಪದ ಗೋಚರವಾಗುತ್ತದೆ. ಇದು ತಳವಾರರ ಹಿಂದಿನ ರೂಪದಂತಿದೆ. "ತಳಾಱ'ಎಂಬ ಪದದಲ್ಲಿನ ಶಕಟರೇಫವು ಲಕ್ಷಣೀಯವಾಗಿ, ಸಂಸ್ಕೃತ 'ರ'ಕಾರವನ್ನು ಜೀರ್ಣಿಸಿಕೊಂಡು ಶಕಟರೇಫವನ್ನು ಪ್ರದರ್ಶಿಸುತ್ತದೆ. ಇಲ್ಲಿ 'ಸ್ಥಲ' ಮತ್ತು 'ವರ' ಎಂಬೀ ಎರಡು ಸಂಸ್ಕೃತ ಶಬ್ದಗಳು ಕೂಡಿ 'ತಲವರ'ಎಂಬ ಪದ ಸಿದ್ಧವಾಗಿರಬೇಕು. 'ಸ್ಥಲ' ಎಂದರೆ ಪ್ರದೇಶ. 'ವರ' ಎಂದರೆ ಮುಖ್ಯ, ಪ್ರಮುಖ. ಇಂತು

ಸ್ಥಲವರ ಎಂದರೆ ಒಂದು ಪ್ರಾಂತ್ಯ, ಪ್ರದೇಶದ ಮುಖ್ಯ ಅಧಿಕಾರಿ ಎಂದು ಅರ್ಥವಾಗುತ್ತದೆ."[೨] 'ತಲವರ' ಎನ್ನುವುದು ಪ್ರಾಕೃತ ಭಾಷೆಯಲ್ಲಿಯೂ ಸಂಸ್ಕೃತ ಪದವಾಗಿಯೂ ಬಳಕೆಯಲ್ಲಿದೆ. ಪ್ರಾಕೃತದ ಪದದ ಅರ್ಥ ತಿಳಿದಿಲ್ಲ. ಆದರೆ ಸಂಸ್ಕೃತದಲ್ಲಿ 'ತಲ'ಎಂದರೆ ಕತ್ತಿಯ ಹಿಡಿ ಎಂಬ ಅರ್ಥವಿದೆ. ಇನ್ನೊಂದು ಮೂಲದ ಪ್ರಕಾರ "ತಳವಾರ' ಎಂಬುದು ಮೂಲತಃ 'ತಲಕಾರ' ಎಂಬುದರಿಂದ ಉದ್ಭವಿಸಿದೆ. ಇದರರ್ಥ 'ಕರ ವಸೂಲಿ ಮಾಡುವ ಅಧಿಕಾರಿ', 'ಆರಕ್ಷಕ' ಎಂಬ ಅರ್ಥವಿದೆ."[೩] "ತಳವಾರ' ಎಂಬುದು ಸಮಾಸ ಪದವಾಗಿದೆ. ತಳ+ವಾರ=ತಳವಾರ, 'ತಳ' ಎಂದರೆ ಹುಟ್ಟೂರು. ಸ್ವಂತದ ಊರು ಎಂಬರ್ಥವಿದೆ. ಜನಸಾಮಾನ್ಯರು, ಅಪರಿಚಿತರು, ಪರ ಊರಿನವರು ಯಾರಾದರೂ ಭೇಟಿಯಾಗಿ 'ನಿಮ್ಮ ತಳ ಯಾವುದು?' ಎಂಬ ಪ್ರಶ್ನೆ ಹಾಕುವುದು ಸಾಮಾನ್ಯ ವಿಷಯ. ಪಾರ ಎಂಬುದಕ್ಕೆ 'ಸಂರಕ್ಷಣೆ' ಎಂಬರ್ಥವಿದೆ. ತಳದ ಪಾರ ಮಾಡುವವನು 'ತಳವಾರ' ಎಂದಾದ."[೪] 'ತಳವಾರ' ಎಂಬ ನಾಮಪದಕ್ಕೆ 'ಇಕೆ/ ಪ್ರತ್ಯಯ ಸೇರಿ 'ತಳವಾರಿಕೆ' ಆಗಿದೆ."[೫]

ತಳವಾರ ಶಬ್ದನಿಷ್ಪತ್ತಿಯ ಬಗೆಗೆ ಇನ್ನು ಕೆಲವು ವಿದ್ವಾಂಸರ ಅಭಿಪ್ರಾಯ ಹೀಗಿದೆ. "ಭಾರತಕ್ಕೆ ಉತ್ತರದಿಂದ ಆಗಾಗ ದಂಡೆತ್ತಿ ಬರುತ್ತಿದ್ದ ಮುಸಲ್ಮಾನರ ಹಾವಳಿಗೆ ಬೇಸತ್ತ ನಾಯಕರಲ್ಲಿ ಅಪ್ರತಿಮ ವೀರರೂ, ಶೂರರೆನಿಸಿದ ತರುಣರು ತಂತಮ್ಮ ಪಾಳೆಯಪಟ್ಟುಗಳನ್ನು ಭದ್ರಪಡಿಸಿಕೊಳ್ಳಲು ತಮ್ಮ ಮನೆ, ಮಠಗಳನ್ನು ಬಿಟ್ಟು, ಖಡ್ಗಧಾರಿಗಳಾಗಿ ದೇಶ ಸೇವೆಗೆ ಕಂಕಣ ಬದ್ಧರಾಗಿ ನಿಂತರು. ಹಿಂದೂ ಮತದ್ವೇಷಿಗಳಾದ ಮುಸಲ್ಮಾನರಿಂದ ಜನತೆಯನ್ನು ರಕ್ಷಿಸಲು ಅವರ ದಾಳಿಯ ಸಂದರ್ಭದಲ್ಲಿ ಬರ ಸಿಡಿಲಿನಂತೆ ಅವರ ಮೇಲೆರಗಿ ತಮ್ಮ ಖಡ್ಗದಿಂದ ಅವರ ರುಂಡ, ಮುಂಡಗಳನ್ನು ಚಂಡಾಡುತ್ತಿದ್ದರು. ಬೇಟೆ ಮತ್ತು ಯುದ್ಧ ಪ್ರಿಯರಾದ ಬೇಡ ತರುಣರು ಖಡ್ಗಗಳನ್ನು ಬಳಸುವ ಮತ್ತು ಖಡ್ಗದಿಂದಲೇ ಗೆಲ್ಲುವ ಕೌಶಲ್ಯಗಳನ್ನು ಹೊಂದಿದ್ದರು. ಸದಾ ಖಡ್ಗಧಾರಿಗಳಾಗಿಯೇ ಕಾಣಿಸಿಕೊಳ್ಳುತ್ತಿದ್ದ ಇವರ ದರುಶನ ಮಾತ್ರದಿಂದಲೇ ಮುಸಲ್ಮಾನರು ನಿದ್ರೆಯಲ್ಲಿ ಕನವರಿಸಿದಂತೆ 'ತಲ್‌ವಾರ್' ಎಂದು ಕಿರುಚುತ್ತಿದ್ದರು. ಇಲ್ಲಿ 'ತಲ್‌ವಾರ್' ಎಂದರೆ ಉರ್ದುವಿನಲ್ಲಿ 'ಖಡ್ಗ', 'ಕತ್ತಿ' ಎಂಬ ಅರ್ಥವಿದೆ. ಸದಾ ಖಡ್ಗ ಹಿಡಿದು ತಿರುಗುತ್ತಿದ್ದ ಯುವಕರ ಹೆಸರಿನ ಬದಲು ಆ ವ್ಯಕ್ತಿಯಲ್ಲಿ ಆಡಕವಾಗಿರುವ ವಸ್ತುವಿನ ಪ್ರಾಶಸ್ತ್ಯದಿಂದ ವ್ಯಕ್ತಿಯನ್ನು ಅನ್ವರ್ಥನಾಮದಿಂದ ಕರೆಯುವಂತೆ ಖಡ್ಗಧಾರಿಯಾದ ಮನುಷ್ಯನನ್ನು 'ತಲ್‌ವಾರ್'(ಖಡ್ಗ) ಎಂದು ಕರೆಯುತ್ತಿದ್ದರು"[೬] ಎಂದು ಅಭಿಪ್ರಾಯ ಪಟ್ಟಿದ್ದಾರೆ. ಈ ಅಭಿಪ್ರಾಯದಲ್ಲಿ ಅಸಮರ್ಪಕ ವಾದವಿದೆ. ತಳವಾರರನ್ನು ಶಾತವಾಹನರ ಕಾಲದಿಂದಲೂ ಗುರುತಿಸಲಾಗುತ್ತಿದೆ. ಅಂದಿನ ಆಡಳಿತ ಮತ್ತು ನಗರ, ಗ್ರಾಮಜೀವನದಲ್ಲಿ ಮಿಳಿತವಾಗಿದ್ದ ತಳವಾರರನ್ನು 'ನಾಡ ತಳವಾರ' 'ಮಹಾ ನಾಡತಳವಾರ' ಎಂದು ಕರೆಯುತ್ತಿದ್ದ ಬಗೆಗೆ ಉಲ್ಲೇಖಗಳಿವೆ. ಆದುದರಿಂದ ಆದಿಲ್‌ಶಾಹಿ

ಹಾಗೂ ಬಿಜಾಪುರ ಸುಲ್ತಾನನಿಂದ ಹಾಗೂ ಮುಸ್ಲಿಂ ಸೈನಿಕರಿಂದ ಇವರಿಗೆ ಅನ್ವರ್ಥವಾಗಿ 'ತಳವಾರ' ಹೆಸರು ಬಂದಿದೆ ಎನ್ನುವುದು ಅಸಮರ್ಪಕವೆನಿಸುತ್ತದೆ.

ಇನ್ನೊಂದು ಮೂಲದ ಪ್ರಕಾರ ಹಲವಾರು ರಾಜ್ಯ ಸಾಮ್ರಾಜ್ಯಗಳಲ್ಲಿ ಸ್ವಯಂ ಸೇವಕರಾಗಿ ಗ್ರಾಮರಕ್ಷಣೆ ಮತ್ತು ಆತ್ಮರಕ್ಷಣೆಗಾಗಿ ಸದಾ ಖಡ್ಗಧಾರಿಗಳಾಗಿ ಜನಸೇವೆ ಸಲ್ಲಿಸಿದ ವೀರರಿಗೆ ತಲ್‌ವಾರ್, ತಲವಾರ, ತಳವಾರ ಎಂಬ ಹೆಸರು ಬಂದಿದೆ. ಒಟ್ಟಿನಲ್ಲಿ ಈ ಮೇಲಿನ ಎಲ್ಲಾ ನಿಷ್ಪತ್ತಿಯನ್ನು ಗಮನಿಸಿದಾಗ 'ತಳವಾರ' ಎಂಬುದು ಊರಿನ ಕಾವಲು ಕಾಯುವವನು, ಗ್ರಾಮದ ರಕ್ಷಕ ಎಂದು ಅರ್ಥೈಸಬಹುದು. ಪ್ರಾಚೀನ ಕನ್ನಡ ಕಾವ್ಯ, ಶಾಸನಗಳಲ್ಲಿ ಬರುವ ತಳಾರ, ತಳವಾರ, ತಲಕಾರ ಎಂಬ ಪದಗಳ ಉಲ್ಲೇಖ ದಿಂದ ತಳವಾರ ಪದದ ವಿಶ್ಲೇಷಣೆ ಅಗತ್ಯವೆನಿಸುತ್ತದೆ. ಖಡ್ಗವಿಡಿದು ಊರಿನ ಜನರ ಹಿತ ಕಾಯುವ ಹಾಗೂ ನಾಯಕನ ರೀತಿ–ನೀತಿಗಳನ್ನು ಪರಿಪಾಲಿಸುವ ಕರ್ತವ್ಯ ತಳವಾರನದಾಗಿತ್ತು. ಪ್ರತಿ ಊರಿನಲ್ಲಿ ಪಂಚಾಯ್ತಿ ಕಟ್ಟೆಯನ್ನು ಸ್ಥಾಪಿಸಲಾಗಿತ್ತು. ಅದರಲ್ಲಿ ಊರಿನ ಗೌಡ, ಪಾಟೀಲ, ಕುಲಕರ್ಣಿ, ತಳವಾರ, ಓಲೆಕಾರ, ಕೋಲುಕಾರ ಎಂಬ ವಿವಿಧ ರೀತಿಯ ಹುದ್ದೆಗಳಿದ್ದವು. ಗೌಡನು ಊರಿನ ಮುಖಂಡನಾಗಿ ಎಲ್ಲಾ ಕಾರ್ಯವನ್ನು ಇವರ ಅಧೀನದಲ್ಲಿದ್ದ ಕುಲಕರ್ಣಿ, ತಳವಾರ, ಓಲೆಕಾರ, ಕೋಲುಕಾರನ ಮೂಲಕ ನಿರ್ವಹಿಸುತ್ತಿದ್ದ. ಕುಲಕರ್ಣಿ ಕಡತ ಮತ್ತು ಲೆಕ್ಕ ಪತ್ರಗಳ ನಿರ್ವಹಣೆಯ ಜವಾಬ್ದಾರಿಯಾದರೆ, ತಳವಾರನು ಗ್ರಾಮರಕ್ಷಣೆ ಮತ್ತು ಕಂದಾಯ ವಸೂಲಿಯ ಜವಾಬ್ದಾರಿಯಾಗಿತ್ತು. ಕೋಲುಕಾರ ಕೋಲು ಹಿಡಿದು ಸುದ್ದಿ ಸಾರುವ ಕಾಯಕದವನಾಗಿದ್ದ. ಓಲೆಕಾರ ಆಯಾ ಊರಿನ ಸುದ್ದಿ ಸಾರಗಳನ್ನು ಮತ್ತೊಂದು ಊರಿಗೆ ಕೊಂಡೊಯ್ದು ಮುಟ್ಟಿಸುವ ಕಾರ್ಯ ಈತನದಾಗಿತ್ತು. ಈತನಿಗೂ ಸಹ ಅಂದಿನ ಕಾಲದಲ್ಲಿ ರಕ್ಷಣೆಗಾಗಿ ಖಡ್ಗವನ್ನು ನೀಡಿದ ಬಗ್ಗೆ ಮಾಹಿತಿಗಳು ಲಭ್ಯವಾಗಿವೆ.

ಈ ಮೇಲಿನ ಎಲ್ಲಾ ನಿಷ್ಪತ್ತಿಗಳನ್ನು ಗಮನಿಸಿದಾಗ ನಮಗೆ ತಳವಾರಿಕೆ ಒಂದು ವೃತ್ತಿ ಎನ್ನುವುದು ಖಚಿತವಾಗುತ್ತದೆ. ಅದರಂತೆ 'ತಳವಾರಿಕೆ' ಎಂಬ ಪದದ ಕುರಿತು ನಿಘಂಟುಗಳಲ್ಲಿ ಕಾವಲು, ರಕ್ಷಣೆ, 'ತಲೈ'(ತಮಿಳು) ಮುಖ್ಯಸ್ಥ ಅಥವಾ ಮುಖ್ಯ ಕಾವಲುಗಾರನೆಂದೂ, 'ಉದ್ಧಾರಿ' ರಕ್ಷಣಾ ಅಧಿಕಾರ ಎಂತಲೂ ಅರ್ಥೈಸಲಾಗಿದೆ ಹಾಗೂ ತಳವಾರ ಮತ್ತು ತಳವಾರಿಕೆ ಪದ ನಿಷ್ಪತ್ತಿಯನ್ನು ನಾವು ಇಂದಿನ ಕಾಲದಲ್ಲಿ ಅಚ್ಚ ಕನ್ನಡ ಪದವಾದ 'ತಳ' ಎಂಬ ನಾಮ ಪದಕ್ಕೆ 'ವಾರ'ಎಂಬ ತದ್ಧಿತ ಪ್ರತ್ಯಯ ಸೇರಿ ತಳವಾರವಾಗಿದೆ. 'ಖಡ್ಗದ ಜೊತೆಗೆ ವ್ಯವರಿಸುವವ ತಳವಾರ"[೭] ಎಂದು ಅರ್ಥೈಸುತ್ತಾರೆ.

ತಳವಾರನೆಂದರೆ ದುರ್ಗಕ್ಕೆ ಪಾಳೆಯಗಾರನ ಪ್ರತಿನಿಧಿ ಎಂದೂ ಕರೆಯಲಾಗುತ್ತಿತ್ತು. ಅಂದಿನ ರಾಜ, ಅರಸು ನಾಯಕರಿಗೆ ಸಲ್ಲಬೇಕಾದ ಕಂದಾಯ, ಕಾಣಿಕೆಗಳನ್ನು ವಸೂಲಿ

ಮಾಡುವುದರ ಜೊತೆಗೆ ನಗರದ ಆಗು–ಹೋಗುಗಳನ್ನು ನೋಡಿಕೊಳ್ಳುವುದು ತಳವಾರನ ಪ್ರಮುಖ ಕರ್ತವ್ಯವಾಗಿತ್ತು. ಜೊತೆಗೆ ನಾಯಕನ ಪಾಳೆಯಪಟ್ಟಿಗೆ ಒಳಪಟ್ಟು ಅಧೀನ ನಾಯಕರ ಗ್ರಾಮ ಉಸ್ತುವಾರಿಯನ್ನು ನೋಡಿಕೊಳ್ಳುತ್ತಿದ್ದನು. ಒಟ್ಟಿನಲ್ಲಿ ಇಂದಿನ ಆರಕ್ಷಕ(ಪೊಲೀಸ್) ಅಧಿಕಾರಿಯ ಹಾಗೆ ಅಂದಿನ ತಳವಾರ ಇದ್ದ ಎಂಬ ಮಾಹಿತಿ ಕ್ಷೇತ್ರಕಾರ್ಯದಿಂದ ತಿಳಿದುಬರುತ್ತದೆ. ತಳವಾರ ಎನ್ನುವುದು ಒಂದು ವೃತ್ತಿ ಸೂಚಕ ಹೆಸರಾಗಿದೆ. ಮೂಲತಃ ತಲಕಾರ ಎಂದಿದ್ದ ಪದ 'ತಳವಾರ' ಎಂದು ವಿಕಾಸ ಆಗಿರಬೇಕು. ಇಲ್ಲಿ 'ತಲ' ಎಂದರೆ 'ಸ್ಥಳ' 'ವಾರ' ಎಂದರೆ 'ವಾರಸುದಾರ'. ಅಂದರೆ ಒಂದು ಸ್ಥಳದ ವಾರಸುದಾರನನ್ನು ತಳವಾರ ಎಂದು ಕರೆಯಬಹುದಾಗಿದೆ. ಗ್ರಾಮದ ಜನರ ನಿಯಂತ್ರಣ ಹಾಗೂ ರಕ್ಷಣೆಯ ಜವಾಬ್ದಾರಿ ಹೊತ್ತಿದ್ದ ತಳವಾರನಿಗೂ ಇಂದಿನ ಪೊಲೀಸ್‌ರಿಗೂ ಹಲವಾರು ಸಾಮತ್ಯಗಳಿದ್ದು, ಅಂದಿನ ತಳವಾರನ ಚಾವಡಿಯಂತೆಯೇ ಇಂದಿನ ಪೊಲೀಸ್ ಠಾಣೆ ಕಾರ್ಯ ನಿರ್ವಹಿಸುತ್ತದೆ. ಅಂದಿನ ಓಲೆಕಾರ ಇಂದಿನ ಅಂಚೆ ವಾಹಕ(ಪೋಸ್ಟಮ್ಯಾನ್) ಆಗಿದ್ದಾನೆ ಎಂದು ಹೇಳಬಹುದು.

ತಳವಾರನಿಗೆ ಓಲೆಕಾರ, ಹಳಬ ಎಂದು ಪರ್ಯಾಯ ಹೆಸರುಗಳಿಂದ ಕರೆಯಲಾಗುತ್ತದೆ. ಓಲೆಕಾರ ಎಂದರೆ ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಸುದ್ದಿಯನ್ನು, ವಸ್ತುವನ್ನು ಮುಟ್ಟಿಸುವುದಾಗಿತ್ತು. ಈ ಕಾರ್ಯ ಇಂದಿನ ಪೋಸ್ಟ್‌ಮ್ಯಾನ್‌ಗೆ ಸಂವಾದಿಯಾಗಿ ಬಳಸಬಹುದು. ಈ ಕಾರ್ಯವನ್ನು ತಳವಾರ ನಿಭಾಯಿಸಿದ್ದರಿಂದ ಈತನಿಗೆ ಓಲೆಕಾರನೆಂದೂ ಕರೆಯುತ್ತಾರೆ. 'ಹಳಬ' ಎಂದರೆ ಹಿಂದಿನಿಂದಲೂ ವೃತ್ತಿ ಮಾಡಿಕೊಂಡು ಬಂದವರಿಗೆ 'ಹಳಬ' ಎಂದು ಕರೆಯಲಾಗುತ್ತದೆ. ಇಲ್ಲಿ 'ಹಳಬ' ಎಂದರೆ ಹಿರಿಯ ಎಂದರ್ಥ ಇದೆ.

ಹೀಗೆ 'ತಳವಾರಿಕೆ' ಪ್ರಾಚೀನ ಕಾಲದಿಂದ ಇಂದಿನವರೆಗೂ ಹಲವಾರು ಹಂತಗಳಲ್ಲಿ ಹಲವಾರು ಅರ್ಥಗಳನ್ನು ಹೊಂದಿದ್ದರೂ, ಅವುಗಳೆಲ್ಲದರ ಅರ್ಥ ಒಂದೇ ಆಗಿರುವುದು ಕಂಡುಬರುತ್ತದೆ. ಒಂದು ಸ್ಥಳದ ಕಾವಲು, ರಕ್ಷಣೆಯೊಂದಿಗೆ ಆರಂಭವಾದ ವೃತ್ತಿ ಮುಂದೆ ಜಾತಿ ಸೂಚಕವಾಗಿ ಬಳಕೆಗೆ ಬಂದಿದೆ. ಈ ವೃತ್ತಿಯನ್ನು ಪಾರಂಪರಿಕವಾಗಿ ಮಾಡಿಕೊಂಡು ಬಂದ ಸಂತತಿಯವರಿಗೆ ತಳವಾರರು ಎಂದು ಕರೆಯುತ್ತಾರೆ.

## ೨.೨. ಚಾರಿತ್ರಿಕ ಹಿನ್ನೆಲೆ

ತಳವಾರ ಎಂಬ ಪದ ಅಧಿಕಾರ ಸೂಚಕವಾದುದು. ತಳವಾರನ ಚರಿತ್ರೆ ಕ್ರಿ.ಶ.೩ನೆಯ ಶತಮಾನದಷ್ಟು ಪುರಾತನ ಕಾಲದವರೆಗೆ ಹೋಗುತ್ತದೆ. ತಳವಾರನ ಸ್ಥಾನವು ಶಾತವಾಹನರ ಆಳ್ವಿಕೆಯಲ್ಲಿ ಪ್ರಚಾರಕ್ಕೆ ಬಂದಂತೆ ತೋರುತ್ತದೆ. ಇದಕ್ಕೆ ಉದಾಹರಣೆಯಾಗಿ ಕ್ರಿ.ಶ.೩ನೆಯ ಶತಮಾನದ ಇಕ್ಷ್ವಾಕು ಕುಲದ ಅರಸರ ಕಾಲದಲ್ಲಿ 'ತಲವರ' ಎಂಬ ಪದ ಶಾಸನಗಳಲ್ಲಿ ಬಳಕೆಯಾಗಿದೆ ಮತ್ತು 'ಮಹಾ ತಲವರ' ಎಂಬ ಪ್ರಶಸ್ತಿಗಳನ್ನು ನೀಡಿದ್ದರ ಬಗೆಗೆ ಶಾತವಾಹನ ಶಾಸನದಲ್ಲಿ ಉಲ್ಲೇಖಿಸಲಾಗಿದೆ.

ಕರ್ನಾಟಕದಲ್ಲಿ ತಳವಾರರ ಚರಿತ್ರೆಯನ್ನು ಶಾತವಾಹನರ ಕಾಲದಿಂದ ಗುರುತಿಸಲಾಗಿದೆ. ಈ ಕಾಲದ ಗುಲಬರ್ಗಾ ಜಿಲ್ಲೆಯ ಸನ್ನತಿಯ ಶಾಸನದಲ್ಲಿ 'ತಳಾರ', 'ತಳಾರಿಣಿ' ಎಂಬ ಪದಗಳು ಪ್ರಯೋಗಗೊಂಡಿವೆ."[೮] ಈ ಒಂದು ಆಧಾರದಿಂದ ಕ್ರಿ.ಶ.೨ನೇ ಶತಮಾನದಲ್ಲಿದ್ದ ಶಾತವಾಹನರ ಕಾಲದಿಂದ ಅಧಿಕೃತವಾದ ಚರಿತ್ರೆ ಆರಂಭವಾಗುತ್ತದೆ. ಕ್ರಿ.ಶ.೨ನೇ ಶತಮಾನದ ವೇಳೆಗೆ ಆಂಧ್ರ ಪ್ರದೇಶದ ನಾಗಾರ್ಜುನಕೊಂಡದ ಇಕ್ಷ್ವಾಕು ವಂಶದ ದೊರೆಗಳಿಂದ 'ಸ್ತಲವರ, ತಲವರ, ತಳಾರ, ತಳಾವಿ, ತಳವಾರ, ಮಹಾತಲವಾರ, ನಾಡ ತಳವಾರ ಎಂಬ ಪೊಲೀಸ್ ವಿಭಾಗದ ಹುದ್ದೆಗಳು ಸೃಷ್ಟಿಸಲ್ಪಟ್ಟವು."[೧೫] ಈ ಆಧಾರದಿಂದ ಅಂದಿನ ನಗರಜೀವನದಲ್ಲಿ 'ತಳವಾರ' ಹುದ್ದೆ ಅಧಿಕೃತವಾಗಿ ಜಾರಿಗೆ ಬಂದಿತ್ತೆಂಬುದನ್ನು ಸಾಬೀತುಪಡಿಸಬಹುದು. "ಮಹಾ ತಲವರ'ನನ್ನು ಈಚೆಯ ಕಾಲದ 'ಮಹಾಮಂಡಲೇಶ್ವರ' ಎಂಬ ಉನ್ನಾಧಿಕಾರಿಗೆ ಹೋಲಿಸಬಹುದು. 'ಮಹಾತಲವರ'ನಿಗಿಂತ ಕಿರಿಯನಾದ 'ತಲವರ' ಎಂಬ ಅಧಿಕಾರಿಯಾದರೂ ಆ ಕಾಲದಲ್ಲಿ ಇದ್ದಿರಬೇಕು. ಮಂಡಲೇಶ್ವರನು ಬೆಳೆದು ಮಹಾ ಮಂಡಲೇಶ್ವರನಾದಂತೆ ತಲವರನು ಬೆಳೆದು ಮಹಾ ತಲವರನಾಗಿರಬೇಕು"[೧೦] ಎಂದು ಊಹಿಸಿದ್ದಾರೆ. ಇವರ ಊಹೆ ನಿಜವೆನಿಸುತ್ತದೆ. ಏಕೆಂದರೆ ಕ್ರಿ.ಶ.೬–೭ನೇ ಶತಮಾನದಲ್ಲಿ ಕರ್ನಾಟಕದ ಪಶ್ಚಿಮ ಪ್ರದೇಶಗಳಲ್ಲಿ ಆಳುತ್ತಿದ್ದ ಭೋಜ ಮನೆತನದ ಕಾಪಾಲಿವರ್ಮನ ಒಂದು ತಾಮ್ರ ಶಾಸನದಲ್ಲಿ 'ನಂದಕ ತಲವರ'[೧೧] ಎಂಬ ಉನ್ನತಾಧಿಕಾರಿಯ ಉಲ್ಲೇಖವಿದೆ. ಹಾಗೆಯೇ ಚಾಲುಕ್ಯ ಅರಸ ಇಮ್ಮಡಿ ವಿಷ್ಣುವರ್ಧನನ ಕ್ರಿ.ಶ.ಸು.೬೬೯ರ ಒಂದು ಸಂಸ್ಕೃತ ತಾಮ್ರ ಶಾಸನದಲ್ಲಿ ರಾಜಾಜ್ಞೆಯನ್ನು ನಿವೇದಿಸುವ ಸಂದರ್ಭದಲ್ಲಿ ಈ ಮುಂದಿನ ವಾಕ್ಯವು ಬರುತ್ತದೆ. "ಗ್ರಾಮೇಯಕಾನ್ ರಾಜಪುರುಷ ತಳವರ ದಂಡನಾಯಕ".[೧೨] ಇದರಿಂದ ರಾಜ್ಯದ ಅಧಿಕಾರಿಗಳಲ್ಲಿ ಗಣ್ಯಸ್ಥಾನವನ್ನು ಪಡೆದಿದ್ದನು ಎಂಬ ಅಂಶ ವೇದ್ಯವಾಗುತ್ತದೆ. ಅದೇ ರೀತಿ ಮೌರ್ಯರ ಕಾಲದ ಕಂದಹಾರ್ ಶಾಸನದಲ್ಲಿ ಬೇಡರ ಉಲ್ಲೇಖವಿರುವುದರಿಂದ 'ತಳವಾರಿಕೆ'ಯನ್ನು ಆಗಿನಿಂದಲೇ ಗುರುತಿಸಬಹುದಾಗಿದೆ."[೧೩] ಈ ಎಲ್ಲಾ ಆಕರಗಳಿಂದ ತಳವಾರಿಕೆ ವೃತ್ತಿ ಕ್ರಿ.ಶ.೨ನೇ ಶತಮಾನದ ಕಾಲಕ್ಕಾಗಲೇ ರಾಜ್ಯ, ನಗರ, ಗ್ರಾಮಜೀವನದಲ್ಲಿ ಮಿಳಿತವಾಗಿತ್ತು ಎಂಬುದು ತಿಳಿಯುತ್ತದೆ.

ತಳವಾರಿಕೆ ರಾಜರ ಕಾಲದಲ್ಲಿ ಒಂದು ಗೌರವಾನ್ವಿತ ಹುದ್ದೆಯಾಗಿತ್ತು. ಈ ವೃತ್ತಿಯನ್ನು ಕ್ರಿ.ಶ.೧೨ನೇ ಶತಮಾನದಿಂದಲೂ ಆಯಾ ಆಸ್ಥಾನಗಳಲ್ಲಿ ಬೇಡ ನಾಯಕರೇ ಈ ವೃತ್ತಿಯನ್ನು ಅನುಭವಿಸಿಕೊಂಡು ಬಂದಿದ್ದಾರೆ. ಬೇಡ ನಾಯಕರು ಶ್ರೀಶೈಲದ ಕಡೆಯಿಂದ ಕರ್ನಾಟಕಕ್ಕೆ ವಲಸೆ ಬಂದಿದ್ದಾರೆ ಎಂಬ ಅಭಿಪ್ರಾಯವಿದೆ. ಯುದ್ಧ, ಶಸ್ತ್ರಾಸ್ತ್ರಗಳ ಬಳಕೆ, ಕಾಡುಪ್ರಾಣಿಗಳ ನಿಯಂತ್ರಣ, ದೈಹಿಕ ಸದೃಢತೆ, ನಿರ್ಭಯವಾಗಿ ಹೋರಾಡುವ ಶಕ್ತಿಯನ್ನು ಕಂಡು ಇವರನ್ನು ಸೈನಿಕರನ್ನಾಗಿ, ನಗರರಕ್ಷಕರನ್ನಾಗಿ, ಕಾಡುಪ್ರಾಣಿಗಳಿಂದ ರಕ್ಷಣೆಗೊಸ್ಕರ ನಾಯಕರನ್ನೇ ನೇಮಿಸುವ

ಪದ್ಧತಿ ಇತ್ತು. ಈ ಜನರನ್ನು ತಮ್ಮ ಬಳಿ ಇಟ್ಟುಕೊಂಡು, ರಾಜ್ಯದೊಳಗೆ ಆಂತರಿಕ ದಂಗೆಗಳು ಏಳದಂತೆ, ಕಳ್ಳಕಾಕರು ಸುಳಿಯದಂತೆ ಇವರನ್ನು ಕಾವಲುಗಾರರನ್ನಾಗಿ ನೇಮಿಸುತ್ತಿದ್ದರು.

"ತಲಕಾಡಿನ ಗಂಗರ ಕಾಲದಲ್ಲಿಯೂ ಬಿಲ್ಲುಗಾರಿಕೆಯಲ್ಲಿ ನಿಪುಣರಾದ ಬೇಡರನ್ನು ತಮ್ಮ ಸೈನ್ಯಕ್ಕೆ ಸೇರಿಸಿಕೊಂಡು ದರೋಡೆಕೋರರ, ದಾಳಿಕೋರರ ನಿಯಂತ್ರಣ ಮಾಡುತ್ತಿದ್ದರು. ಇದು ಹೊಯ್ಸಳರ ಕಾಲದವರೆಗೂ ಮುಂದುವರಿಯಿತು."[೧೪] ಹಾಗೆಯೇ "ಚಾಲುಕ್ಯ ಮತ್ತು ರಾಷ್ಟ್ರಕೂಟರ ಕಾಲದಲ್ಲಿ ಬೇಡ ಪಡೆಗಳು 'ಕರ್ನಾಟಕ ಸೈನ್ಯ'ದಲ್ಲಿ ಪ್ರಸಿದ್ಧಿಯಾಗಿದ್ದವು. ಕರ್ನಾಟಕ ಸೈನ್ಯವೆಂದರೆ ಬೇಡರ ಸೈನ್ಯವೆಂದೇ ಹೆಸರಾಗಿತ್ತು. ಏಕೆಂದರೆ ಕರ್ನಾಟಕ ಸೈನ್ಯದಲ್ಲಿ ಬೇಡರೇ ಅಧಿಕ ಸಂಖ್ಯೆಯಲ್ಲಿದ್ದರು."[೧೫] ಹೀಗೆ ಬೇಡರು ರಾಷ್ಟ್ರಕೂಟರ ಕಾಲಕ್ಕಾಗಲೇ ನಾಡಗಾವುಂಡ ಎಂಬ ಅಧಿಕಾರ, ಹುದ್ದೆಗಳನ್ನು ಪಡೆದುಕೊಂಡರು ಎಂಬುದು ತಿಳಿದುಬರುತ್ತದೆ. ನಂಬಿಕೆಗೆ ಅರ್ಹರಾದ ನಾಯಕರನ್ನು ಹೋರಾಟಗಳಲ್ಲಿ ಹಾಗೂ ಆಂತರಿಕ ಆಡಳಿತದ ಭದ್ರತೆಗೂ ಹಾಗೂ ಶಿಸ್ತುಬದ್ಧ ಸಮಾಜದ ನಿರ್ಮಾಣ ಮಾಡುವ ದೃಷ್ಟಿಯಿಂದಲೂ ಇವರಿಗೆ ವಿವಿಧ ಆಡಳಿತದ ಜವಾಬ್ದಾರಿಗಳನ್ನು ನೀಡುತ್ತಾ ಬಂದಿದ್ದಾರೆ.

ಮಧ್ಯಕಾಲೀನ ಕರ್ನಾಟಕ ಚರಿತ್ರೆಯಲ್ಲಿ 'ತಳವಾರ' ಹುದ್ದೆ ಅತಿ ಪ್ರಾಮುಖ್ಯತೆ ಪಡೆದು ಕೊಂಡಿದೆ. ಇದಕ್ಕೆ ನೆಲಮಂಗಲದ ಒಂದು ಶಾಸನ ಸಾಕ್ಷ್ಯ ನೀಡುತ್ತದೆ. ಒಂದು ಕಾಳಗದಲ್ಲಿ ತಳವಾರನೊಬ್ಬ ಹೋರಾಡಿ ಮಡಿದ ಬಗೆಗೆ ಉಲ್ಲೇಖವಿದೆ. "ಜತ್ತ ತಳವಾರ ಪೊಗುಣ್ಣೆ ಕಾಳೆಗದುಳ ಎಱಿದು ಸತ್ತ"[೧೬] ಎಂಬ ವಿಷಯ ತಿಳಿಯುತ್ತದೆ. ಅದೇ ರೀತಿ ೮ನೇ ಶತಮಾನದ ಶಾಸನವೊಂದು ಊರಿನ ರಕ್ಷಣೆ ಮತ್ತು ಸೇವೆಯ ತಳವಾರನಿಗೆ ಇನಾಂ ಭೂಮಿ ನೀಡಿರುವುದನ್ನು 'ಅರವಟ್ಟಿಗ ತಳರ ಕೂಡಲೂರ ವೃತ್ತಿ ಸೂಕ್ತಿ ಊರೊಳೆ.... ಕೊಟ್ಟ ನೆಲ'[೧೭] ಎಂದು ಈ ಶಾಸನ ದಿಂದ ತಿಳಿಯುತ್ತದೆ. ಇನ್ನು ೯ನೇ ಶತಮಾನಕ್ಕೆ ಬರುವುದಾದರೆ ಶಿವಕೋಟ್ಯಾಚಾರ್ಯ ವಿರಚಿತ ವಡ್ಡಾರಾಧನೆಯ ಕಥೆಗಳಲ್ಲಿ ಬರುವ 'ತಳಾರ'ನ ಪಾತ್ರಗಳು ಊರಿನ ಕಾವಲುಗಾರಿಕೆ ಮತ್ತು ಆತನ ಜವಾಬ್ದಾರಿಯುತ ಕಾರ್ಯ ಕರ್ತವ್ಯಗಳೇನು ಎಂಬುದು ತಿಳಿಯುತ್ತದೆ. "ಸಮಾಜದಲ್ಲಿ ಜರುಗುವ ಕಳ್ಳತನ, ಹಾದರತನ, ಕೊಲೆ, ದರೋಡೆಗಳನ್ನು ನಿಯಂತ್ರಿಸುವುದು ತಳವಾರನ ಪ್ರಮುಖ ಕಾರ್ಯವಾಗಿತ್ತು. ಆದ್ದರಿಂದಲೇ ತಳವಾರನಿಗೆ ಒಬ್ಬ ಸೇನಾಪತಿ ದಂಡನಾಯಕನಿಗೆ ಸಮನಾದ ಸ್ಥಾನವನ್ನು ನೀಡಲಾಗಿತ್ತು"[೧೮] ಎಂಬುದನ್ನು ತಿಳಿಸಲಾಗಿದೆ.

ಕ್ರಿ.ಶ.೧೩೩೬ರಲ್ಲಿ ಸ್ಥಾಪನೆಯಾದ ವಿಜಯನಗರದ ಕಾಲದ ಚರಿತ್ರೆಯಲ್ಲಿ ತಳವಾರ ಮತ್ತು ತಳವಾರಿಕೆ ವೃತ್ತಿಯನ್ನು ನಿರ್ವಹಿಸಿದರ ಬಗ್ಗೆ ಅನೇಕ ದಾಖಲೆಗಳು ದೊರೆಯುತ್ತವೆ. "ಕರ್ನಾಟಕದಲ್ಲಿ ಮೊಟ್ಟ ಮೊದಲು ನಾಯಕರು ರಾಜ್ಯವನ್ನು ಸ್ಥಾಪಿಸಿದ್ದು, 'ಕುಮ್ಮಟದುರ್ಗ', ಇದಕ್ಕೂ ಮೊದಲು ಬೇಡ ರಾಜರು ಇದ್ದರೆಂಬ ಉಲ್ಲೇಖ ಗದ್ದೆಮನೆ ಶಾಸನದಲ್ಲಿದೆ. ಅದರಲ್ಲಿ

ರಾಜ್ಯಾಳ್ವಿಕೆ ಬಗ್ಗೆ ಬೆಳಕು ಚೆಲ್ಲುವುದಿಲ್ಲ. ಕುಮ್ಮಟದುರ್ಗದ ಮುಮ್ಮಡಿ ಸಿಂಗೆಯ ನಾಯಕ, ವೀರ ಕಂಪಿಲರಾಯ ಮತ್ತು ಕುಮಾರರಾಮ ಈ ವಂಶದ ಪ್ರಮುಖ ಅರಸರು. ವಿಜಯನಗರ ಸಾಮ್ರಾಜ್ಯದ ಸ್ಥಾಪಕರಾದ ಹರಿಹರ–ಬುಕ್ಕರು ಕುಮಾರರಾಮನ ಭಾವನಾದ ಸಂಗಮನ ಮಕ್ಕಳು. ಕುಮ್ಮಟದುರ್ಗ ಅವಸಾನವೇ ವಿಜಯನಗರ ಸಾಮ್ರಾಜ್ಯ ಸ್ಥಾಪನೆಗೆ ನಾಂದಿ ಮತ್ತು ಅಡಿಗಲ್ಲಾಯಿತು. ಈ ಸಾಮ್ರಾಜ್ಯದ ತುಳುವ ಸಂತತಿಯವರು 'ತಳವಾರಿಕೆ' ಹಿನ್ನೆಲೆಯಿಂದ ಬಂದವರೆಂದು, ಇವರ ತಾತ ತಳವಾರ ಈಶ್ವರ ನಾಯಕ ಎಂಬ ಹೆಸರು ಇದಕ್ಕೆ ಸಾಕ್ಷೀಕರಿಸುತ್ತದೆ."[೧೯] ಎಂಬ ವಾದಕ್ಕೆ ಹಲವಾರು ದಾಖಲೆಗಳಿರುವುದರಿಂದ ಇದು ಸತ್ಯವೆನಿಸುತ್ತದೆ.

ವಿಜಯನಗರ ಕಾಲದಲ್ಲಿ ಹಿಂದಿನ ರಾಜಪ್ರಭುತ್ವಗಳಲ್ಲಿ ತಳವಾರಿಕೆ ಪ್ರಚಲಿತದಲ್ಲಿದಂತೆ ಇಲ್ಲಿಯೂ ಸಹ ಆಡಳಿತ ವ್ಯವಸ್ಥೆಯಲ್ಲಿ, ರಕ್ಷಣೆ ವಿಭಾಗಗಳಲ್ಲಿ ತಳವಾರರು ಪ್ರಮುಖ ಪಾತ್ರ ವಹಿಸಿದ ಬಗ್ಗೆ ದಟ್ಟವಾದ ಮಾಹಿತಿಗಳಿವೆ. "ವಿಜಯನಗರವನ್ನಾಳಿದ ಸಂಗಮ, ಸಾಳುವ, ತುಳುವ ಮತ್ತು ಅರವೀಡು ವಂಶಗಳ ಪ್ರಮುಖ ಅರಸರು ತಳವಾರಿಕೆಗೆ ಪ್ರೋತ್ಸಾಹ ಕೊಟ್ಟಿದ್ದು, ಗಮನಾರ್ಹವಾಗಿದೆ. ವಿಶೇಷವಾಗಿ ತುಳುವ ಅರಸರು ತಳವಾರಿಕೆಗೆ ಆದ್ಯತೆ ಕೊಟ್ಟು ರಕ್ಷಣಾ ಕ್ಷೇತ್ರವನ್ನು ಇಮ್ಮಡಿಗೊಳಿಸಿದ್ದು ಸ್ಪಷ್ಟ. ಅರಸರು 'ತಳವಾರ' ವೃತ್ತಿಯಲ್ಲಿದ್ದ ವ್ಯಕ್ತಿಗಳಿಗೆ ಭೂದಾನ, ತೆರಿಗೆ(ಸುಂಕ) ಕೊಡುವ ಮತ್ತು ಕೆಲವು ಹಕ್ಕು ಬಾಧ್ಯತೆಗಳಿಂದ ವಿನಾಯ್ತಿ ಪಡೆದಿದ್ದರು"[೨೦] ಎಂಬ ಮಾಹಿತಿ ದೊರೆಯುತ್ತದೆ. ಹಾಗೆಯೇ ತುಳುವ ಸಂತತಿಯ ಶ್ರೀಕೃಷ್ಣ ದೇವರಾಯನ ಕಾಲದಲ್ಲಿ ತಳವಾರಿಕೆ ಬಗ್ಗೆ ಹೆಚ್ಚಿನ ಮಾಹಿತಿಗಳು ಲಭ್ಯವಾಗುತ್ತವೆ. ಮೂಲತಃ "ತುಳುವ ಸಂತತಿ ತಳವಾರಿಕೆಯಿಂದ ವಿಕಾಸವಗಿರಬೇಕು. ಇದರ ಮೂಲಪುರುಷನು ತಳವಾರ ಈಶ್ವರ ನಾಯಕ, ನರಸನಾಯಕ ಮೊದಲಾದವರನ್ನು ಇಲ್ಲಿ ಸ್ಮರಿಸಬಹುದು."[೨೧] ಈ ಮಾಹಿತಿಯಿಂದ ವಿಜಯನಗರದ ಅರಸರು ತಳವಾರಿಕೆ ಹಿನ್ನೆಲೆಯವರು ಎಂಬುದಕ್ಕೆ ಪುಷ್ಠಿ ನೀಡುತ್ತದೆ.

ಶ್ರೀಕೃಷ್ಣದೇವರಾಯ ವಿರಚಿತ 'ಅಮುಕ್ತ ಮೌಲ್ಯದ' ಕೃತಿಯಲ್ಲಿ ತಳವಾರರ ಪ್ರಸಂಗವಿದೆ. "ಇಲ್ಲಿ ರಾತ್ರಿಯ ಹೊತ್ತು ಕಾವಲು ಕಾಯುವ ತಳವಾರರ ಪ್ರಾಮಾಣಿಕತೆಯನ್ನು ಕುರಿತು ರಾಯನು ತನ್ನ ಕಾವ್ಯದಲ್ಲಿ ವಿಶೇಷವಾಗಿ ಹೇಳಿದ್ದಾನೆ. ರಾತ್ರಿ ಯಾರಾದರೂ ದಾರಿಯಲ್ಲಿ ಏನಾದರೂ ಬೀಳಿಸಿಕೊಂಡು ಹೋದರೆ, ಅದನ್ನು ಜೋಪಾನವಾಗಿ ಕಾಯ್ದಿಟ್ಟು ಮಾಲೀಕರಿಗೆ ಒಪ್ಪಿಸುತ್ತಿದ್ದ ಪ್ರಾಮಾಣಿಕ ತಳವಾರರನ್ನು ಸ್ಮರಿಸಿದ್ದನ್ನು ನೋಡಬಹುದು."[೨೨] ವಿಜಯನಗರ ಸಾಮ್ರಾಜ್ಯದ ಕಾಲಕ್ಕಾಗಲೇ ವಿವಿಧ ಮಂಡಲ, ಪಟ್ಟಣ, ಗ್ರಾಮಗಳಲ್ಲಿ ಗ್ರಾಮಕಾವಲುಗಾರನಾಗಿ ಹಾಗೂ ವಿವಿಧ ಆಡಳಿತದ ನಿರ್ವಹಣೆಗಾಗಿ 'ತಳವಾರ'ನನ್ನು ನೇಮಿಸುವ ಪದ್ಧತಿ ರೂಢಿಗೆ ಬಂದಿತು. ಈ ಮೂಲಕವಾಗಿ ಗ್ರಾಮಾಡಳಿತಕ್ಕೆ ಒತ್ತು ನೀಡುವಲ್ಲಿ ವಿಜಯನಗರ ಅರಸರು ಪ್ರಮುಖರೆನಿಸಿದ್ದಾರೆ.

ತಳವಾರಿಕೆ ಪರಂಪರೆಯಿಂದ ಬಂದ ವೃತ್ತಿ. ಇಲ್ಲಿ ಜಾತಿ ಮತ್ತು ಅಭಿಮಾನದಿಂದ ವಂಶಪರಂಪಾರ್ಯವಾಗಿ ಬೇಡ ನಾಯಕ ಸಮುದಾಯದವರಲ್ಲಿ ಹಿಂದಿನಿಂದಲೂ ಉಳಿದುಕೊಂಡು ಬಂದಿದೆ. ಇದಕ್ಕೆ ಪೂರಕವೆಂಬಂತೆ ಕೃಷ್ಣದೇವರಾಯನ ತಾಯಿ ನಾಗಲಾದೇವಿ ಬೇಡ ಕುಲಕ್ಕೆ ಸೇರಿದವಳು. ಈ ಕಾರಣಕ್ಕಾಗಿಯೇ ಸಿಂಹಾಸನ ಪಡೆಯುವಲ್ಲಿ ಕೃಷ್ಣದೇವರಾಯ ಹೋರಾಡ ಬೇಕಾಯಿತು. ಪಟ್ಟದರಸಿಗೆ ಜನಿಸಿದ ಅಚ್ಯುತರಾಯ ಹಾಗೂ ಕೃಷ್ಣದೇವರಾಯನ ಆಡಳಿತಕ್ಕೆ ಸಂಬಂಧಿಸಿದಂತೆ ಶಾಸನವೊಂದು ಈ ರೀತಿಯಾಗಿದೆ. "ಪೂರ್ವದಾರಭ್ಯವಾಗಿ ನಮಗೆ ಕಾವಲಿ(ಕಂಪ) ನಾಡ ದಳವಾರಿಕೆಯು ನಡಿಯು ಆಯಿತು. ನಮ್ಮ ಮರಿಯಾದೆ ದಯ ಪಾಲಿಸಬೇಕೆಂದು ಕೇಳಿಕೊಂಡವನಾದನು. ಅದೇ ಮೇರೆಗೆ ಕೃಷ್ಣರಾಯನು ದಯಪಾಲಿಸಿದ ವಿವರ, ನಾಡ ದಳವಾರಿಕೆ ಸ್ವಾಸ್ಥಿಯು ಕುಮಾರರಾಮನ ವಂಶಸ್ಥರಾದ ಹಿರೇ ಬೊಮ್ಮಂತ ರಾಜನಿಗೆ ಜಾಗೀರು ಕೊಟ್ಟ ಗ್ರಾಮಗಳು. ಉಜನಿ(ಇಮ್ಮಡಿ ನಾಯಕ), ಜರಿಮಲೆ(ಮಲ್ಲಿಕಾರ್ಜುನ ನಾಯಕ), ಗುಡೆಕೋಟೆ(ಈರಪ್ಪ ನಾಯಕ), ಬಾಣರಾವಿ(ರಾಜಪ್ಪ ನಾಯಕ), ಸಂಡೂರು(ಬಿಸಾಳ ನಾಯಕ) ವಡ್ಡು(ಚನ್ನಪ್ಪ ನಾಯಕ). ಕುಡತಿನಿ(ಹಿರೇ ಬೊಮ್ಮಂತ ನಾಯಕ) ರಾಜರು ಆಳುತ್ತಿದ್ದರು."[೨೩] ಈ ಮಾಹಿತಿಯನ್ವಯ ವಿಜಯನಗರದಿಂದ ವಿಕಾಸವಾದ ಹಲವಾರು ಸಾಮಂತ ಅರಸರು ಈ ನಾಡ ತಳವಾರಿಕೆ ಮತ್ತು ಕಾವಲಿಗಾಗಿ ಕೆಲವು ಪ್ರಾಂತ್ಯಗಳನ್ನು ಹಂಚುತ್ತಿದ್ದರೆಂಬುದು ತಿಳಿಯುತ್ತದೆ.

೧೭ನೇ ಶತಮಾನದಲ್ಲಿ ವಿಜಯನಗರದ ಸಾಮ್ರಾಜ್ಯದ ಆಧಿಪತ್ಯವು ಸಂಪೂರ್ಣವಾಗಿ ಕೊನೆಗೊಂಡ ನಂತರ ಬಿಜಾಪುರದ ಆದಿಲ್‌ಷಾಹಿಗಳು ಉಚ್ರಾಯ ಸ್ಥಿತಿಗೆ ಬಂದರು. ಇನ್ನೊಂದೆಡೆ ಹೈದರಾಬಾದ್ ನಿಜಾಮರು, ಮತ್ತೊಂದೆಡೆ ಮೈಸೂರಿನಲ್ಲಿ ಟಿಪ್ಪು ಸುಲ್ತಾನನು ವಿಜಯನಗರ ಸಾಮ್ರಾಜ್ಯದ ಎಲ್ಲಾ ಪಾಳೆಯ ಪಟ್ಟುಗಳನ್ನು ತಮ್ಮ ವಶಕ್ಕೆ ತೆಗೆದುಕೊಂಡರು. "ವಿಜಯನಗರೋತ್ತರ ಕಾಲದಲ್ಲಿ ತಲೆ ಎತ್ತಿದ ಚಿಕ್ಕ ಪುಟ್ಟ ಸಂಸ್ಥಾನಗಳಲ್ಲಿ ಮುಖ್ಯವಾಗಿ ಕೆಳದಿಯ ನಾಯಕರು, ಯಲಹಂಕದ ನಾಯಕರು, ಚಿತ್ರದುರ್ಗ ನಾಯಕರು, ಮೊದಲ ಹಂತಕ್ಕೆ ಸೇರುತ್ತಾರೆ. ಇನ್ನು ಉಳಿದಂತೆ ಸಂತೆಬೆನ್ನೂರು, ಹರಪನಹಳ್ಳಿ, ಕನಕಗಿರಿ, ನಾಯಕನಹಟ್ಟಿ, ಹಾಗಲವಾಡಿ, ಮುತ್ತೂಡು, ಹರತಿಕೋಟೆ, ಪಾಳೆಯಗಾರರು ಮೂಲತಃ ಬೇಡ ಜನಾಂಗಕ್ಕೆ ಸೇರಿದವರಾಗಿ ತಮ್ಮ ಆಡಳಿತದಲ್ಲಿ ತಳವಾರಿಕೆ, ನಾಡ ದಳವಾರಿಕೆ ಹುದ್ದೆಗಳನ್ನು ಮುಂದುವರಿಸಿಕೊಂಡು ಬಂದಿದ್ದಾರೆ. ಇವರ ನಂತರದಲ್ಲಿ ಬಂದ ಸುರಪುರ, ಗುಡಗುಂಟಿ, ಕೊಡೆಕಲ್ಲು, ಕರೆಗುಡ್ಡ, ಗುಂತಗೋಳ, ದೇವರುಗಳ ಅರಕೇರಿ, ರೊಡ್ಲಬಂಡಿ ಗುತ್ತಿ, ಕಪ್ಪಲುದುರ್ಗ, ದೊಡಿ ದೊಂಟಿ, ಕಪಟರಾಳ, ಸೊಂಡಿ, ಪಾಮನಕಲ್ಲು, ಪ್ಯಾಪಲಿ, ರತ್ನಗಿರಿ, ರಾಯದುರ್ಗ, ತರಿಕೆರೆ, ಅಗಳಿ, ಪರಶುರಾಮಪುರ, ತಳಕು, ದೊಡ್ಡೇರಿ, ಮೊಳಕಾಲ್ಮೂರು, ಪೆನುಗೊಂಡ, ಮುಂಡಿಕೊಟೆ, ದ್ಯಾವನಹಳ್ಳಿ(ಮುಟ್ಟಿ ಬೆಳಗುತ್ತಿ) ತಲಚೇರಿ, ದೊರೆಮಳ ನನ್ನಿವಾಳ, ಗೋವನೂರ, ಮಲೆದುರ್ಗ, ಆದವಾನಿ, ಚಂದ್ರಗಿರಿ,

ಚಿಕ್ಕನಾಯಕನಹಳ್ಳಿ, ರಾಯಚೂರು, ಉಚ್ಚಂಗಿದುರ್ಗ, ಚಿಕ್ಕಲದಿನ್ನಿ, ಸಂಡೂರು, ಉಜ್ಜನಿ, ಬಾಣರಾವಿ, ವಡ್ಡು, ಕುಡತಿನಿ, ಹಾವನೂರು, ಮುದಗಲ್ಲು, ಜಡಕಲ್ಲುದುರ್ಗ, ಅನಂತಪುರ, ಕುಂದುರ್ಪೆ, ಹೊಸಕೋಟೆ, ಹಿರಿಯೂರು, ಬೂದಿಹಾಳು, ಐಮಂಗಲ, ಬುಕ್ಕಪಟ್ಟಣ, ಕ್ಯಾದಿಗೇರಾ, ರಾಯದುರ್ಗ, ರಾಮಗಿರಿ, ರಾಣಿಬೆನ್ನೂರು, ಮಧುರೆ ಮತ್ತು ಇತರ ಸ್ಥಳಗಳು ಬೇಡನಾಯಕ, ಸ್ಥಾಪಿಸಿದ ಪಾಳೆಯ ಪಟ್ಟುಗಳು."[೨೪] ಎಂದು ಹೇಳಲಾಗಿದೆ.

ಈ ಎಲ್ಲಾ ಮನೆತನಗಳು ಒಬ್ಬರಿಗೊಬ್ಬರು ಸಂಬಂಧಗಳನ್ನು ಬೆಳೆಸುವಲ್ಲಿ ಹಾಗೂ ಪರಸ್ಪರ ಹೊಂದಾಣಿಕೆ ಪ್ರವೃತ್ತಿ ಇಲ್ಲದಿರುವ ಕಾರಣದಿಂದ ಇವರ ಮಧ್ಯೆ ಹಲವಾರು ಕಿರುಕುಳ, ಕಾಳಗಗಳು ನಡೆದವು. ಇಂತಹ ದಬ್ಬಾಳಿಕೆ ಹೋರಾಟದಿಂದಾಗಿ ಈ ಎಲ್ಲಾ ವಂಶಸ್ಥರು ಕರ್ನಾಟಕ ಚರಿತ್ರೆಯಲ್ಲಿ ತಮ್ಮ ಅವಸಾನವೇ ಇಲ್ಲದಂತೆ ಮಾಡಿಕೊಂಡಿದ್ದಾರೆ. ಶಾಸನಗಳ ಆಧಾರದಿಂದ ಈ ಎಲ್ಲಾ ಸಂಸ್ಥಾನಿಕರಲ್ಲಿ ಗೌಡ, ಶ್ಯಾನುಭೋಗ, ತಳವಾರ ಹುದ್ದೆಗಳಿದ್ದ ಬಗೆಗೆ ಮಾಹಿತಿಗಳು ದೊರೆಯುತ್ತದೆ. "ನಾಲ್ಕನೇ ಆಂಗ್ಲೋ ಮೈಸೂರು ಯುದ್ಧದ ಸಂದರ್ಭಕ್ಕೆ ಟಿಪ್ಪು ಸುಲ್ತಾನನು ಪಾಳೆಯಗಾರರ ವಿರೋಧಿನೀತಿಯನ್ನು ಅನುಸರಿಸಿದ ಕಾರಣಕ್ಕೆ ಕೆಲವು ಅತೃಪ್ತ ಪಾಳೆಯಗಾರರು ಟಿಪ್ಪುವಿನ ವಿರುದ್ಧ ಬ್ರಿಟಿಷರಿಗೆ ಸಹಾಯ ಮಾಡಿ ಟಿಪ್ಪುವನ್ನು ಕೊಂದರು(೧೭೯೯). ಈ ಸಂದರ್ಭಕ್ಕೆ ಬೇಡ ಸಮುದಾಯದವರಲ್ಲಿ ಪಾಳೆಯಗಾರರು(ಸಂಸ್ಥಾನಿಕರು) ಎನಿಸಿಕೊಂಡರು. ಪಾಳೆಯಗಾರರು ಮೊದಲನೇ ವರ್ಗಕ್ಕೆ ಸೇರಿದರೆ, ಗುರಿಕಾರ, ಸುಭೇದಾರ, ಸೈನಿಕ, ತುಬಾಕಿ, ಪೊಲೀಸ್ ಪಾಟೀಲ, ಕಟ್ಟೆಮನೆಯವರು, ಮಾಲಿಪಾಟೀಲ, ತಳವಾರ, ಓಲೆಕಾರ, ಮುಂತಾದ ಹುದ್ದೆಗಳು ಎರಡನೇ ವರ್ಗಕ್ಕೆ ಸೇರಲ್ಪಟ್ಟಿತು. ಬ್ರಾಹ್ಮಣ ಪುರೋಹಿತ ಇಲ್ಲವೆ, ವೀರಶೈವ ಜಂಗಮರ ಕೈಕೆಳಗೆ ಧಾರ್ಮಿಕ ಕಾರ್ಯಗಳಲ್ಲಿ ಭಾಗವಹಿಸುತ್ತಿದ್ದ ಬೇಡ ಜನಾಂಗದವರೇ ಆದ ದಾಸಯ್ಯ, ಸಮರಾಯ, ಪೂಜಾರಿಗಳು ಮೂರನೇ ವರ್ಗಕ್ಕೆ ಸೇರಿದ್ದರು. ಯಾವುದೇ ಹುದ್ದೇ ವೃತ್ತಿಯನ್ನು ನಿರ್ದಿಷ್ಟವಾಗಿ ಹೊಂದದೆ ಬೇಟೆ, ಕೃಷಿ, ಪಶುಪಾಲನೆಯಲ್ಲಿ ತೊಡಗಿ ಬುಡಕಟ್ಟು ಜೀವನ ನಡೆಸುತ್ತಿದ್ದವರನ್ನು ನಾಲ್ಕನೇ ವರ್ಗದಲ್ಲಿ ನೋಡಲಾಗುತ್ತಿತ್ತು."[೨೫]

"ಟಿಪ್ಪು ಸುಲ್ತಾನನ ಮರಣದ ನಂತರ ಬ್ರಿಟಿಷರು ಪಾಳೆಯಗಾರರ ಬಗ್ಗೆ ಹೈದರಾಲಿ ಮತ್ತು ಟಿಪ್ಪು ಸುಲ್ತಾನನು ಅನುಸರಿಸಿದ ನೀತಿಗಿಂತ ಕಠಿಣವಾದ ನೀತಿಯನ್ನು ಅನುಸರಿಸಿದರು. ಪಾಳೆಯಗಾರರು ಮಾಸಿಕ ಇಲ್ಲವೆ, ವಾರ್ಷಿಕ ವಿಶ್ರಾಂತಿವೇತನವನ್ನು ನೀಡಿದರು. ಜಹಗೀರು ಕೊಟ್ಟ ಜಮೀನುಗಳಿಗೆ ತೆರಿಗೆಗಳನ್ನು ವಿಧಿಸಿದರು. ಕಾಲಕ್ರಮೇಣ ವಿಶ್ರಾಂತಿವೇತನವನ್ನು ನಿಲ್ಲಿಸಿದರು. ಬರಬರುತ್ತಾ ಇವರನ್ನೇ ಮಿಲಿಟರಿ ಸೇವೆಗೆ, ಪೊಲೀಸ್ ಮತ್ತು ಅರಣ್ಯರಕ್ಷಕರನ್ನಾಗಿ ಇಂತಿಷ್ಟು ಸಂಬಳಕ್ಕೆಂದು ತಮ್ಮ ಬಳಿ ಇಟ್ಟುಕೊಂಡರು."[೨೬] ಹೀಗೆ ಒಂದು ಕಾಲದಲ್ಲಿ ಪಾಳೆಯಗಾರರಾಗಿ ರಾಜಾರೋಷವಾಗಿ ಬದುಕಿದ್ದ ಕುಟುಂಬಗಳನ್ನು ಸೇವಕ ವರ್ಗವನ್ನಾಗಿ ಮಾಡಿಕೊಂಡು ಬೇಡ ನಾಯಕರನ್ನು ಆರ್ಥಿಕವಾಗಿ ಸಬಲರಾಗದಂತೆ ತಡೆದವರಲ್ಲಿ ಬ್ರಿಟಿಷರು ಮೊದಲಿಗರಾದರೆ,

ಅನಂತರದಲ್ಲಿ ಊರಿನ ಗೌಡ, ಕುಲಕರ್ಣಿಗಳು ತಮ್ಮ ಮನೆಯ ಆಳುಗಳಂತೆ ತಳವಾರರನ್ನು ಬಳಸಿಕೊಂಡು ಇವರಿಗೆ ರಾಜಕೀಯ, ಆರ್ಥಿಕ, ಸಾಮಾಜಿಕವಾಗಿ ಸಿಗುತ್ತಿದ್ದ ಮಾನ್ಯತೆಗಳನ್ನು ಕಡಿತಗೊಳಿಸಿ, ಒಬ್ಬ ಸಾಮಾನ್ಯ ಸೇವಕನಂತೆ ತಳವಾರನನ್ನು ನಡೆಸಿಕೊಂಡು ಬಂದಿದ್ದಾರೆ. ಊರಿನ ಶಾಂತಿ, ಸುವ್ಯವಸ್ಥೆಗಾಗಿ ಸದಾ ಗಸ್ತು ತಿರುಗುತ್ತಾ ಊರಿನ ಕಳ್ಳರನ್ನು ನಿಯಂತ್ರಿಸುತ್ತಿದ್ದ ತಳವಾರ ಇಂದು ಕಂದಾಯ ಇಲಾಖೆಯ ಗ್ರಾಮ ಸಹಾಯಕನಾಗಿ ಸೇವೆ ಸಲ್ಲಿಸುತ್ತಿದ್ದಾನೆ.

## ೨.೩. ಪೌರಾಣಿಕ ಹಿನ್ನೆಲೆ

ಯಾವುದೇ ಒಂದು ಜನಾಂಗ ಮತ್ತು ವೃತ್ತಿ ಹುಟ್ಟಬೇಕಾದರೆ ಅದಕ್ಕೆ ಕೆಲವು ಅನಿವಾರ್ಯವಾದ ಕಾರಣಗಳಿರುತ್ತವೆ. ಒಂದು ಸಮಾಜವ್ಯವಸ್ಥೆಯಲ್ಲಿ ಕೆಲವು ಆಚರಣೆಗಳು ಪ್ರಕೃತಿ ನಿಯಮದಂತೆ ರೂಪಿತವಾಗಿರುತ್ತವೆ. ಅದೇ ರೀತಿಯಾಗಿ 'ತಳವಾರರ' ಹಿನ್ನೆಲೆಯನ್ನು ಗಮನಿಸಿದಾಗ ಇವರಲ್ಲಿ ಬೇಡ ನಾಯಕ ಸಮುದಾಯಕ್ಕೆ ಸೇರಿದವರೇ ಅಧಿಕ ಸಂಖ್ಯೆಯಲ್ಲಿರುವುದರಿಂದ ಇವರ ಹಿನ್ನೆಲೆಯನ್ನು ಆದಿ ಋಷಿ 'ವಾಲ್ಮೀಕಿ'ಯಿಂದ ಆರಂಭಿಸುತ್ತಾರೆ. "ವಾಲ್ಮೀಕಿ ಮೂಲತಃ ಒಬ್ಬ ಕ್ಷತ್ರಿಯ"[೨೭] ಎಂಬುದನ್ನು ಕೆಲವು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ವಾಲ್ಮೀಕಿಯ ಜಾತಿ ಮತ್ತು ಹಿನ್ನೆಲೆಗೆ ಸಂಬಂಧಿಸಿದಂತೆ ಹಲವು ಐತಿಹ್ಯಗಳಿವೆ.

ಈ ಸೃಷ್ಟಿಯ ಕಾಲಚಕ್ರದಲ್ಲಿ ಧರ್ಮ, ಅಧರ್ಮ ಕಾರ್ಯಗಳು ಹಿಂದಿನಿಂದಲೂ ನಡೆಯುತ್ತಲಿವೆ. ಜೀವನವನ್ನು ಸನ್ಮಾರ್ಗದತ್ತ ಕೊಂಡೊಯ್ಯಲು ಧರ್ಮಗಳು ಹುಟ್ಟಿಕೊಂಡಿವೆ. ಇಂತಹ ಧರ್ಮ ಮತ್ತು ಪ್ರಾಣಿಸಂಕುಲಕ್ಕೆ ದುರಾತ್ಮರಿಂದ ತೊಂದರೆ ಉಂಟಾಗುವ ಸಂದರ್ಭದಲ್ಲಿ ಅಧರ್ಮ ವಿರೋಧಿಯಾದ 'ಮನು' ಎಂಬ ವೀರ ಹುಟ್ಟಿದನು. ಇತನು ಉದ್ರಿಕ್ತವಾಗಿ ಸಾಧು-ಸತ್ಪುರುಷರ ಸಂರಕ್ಷಣಾರ್ಥ ದಂಡಪ್ರಯೋಗದ ಮೂಲಕ ಧರ್ಮಸಂರಕ್ಷಣೆಗೆ ಮುಂದಾದನು. ಮೊದಲು ಜನರನ್ನು ಒಲಿಸಿದನು. ನಂತರ ಬಲವನ್ನು(ಸೈನ್ಯ) ಕಟ್ಟಿದನು. ಸತ್ಪುರುಷರ ಪ್ರೇರಣೆಗಳನ್ನು ಪಡೆದು ಕ್ಷಾತ್ರ ಧರ್ಮಾವಲಂಬಿಗಳ ಮೂಲಪುರುಷ ಎನಿಸಿಕೊಂಡನು. ವೇದಗಳಿಗೆ ಅನುಸಾರವಾಗಿ ಮಾನವರಿಗೆ ಮಾರ್ಗದರ್ಶನವಾದ 'ಮನುಧರ್ಮಶಾಸ್ತ್ರ' ಎಂಬ ಮಹಾಗ್ರಂಥವನ್ನು ರಚಿಸಿದನು. ಈತನ ವಂಶದಲ್ಲಿ ಸೂರ್ಯ-ಚಂದ್ರರೆಂಬ ಮಹಾಪುರುಷರು ಉದ್ಭವಿಸಿ ಪ್ರಖ್ಯಾತರಾಗಿ ರಾಜ್ಯ ಪರಿಪಾಲನೆ ಮಾಡಿದರು. ಇವರ ನಂತರದಲ್ಲಿ ಮನುವಿಗೆ ಏಳನೇ ತಲೆಯವನಾಗಿ ಚಂದ್ರ ವಂಶದಲ್ಲಿ 'ಕಾರ್ತವೀರ್ಯಾರ್ಜುನ'ನೆಂಬ ಮಹಾಪುರುಷ ಹುಟ್ಟಿದನು. ಇತನು 'ಹೇಹಯ' ಎಂಬ ರಾಜ್ಯವನ್ನು ಆಳುತ್ತಿದ್ದನು. ಅದೇ ಕಾಲದಲ್ಲಿ ನಾರಾಯಣಾಂಶ ಸಂಭೂತನಾದ ಜಮದಗ್ನಿಯ ಮಗನಾದ 'ಪರಶುರಾಮನು ಶಿವನಸನ್ನಿಧಿಯಲ್ಲಿ ವೇದ ವೇದಾಂತ, ವೇದಾಂಗ, ಧನುರ್ವೇದಾದಿ ಸಕಲ ವಿದ್ಯೆಗಳನ್ನು ಕಲಿತು, ತನ್ನ ತಂದೆಯ ಆಶ್ರಯದಲ್ಲಿದ್ದನು. ಇತ್ತ ಲೋಕೈಕ ವೀರನಾದ ಕಾರ್ತವೀರ್ಯಾರ್ಜುನನು ಇವನ ಏಳಿಗೆಯನ್ನು ಸಹಿಸಲಾರದೆ ಪ್ರತ್ಯಕ್ಷವಾಗಿ ಜಮದಗ್ನಿಯ ಆಶ್ರಮಕ್ಕೆ

ಹೋಗಿ ಅಲ್ಲಿದ್ದ ಕಾಮಧೇನು ಹಸುವನ್ನು ಕಂಡು ಅದನ್ನು ತನಗೆ ಕೊಡುವಂತೆ ಜಮದಗ್ನಿಯನ್ನು ಕೇಳಲು ಅವರು ಅದನ್ನು ಕೊಡಲಿಲ್ಲವಾದ್ದರಿಂದ ಒತ್ತಾಯದಿಂದ ಒಯ್ಯಲು ಪ್ರಯತ್ನಿಸಿದಾಗ ಪರಶುರಾಮನು ಇವರನ್ನು ಹಿಮ್ಮೆಟ್ಟಿಸಿದನು. ಅಷ್ಟಕ್ಕೆ ಬಿಡದ ಕಾರ್ತವೀರ್ಯಾರ್ಜುನನ ಮಕ್ಕಳು ಪರಶುರಾಮನು ಆಶ್ರಮದಲ್ಲಿಲ್ಲದ ವೇಳೆ ಜಮದಗ್ನಿಯನ್ನು ಕೊಂದು, 'ಕಾಮಧೇನು'ವನ್ನು ಕದ್ದೊಯ್ಯದರು. ತನ್ನ ತಂದೆಯ ಮರಣದಿಂದ ಕೋಪಿತಗೊಂಡ ಪರಶುರಾಮನು ಕೆರಳಿ, ಪತಿ ವಿಯೋಗದಿಂದ ಶೋಕಗ್ರಸ್ತಳಾದ ತಾಯಿಯ ಸುತ್ತ ೨೧ ಸಲ ಪ್ರದಕ್ಷಿಣೆ ಮಾಡಿ, ತನ್ನ ತಂದೆಯ ಸಾವಿಗೆ ಕಾರಣರಾದ ಕ್ಷತ್ರಿಯರೆಲ್ಲರನ್ನು ನಾಶ ಮಾಡುವ ಶಪಥ ಮಾಡಿದನು. ಅದರಂತೆ ತನ್ನ ಸೈನ್ಯದೊಂದಿಗೆ ಒಂದು ಕಡೆಯಿಂದ ಕ್ಷತ್ರಿಯರೆಲ್ಲರನ್ನು ನಾಶಪಡಿಸುತ್ತ ಬಂದನು. ಈ ಮೂಲಕವಾಗಿ ಅವರ ಶಿರಚ್ಛೇದನ ಮಾಡುತ್ತಾ ಅವರ ರಕ್ತದಿಂದ ತನ್ನ ತಂದೆಗೆ ತರ್ಪಣ ನೀಡಿದನು.

ಕೋಪಾವಿಷ್ಠನಾದ ಪರಶುರಾಮನಿಗೆ ಹೆದರಿ ಅನೇಕ ಕ್ಷತ್ರಿಯರು ಈತನಿಂದ ತಪ್ಪಿಸಿಕೊಳ್ಳಲು ಅರಣ್ಯಗಳಿಗೆ ಓಡಿ ಹೋದರು. ಹೀಗೆ ಅರಣ್ಯ ಸೇರಿಕೊಂಡ ಇವರು ಮುಂದೆ ಕ್ಷತ್ರಿಯ ನಾಮದ ಬದಲಿಗೆ ಅಖಿಲಾಂಡ ಕೋಟಿ ಬ್ರಹ್ಮಾಂಡ ನಾಯಕನಾದ ದೇವದೇವನ ನಾಮಾಂಕಿತವಾದ 'ನಾಯಕ' ನಾಮವನ್ನು ಸ್ವೀಕಾರ ಮಾಡಿಕೊಂಡು ಅರಣ್ಯಗಳಲ್ಲಿ ವಾಸಿಸತೊಡಗಿದರು. ಅರಣ್ಯಗಳಲ್ಲಿನ ಕಾಡುಪ್ರಾಣಿಗಳಿಂದ ರಕ್ಷಣೆಗಾಗಿ ವಿವಿಧ ಆಯುಧಗಳನ್ನು ಹೊಂದಿ, ಆಹಾರಕ್ಕಾಗಿ ಅರಣ್ಯಗಳಲ್ಲಿ ಸಂಚರಿಸುತ್ತಾ, ಬೇಟೆಯಾಡುತ್ತಾ ಬಂದ ಇವರು 'ಕಿರಾತ'ರೆನಿಸಿಕೊಂಡರು. ಇವರು ರಾಜ ಮರ್ಯಾದೆಯಿಂದ ಬೇಟೆಯಾಡುವುದರಲ್ಲಿ ನಿಸ್ಸೀಮರಾಗಿದ್ದರಿಂದ 'ಬೇಡ'ರೆಂತಲೂ ಇಟ್ಟ ಗುರಿ ತಪ್ಪದೆ ಹೊಡೆಯುವುದರಿಂದ 'ಗುರಿಕಾರ'ರೆಂತಲೂ ಕರೆಯಲ್ಪಟ್ಟರು."[೨೮]

ಕಾಲಾಂತರದಲ್ಲಿ ಕಿರಾತರಲ್ಲೊಬ್ಬನು ಈ ಗುಂಪಿಗೆ ಯಜಮಾನನಾಗಿ ದರ್ಪದಿಂದ ಎಲ್ಲರನ್ನು ನಿಭಾಯಿಸುತ್ತಿದ್ದನು. ಆತನೇ ಆದಿಕವಿ ಎಂದು ಖ್ಯಾತನಾದ 'ಮಹರ್ಷಿ ವಾಲ್ಮೀಕಿ'. ವಾಲ್ಮೀಕಿ ಒಬ್ಬ ಬೇಡ. ಈತನ ಕಾಯಕವೇ ಬೇಟೆಯಾಡುವುದು. ಒಂದು ದಿನ ಬೇಟೆಯ ಸಂದರ್ಭದಲ್ಲಿ 'ಕ್ರೌಂಚ ಪಕ್ಷಿ'ಯೊಂದನ್ನು ಕೊಂದನು. ಆ ಸಂದರ್ಭದಲ್ಲಿ ಇದರ ಜೊತೆಗಾರ ಪಕ್ಷಿಯ ವೇದನೆ, ಆಕ್ರಂದನ ಕೇಳಿದ ವಾಲ್ಮೀಕಿಗೆ ಜ್ಞಾನೋದಯವಾಯಿತು. ಆ ಸಂದರ್ಭಕ್ಕೆ ಆತನ ಬಾಯಿಂದ ಹೊರಟ 'ಮಾ ನಿಷಾದಾ' ಎಂಬ ಮಾತು ಆತನ ನಡವಳಿಕೆಯನ್ನೇ ಬದಲಿಸಿತು. ಈ ಮಾತು ಈಗಾಗಲೇ ಜನಜನಿತವಾಗಿದೆ. ವಾಲ್ಮೀಕಿ ತನ್ನ ಪೂರ್ವಾಶ್ರಮದಲ್ಲಿ ದುಷ್ಟನಾಗಿದ್ದನೆಂದು, ರಾಮನಾಮದ ಮಹಿಮೆಯಿಂದ ಋಷಿಯಾದನೆಂದು ಹೇಳುವುದು ಅತಿಶಯ ವಾದವಾಗುತ್ತದೆ.

ಈ ಐತಿಹ್ಯಗಳು ವಾಲ್ಮೀಕಿಯ ಮೂಲದ ಬಗ್ಗೆ ಹಲವಾರು ಭಿನ್ನಾಭಿಪ್ರಾಯಗಳಿದ್ದರೂ ಸಹ ಬೇಟೆಯ ಹಿನ್ನೆಲೆ ಮತ್ತು ಬೇಡರ ಜನಾಂಗಕ್ಕೆ ಈತನೇ ಮೂಲಪುರುಷನೆಂಬುದು ಗೊತ್ತಾಗುತ್ತದೆ. ವಾಲ್ಮೀಕಿಯ ಬಗೆಗಿನ ಹೇಳಿಕೆಗಳಲ್ಲಿ ಹಲವರು ವಾಲ್ಮೀಕಿಗೆ ಕ್ರೌಂಚಪಕ್ಷಿಯ ವಧೆಯಿಂದ ಜ್ಞಾನೋದಯವಾಗಿ ಆತನು ತಪಸ್ಸಿಗೆ ಕುಳಿತಿದ್ದು, ಆತನ ಮೇಲೆ ಹುತ್ತ(ವಾಲ್ಮೀಕ) ಬೆಳೆದು 'ವಾಲ್ಮೀಕಿ' ಎಂದಾದ ಎಂದು. ಆತನ ತಂದೆ ಪ್ರಚೇತಸರು ಕಾಡನ್ನು ಕಡಿದು ಬಯಲು ಮಾಡಿದರೆಂದೂ, ಆತನಿಗೆ ಒಂದು ಅಮೃತವಾಣಿಯೊಂದು ಕೇಳಿ, ಇದರಿಂದ ತನ್ನ ಪಾಪಪ್ರಜ್ಞೆಯ ಅರಿವಾಗಿ ಆದರ್ಶಜೀವನಕ್ಕೆ ಮಾರ್ಗದರ್ಶಿಯಾದ 'ರಾಮಾಯಣ'ವನ್ನು ಬರೆದನೆಂಬುದು ಇಲ್ಲಿಯವರೆಗಿನ ವಾಲ್ಮೀಕಿ ಬಗೆಗಿನ ನಂಬಿಕೆಯಾಗಿದೆ.

ಜಗತ್ತಿನ ಸೌಹಾರ್ದಯುತ ಜೀವನಕ್ಕಾಗಿ ಹಾಗೂ ಶಾಂತಿ, ಸುಖ ಹಾಗೂ ನ್ಯಾಯ ನಿಷ್ಠೆಯ ಪರಿಪಾಲನೆಗಾಗಿ ವಾಲ್ಮೀಕಿಯು, ವಸಿಷ್ಠ ಮತ್ತು ವಿಶ್ವಾಮಿತ್ರರ ಸಲಹೆಯ ಮೇರೆಗೆ ಶ್ರೀರಾಮನಿಗೆ ಮಾರ್ಗದರ್ಶಕವಾದ, ಅದರಲ್ಲೂ ರಾಮಾಯಣ ನಡೆಯುವುದಕ್ಕಿಂತ ಮುಂಚಿತವಾಗಿ ರಾಮಕಥೆಯನ್ನು ಒಳಗೊಂಡ 'ರಾಮಾಯಣ'ವನ್ನು ಬರೆದನು. ಇಂತಹ ಮಹಾನ್ ಗ್ರಂಥವನ್ನು ನೀಡಿದ ವಾಲ್ಮೀಕಿಯನ್ನು(ಬೇಡ ನಾಯಕ), ತಳವಾರರ ಮೂಲಪುರುಷನೆಂದು ಗುರುತಿಸುತ್ತಾರೆ. ಭಾರತದ ಸಾಮಾಜಿಕ ಮೌಲ್ಯಗಳಾದ ಸಹೋದರತೆ, ಏಕಪತ್ನಿತ್ವ, ಸ್ನೇಹ, ಶಿಕ್ಷಣ, ಸಮಾನತೆ, ಭಕ್ತಿ, ತ್ಯಾಗ, ಧರ್ಮ, ಪಾತಿವ್ರತ್ಯ, ಪ್ರಜಾಕಲ್ಯಾಣ, ರಾಮರಾಜ್ಯ, ವೈಜ್ಞಾನಿಕತೆ ಈ ರೀತಿಯಾದ ಸರ್ವ ಸಂಗತಿಗಳನ್ನು ಕುರಿತು ತನ್ನ ರಾಮಾಯಣದಲ್ಲಿ ವಿವಿಧ ಪಾತ್ರಗಳ ಮೂಲಕ ಸಾದರಪಡಿಸಿದ್ದಾನೆ ಕಿಷ್ಕಿಂದಾ ಕಾಂಡದಲ್ಲಿ ಹಂಪಿಯನ್ನು ಮತ್ತು ಆನೆಗೊಂದಿಯನ್ನು ಚಿತ್ರಿಸಿದ್ದಾನೆ. ಇಲ್ಲಿದ್ದ ಬೇಡ ಕುಲದವಳಾದ ಭಕ್ತೆ ಶಬರಿಯನ್ನು, ಬೇಡ ದೊರೆ ಗುಹಾ ಶ್ರೀರಾಮನ ಸ್ನೇಹಿತನೆಂದು, ರಾಮಾಯಣದ ಮೂಲಕ ತಿಳಿದುಬರುತ್ತದೆ.

"ದ್ವಾಪರ ಯುಗದಲ್ಲಿ(ಮಹಾಭಾರತ ಕಾಲಕ್ಕೆ) ಶೌರ್ಯ, ಸಂಘರ್ಷಗಳು ಆರಂಭವಾದ ಕಾಲವದು. ಅಂದಿನ ಪಾಂಡವರಲ್ಲಿ ಒಂದೊಂದು ಬೇಡರ ಪಡೆ(ಬೆಂಗಾವಲು) ಇತ್ತೆಂಬುದು ಸುಳ್ಳಲ್ಲ."[೧೨] ಹೀಗೆ ಉಂಟಾದ ಬೇಡರ ಪಡೆ ಪಾಂಡವರ ಬೆಂಗಾವಲಾಗುವುದರ ಜೊತೆಗೆ ಅಂದು ನಗರಗಳ ರಕ್ಷಣೆಯ ಜವಾಬ್ದಾರಿಯನ್ನು ಬೇಡರಿಗೆ ನೀಡುತ್ತ ಬಂದಿದ್ದಾರೆ. ಅರ್ಜುನನಿಗೆ ಸರಿಸಾಟಿಯಾಗಿ ಬಿಲ್ವಿದ್ಯೆಯಲ್ಲಿ ಪರಿಣತನಾಗಿದ್ದ ಏಕಲವ್ಯನು ಬೇಡ ದೊರೆ ನಿಷಾದ ರಾಜ್ಯದ ರಾಜನಾದ ಹಿರಣ್ಯಧನುವಿನ ಮಗ. ಗುರುವಿನ ಮಾರ್ಗದರ್ಶನವಿಲ್ಲದೆ ಗುರುನಿಷ್ಠ ಭಕ್ತಿಯಿಂದ ಗುರು ದ್ರೋಣಾಚಾರ್ಯರ ಮೂರ್ತಿಯನ್ನು ಸ್ಥಾಪಿಸಿ ಅದರಿಂದ ದೀಕ್ಷೆಯನ್ನು ಪಡೆದು ಪ್ರಕಾಂಡ ಬಿಲ್ವಿದ್ಯೆಯನ್ನು ಕಲಿತು, ಅರ್ಜುನನಿಗೆ ಸರಿಸಾಟಿಯಾಗಿ ನಿಂತ ಇವನ ಪ್ರಾವೀಣ್ಯತೆಯನ್ನು ಕಂಡು ಮತ್ಸರಿಯಾದ ಅರ್ಜುನನ ಕುತಂತ್ರಕ್ಕೆ ಗುರು ದ್ರೋಣಾಚಾರ್ಯರಿಂದ ಗುರುದಕ್ಷಿಣೆಯಾಗಿ

ತನ್ನ ಹೆಬ್ಬೆರಳನ್ನೇ ಕತ್ತರಿಸಿಕೊಟ್ಟ ತ್ಯಾಗ ವೀರನೆನಿಸಿಕೊಳ್ಳುವ 'ಏಕಲವ್ಯ'ನು ಇವರ ಕುಲದವನು"[೩೦] ಎಂದು ಹೇಳುತ್ತಾರೆ.

ಕಲಿಯುಗದಲ್ಲಿ ತನ್ನ ಅಪಾರ ಭಕ್ತಿಯ ಮೂಲಕ ಶಿವನಿಗೆ ಪ್ರಿಯನಾಗಿ, ಶಿವನಿಗೆ ಮಾಂಸದ ಎಡೆ ಹಾಕಿದ 'ಬೇಡರ ಕಣ್ಣಪ್ಪ' ಕಾಳಹಸ್ತಿಯ ಪುಟ್ಟಪಿ ನಾಡಿನವನು. ಶಿವನ ಪರಮಭಕ್ತನಾದ ಕಣ್ಣಪ್ಪನು ಒಬ್ಬ ಬೇಟೆಗಾರ. ಇತನು ಶಿವನಿಗೆ ಒಂದು ದಿನ ಬೇಟೆಯನ್ನು ಎಡೆಹಾಕಿದ ಸಂದರ್ಭದಲ್ಲಿ ಶಿವಲಿಂಗದ ಕಣ್ಣಲ್ಲಿ ನೀರು(ರಕ್ತ) ಬಂದಿತ್ತೆಂಬ ಕಾರಣದಿಂದ ಭಕ್ತಿ ಪರವಶನಾದ ಕಣ್ಣಪ್ಪ ತನ್ನ ಕಣ್ಣನ್ನೇ ಕಿತ್ತು ಶಿವಲಿಂಗಕ್ಕೆ ಅರ್ಪಿಸಿದ ಪರಮ ಭಕ್ತನೆನಿಸಿದ್ದಾನೆ. ಕಣ್ಣಪ್ಪನು ಅರವತ್ತು ಮೂರು ಶೈವ ಪುರಾತನ ಪುರುಷರಲ್ಲಿ ಒಬ್ಬನಾಗಿದ್ದಾನೆ. ಇವನನ್ನು ಬೇಡ ನಾಯಕ ತಳವಾರರು ಇಂದಿಗೂ ಆರಾಧ್ಯ ದೈವವಾಗಿ, ಕುಲದೇವರಾಗಿ ಪೂಜಿಸುತ್ತಾರೆ.

ನಾಯಕ ಜನಾಂಗದಲ್ಲಿ ತಲಾತಲಾಂತರಗಳಿಂದ ಒಂದೊಂದು ಕಾಲಕ್ಕೆ ಒಬ್ಬೊಬ್ಬ ಪ್ರಭಾವ ಶಾಲಿ ವ್ಯಕ್ತಿಗಳು ಹುಟ್ಟುತ್ತಾ ಬಂದಿದ್ದಾರೆ. ಆ ಮೂಲಕವಾಗಿ ಈ ವಂಶಕ್ಕೆ ಕೀರ್ತಿ ನೀಡುತ್ತಾ ಬಂದಿದ್ದಾರೆ. ಮೂಲತಃ ಶೂರರಾಗಿದ್ದ ನಾಯಕರು ಸ್ವಯಂರಕ್ಷಣೆ, ಸ್ವಾಭಿಮಾನ, ತ್ಯಾಗ, ಸ್ವಜನ ಪರಿಪಾಲನೆಯಿಂದಾಗಿ ವಿವಿಧ ಗುಂಪುಗಳಾಗಿ ಮಾರ್ಪಾಡು ಹೊಂದಿ ಹಲವು ಪ್ರದೇಶಗಳ ಕಡೆಗೆ ವಲಸೆ ಹೋದರು. ಅನಂತರದಲ್ಲಿ ಹಲವಾರು ಚಿಕ್ಕಪುಟ್ಟ ಪಾಳೆಯಪಟ್ಟುಗಳನ್ನು ಕಟ್ಟಿಕೊಂಡು ಕಾಡಿನಿಂದ ನಾಡಿನ ಸಂಸ್ಕೃತಿಗೆ ಪಾದಾರ್ಪಣೆ ಮಾಡಿದ್ದಾರೆ. ೧೦ನೇ ಶತಮಾನದಲ್ಲಿ ಸ್ಥಾಪನೆಯಾದ ಆನೆಗೊಂದಿ ಮತ್ತು ಕುಮ್ಮಟದುರ್ಗದಲ್ಲಿ ಮೊದಲು ತನ್ನ ಅಧಿಕೃತ ರಾಜ್ಯವನ್ನು ಸ್ಥಾಪಿಸಿದರು ಎಂಬ ಮಾಹಿತಿ ಇತಿಹಾಸದಿಂದ ತಿಳಿಯಬಹುದಾಗಿದೆ. ಈ ಮೇಲಿನ ಕೆಲವು ಕಥೆ, ಐತಿಹ್ಯ ಮತ್ತು ಇತಿಹಾಸಗಳ ವಾಸ್ತವಿಕತೆ ಏನೇ ಇದ್ದರೂ ಇವುಗಳಲ್ಲಿ ಅಡಕಗೊಂಡ ಒಳ ಅರ್ಥ, ಧ್ವನ್ಯಾರ್ಥ ಮಾತ್ರ ತಳವಾರರು ಪ್ರಾಚೀನ ಕಾಲದಿಂದಲೂ ಇದ್ದಾರೆ ಎಂಬುದಕ್ಕೆ ಮಾಹಿತಿಗಳು ದೊರೆಯುತ್ತವೆ. ಕಥೆ, ಐತಿಹ್ಯಗಳನ್ನು ವಾಚ್ಯಾರ್ಥದಲ್ಲಿ ಅರ್ಥೈಸದೇ, ಸಾಂಕೇತಿಕ ತತ್ವಗಳಿಗೆ, ಮತ್ತು ಪ್ರಾಚೀನತೆಗೆ ಮಹತ್ವ ನೀಡಬೇಕಾಗುತ್ತದೆ. ಒಟ್ಟಿನಲ್ಲಿ, ಅನಾದಿಕಾಲದಿಂದಲೂ ಬೇಟೆಯಂತಹ ಸಾಹಸವೃತ್ತಿಗಳ ಮೂಲಕ ಕಾಡಿನ ಸಂಸ್ಕೃತಿಯಿಂದ ನಾಡಿನ ಸಂಸ್ಕೃತಿಯೆಡೆಗೆ ಪ್ರವೇಶ ಪಡೆದ ಬೇಡರು 'ತಳವಾರಿಕೆ'ಯಂತಹ ಜವಾಬ್ದಾರಿಯುತ ಸಾಹಸಿ ವೃತ್ತಿಯನ್ನು ನಿಭಾಯಿಸಿದವರಲ್ಲಿ ಪ್ರಮುಖರೆನಿಸಿಕೊಂಡಿದ್ದಾರೆ.

### ೨.೪. ಸಮುದಾಯದ ಹಿನ್ನೆಲೆ

ಪ್ರತಿಯೊಂದು ವೃತ್ತಿ ಜನಾಂಗಕ್ಕೂ ಅವರ ಮೂಲಕ್ಕೆ ಸಂಬಂಧಿಸಿದಂತೆ ಒಂದು ಚರಿತ್ರೆ ಇರುತ್ತದೆ. ಅದರಲ್ಲಿ ಬುಡಕಟ್ಟು ಜನಾಂಗದ ಮೂಲದ ಬಗ್ಗೆ ಕುತೂಹಲಕರವಾದ ವಿಶಿಷ್ಟತೆಯಿಂದ ಕೂಡಿದ ಐತಿಹ್ಯಗಳು ಇರುವುದನ್ನು ಕಾಣಬಹುದಾಗಿದೆ. ಈ ರೀತಿಯಾದ ಮೂಲವನ್ನು

ಗುರುತಿಸುವಲ್ಲಿ ಸಮಾಜಶಾಸ್ತ್ರಜ್ಞರು ಮತ್ತು ಜನಾಂಗದ ಅಧ್ಯಯನಗೈದ ವಿದ್ವಾಂಸರು ಬೇರೆ ಬೇರೆ ರೀತಿಯ ಹಿನ್ನೆಲೆಗಳನ್ನು ಕಂಡುಕೊಂಡಿದ್ದಾರೆ. ಇನ್ನೂ ಕಂಡುಕೊಳ್ಳುತ್ತಲಿದ್ದಾರೆ. ಅವುಗಳಲ್ಲಿ ಐತಿಹಾಸಿಕ ಹಿನ್ನೆಲೆ, ಪೌರಾಣಿಕ ಹಿನ್ನೆಲೆ, ಚಾರಿತ್ರಿಕ ಹಿನ್ನೆಲೆ ಮತ್ತು ಸಾಮಾಜಿಕವಾಗಿ ರೂಪಗೊಂಡ ಹಲವು ರೀತಿಯ ಹಿನ್ನೆಲೆಗಳ ಆಧಾರದಿಂದ ಆಯಾ ಜನಾಂಗದ ಮೂಲವನ್ನು ಗುರುತಿಸುತ್ತಾರೆ. "ಭಾರತದ ಇತಿಹಾಸದ ಭಿತ್ತಿಯಲ್ಲಿ ಹಲವು ಜನಾಂಗಗಳು ತನ್ನದೇ ಆದ ಪ್ರಭಾವ ಮುದ್ರೆ ಬಿತ್ತಿವೆ. ಈ ಮಣ್ಣಿನಲ್ಲಿಯೇ ಹುಟ್ಟಿ ಬೆಳೆದ ಮೂಲ ನಿವಾಸಿಗಳಿದ್ದಾರೆ. ಹೊರದೇಶಗಳಿಂದ ಆಗಮಿಸಿ ದೇಶಿ ಸಂಸ್ಕೃತಿಯಲ್ಲಿ ಲೀನವಾಗಿ ಹೋದವರೂ ಇದ್ದಾರೆ. ಆದುದರಿಂದ ಭಾರತದಂತಹ ದೇಶದಲ್ಲಿ ಯಾವುದೇ ಜನಾಂಗದ ಅಧ್ಯಯನವೂ ಸಂಕೀರ್ಣ ಸ್ವರೂಪದ್ದಾಗಿರುತ್ತದೆ. ವೈಜ್ಞಾನಿಕವಾಗಿ ಅಮೀಬಾದಿಂದ ಮಾನವನಾಗಿ ರೂಪಗೊಂಡ ಕ್ರಿಯೆಯನ್ನು ಡಾರ್ವಿನ್ನನ ವಿಕಾಸವಾದ ಸ್ಪಷ್ಟಪಡಿಸುತ್ತದೆ. ಆದರೆ ಮಾನವ ಸಾಂಸ್ಕೃತಿಕ ಚರಿತ್ರೆಯಲ್ಲಿ ಜಾತಿಯ ಉಗಮವನ್ನು ತಿಳಿಸುವ ಖಚಿತ ಆಧಾರಗಳು ದೊರೆಯುವುದಿಲ್ಲ. ಆರ್ಯರ ಆಗಮನದಿಂದ ಮೂಲ ನಿವಾಸಿಗಳಿಗೂ, ವಿದೇಶಿಯರಿಗೂ ಉಂಟಾದ ಜನಾಂಗಿಕ ವ್ಯತ್ಯಾಸಗಳು ಜಾತಿಪದ್ಧತಿಗೆ ಬೀಜಾಂಕುರವಾಯಿತೆಂಬ ಅಂಶವನ್ನು ವಿದ್ವಾಂಸರು ಈಗಾಗಲೇ ಗುರುತಿಸಿದ್ದಾರೆ."[೩೧] ಇಂತಹ ಕೆಲವು ಜಟಿಲ-ದ್ವಂದ್ವ ನಿಲುವುಗಳು ಸಾಮುದಾಯಿಕ ಅಧ್ಯಯನಗಳಲ್ಲಿ ಕಂಡುಬರುವುದು ಸಹಜವಾಗಿದೆ.

ಸಂಕೀರ್ಣ ಜಾತಿವ್ಯವಸ್ಥೆಯಿಂದ ಕೂಡಿದ ಭಾರತದಂತಹ ದೇಶದಲ್ಲಿ ಒಂದು ವೃತ್ತಿ ಸಂಬಂಧಿತ, ಜಾತಿ-ಜನಾಂಗದವರ ಉಗಮ ಇಲ್ಲಿಂದಲೇ ಆಯಿತೆಂದು ಹೇಳಲು ಸುಲಭ ಸಾಧ್ಯವಾಗಲಾರದು. ಒಂದು ಜನಾಂಗದ ಮೂಲ ಮತ್ತು ವಿಕಾಸದಲ್ಲಿ ಹಲವಾರು ತೊಡಕುಗಳು ಇರುವುದು ಗಮನಿಸಬಹುದಾಗಿದೆ. ಈ ಕುರಿತಾಗಿ ವೇದಕಾಲೀನ ಭಾರತದಲ್ಲಿ ಜನಾಂಗಗಳ ಉಗಮದ ಬಗೆಗೆ ಕೆಲವು ಸ್ಪಷ್ಟಕಲ್ಪನೆ ಇರುವುದು ಕಂಡುಬರುತ್ತದೆ. "ಋಗ್ವೇದ ಕಾಲಕ್ಕೆ ಬ್ರಾಹ್ಮಣ ಕ್ಷತ್ರಿಯ ಇದ್ದು, ವೈಶ್ಯ, ಶೂದ್ರರೆಂಬ ಇನ್ನೆರಡು ಶ್ರೇಣಿ ನಂತರ ಸೇರ್ಪಡೆಯಾಯಿತೆಂದು ತಿಳಿದುಬರುತ್ತದೆ. ಸೃಷ್ಟಿಕರ್ತನ ಒಂದೊಂದು ಅಂಗದಿಂದ ಒಂದೊಂದು ವರ್ಣಗಳು ಜನಿಸಿದವೆಂಬ ತೈತ್ತರೀಯ ಕಲ್ಪನೆಯ ಚಾತುರ್ವರ್ಣದಲ್ಲಿ ಅಸಮಾನತೆಯನ್ನು ಹುಟ್ಟಿ ಹಾಕಿತೆಂದು ತೋರುತ್ತದೆ. ಇದರಲ್ಲಿ ಸೃಷ್ಟಿಕರ್ತನ ಮುಖದಿಂದ ಬ್ರಾಹ್ಮಣ, ಭುಜದಿಂದ ಕ್ಷತ್ರಿಯ, ಹೊಟ್ಟೆಯಿಂದ ವೈಶ್ಯ, ಕಾಲಿನಿಂದ ಶೂದ್ರ ಜನಿಸಿದ. ಕಾಲಿನಿಂದ ಹುಟ್ಟಿದ ಶೂದ್ರನಿಗೆ ಸಾಮಾಜಿಕವಾಗಿ ಕಡೆಯ ಸ್ಥಾನ ನೀಡಿ ನಿರ್ದೇಶಿಸಲು ಮಾರ್ಗ ಮಾಡಿತು."[೩೨] ಹೀಗೆ ನಾಲ್ಕು ವರ್ಗ-ವರ್ಣಗಳಿಂದ ಸೃಷ್ಟಿಯಾದ ಜನಾಂಗೀಯ ವರ್ಗಗಳು ಕಾಲಾನುಕಾಲಕ್ಕೆ ಒಂದೊಂದು ವರ್ಗದಲ್ಲಿ ಒಂದೊಂದು ಉಪವರ್ಗಗಳಾಗಿ 'ಹದಿನೆಂಟು ಜಾತಿ' ಎನ್ನುವ ಒಂದು ವಿಂಗಡಣೆಯಾಗಿದ್ದು ಕಂಡುಬರುತ್ತದೆ.

ಒಂದು ವೃತ್ತಿಯನ್ನು ಆಶ್ರಯಿಸಿದವರಿಗೆ ೧೩-೧೪ನೇ ಶತಮಾನದಲ್ಲಿ ಜಾತಿಲೇಪವನ್ನು ಮಾಡಲಾಯಿತು. ಈ ಮೂಲಕವಾಗಿ ಪ್ರತಿಯೊಂದು ಜಾತಿಯಲ್ಲಿ ವೃತ್ತಿ ಮೂಲದಿಂದಲೇ ಜಾತಿಗಳು ವಿಕಾಸ ಹೊಂದಿವೆ ಎಂಬುದನ್ನು ತಿಳಿಯಬಹುದಾಗಿದೆ. "ಶೂದ್ರ ವರ್ಗದಲ್ಲಿ ಒಕ್ಕಲಿಗ, ಕಂಬಾರ, ಕಮ್ಮಾರ, ಕ್ಷೌರಿಕ, ಬಡಿಗ, ಅಕ್ಕಸಾಲಿಗ, ಗಾಣಿಗ, ಬಣಜಿಗ, ಅಗಸ, ತಳವಾರ ಮೊದಲಾದ ವೃತ್ತಿಪರ ವರ್ಗಗಳು ಒಂದೊಂದು ವೃತ್ತಿಯಲ್ಲಿ ಮುಂದುವರಿಯುತ್ತ ಬಂದು, ಒಂದೊಂದು ಸಮುದಾಯಗಳಲ್ಲಿ ಪ್ರತ್ಯೇಕ ಗುಂಪಾಯಿತೆನ್ನಬಹುದು."[೩೩] ಹೀಗೆ ಉಂಟಾದ ಗುಂಪುಗಳಿಂದ ರಕ್ತಸಂಬಂಧಗಳು ಬೆಳೆದು ವೃತ್ತಿಯ ಅಭಿವೃದ್ಧಿಯೊಂದಿಗೆ ಜಾತಿಗಳು ಪ್ರಾಮುಖ್ಯತೆ ಪಡೆದಿವೆ.

**ತಳವಾರರ ಮೂಲ**

ತಳವಾರ ಹುದ್ದೆ ಹಾಗೂ ವೃತ್ತಿ ಗ್ರಾಮೀಣ ಜೀವನದಲ್ಲಿ ಪ್ರಮುಖ ಪಾತ್ರ ವಹಿಸಿತ್ತು. 'ತಳವಾರಿಕೆ' ವೃತ್ತಿ ಕೇವಲ ಒಂದು ಜಾತಿ, ಜನಾಂಗಕ್ಕೆ ಸೀಮಿತವಾಗಿಲ್ಲ. ಇಲ್ಲಿ ಬೇಡ ನಾಯಕ, ಸಮುದಾಯಕ್ಕೆ ಸೇರಿದವರು ಶೇಕಡ ೮೦ರಷ್ಟು ಇದ್ದರೆ, ಗಂಗಾಮತಸ್ಥರು(ಬಾರಿಕೇರ, ಕಬ್ಬಲಿಗ)ರು, ಕುರುಬರು, ಹರಿಜನ, ಮುಸ್ಲಿಮರು ಶೇ.೨೦ ಜನ ಇದ್ದಾರೆ. ಇವರಲ್ಲಿ ಹೆಚ್ಚಾಗಿ ಕಂಡುಬರುವ ಬೇಡ ನಾಯಕ ಸಮುದಾಯವೇ ಈ ವೃತ್ತಿಯನ್ನು ಮೂಲದಿಂದಲೂ ಮಾಡಿಕೊಂಡು ಬಂದಿರುವ ಬಗೆಗೆ ಮೌಖಿಕ ಮತ್ತು ಚರಿತ್ರೆಗಳ ದಾಖಲೆಗಳಿಂದ ತಿಳಿದುಬರುತ್ತದೆ. ಈ ಕಾರಣಕ್ಕಾಗಿ ಪ್ರಾತಿನಿಧಿಕವಾಗಿ ಬೇಡ ನಾಯಕ ಜನಾಂಗಕ್ಕೆ ಸೇರಿದವರ ಮೂಲವನ್ನೆ ನೋಡಬೇಕಾಗುತ್ತದೆ.

ತಳವಾರರು ಎಂದರೆ ಸಾಮಾನ್ಯವಾಗಿ ಬೇಡ, ನಾಯಕ, ವಾಲ್ಮೀಕಿ ಎಂದು ಕರೆಯುತ್ತಾರೆ. ಇವರಲ್ಲಿ ಸುಮಾರು ೧೮ ಪರ್ಯಾಯ ಪದಗಳಿದ್ದು, ಪ್ರಾದೇಶಿಕವಾಗಿ ಬೇರೆ ಬೇರೆ ಹೆಸರುಗಳಿಂದ ಇವರನ್ನು ಕರೆಯುತ್ತಾರೆ. ಇಲ್ಲಿ ಬೇಡರ ಮೂಲವೇ ತಳವಾರರ ಮೂಲ ಆಗಿರುವುದರಿಂದ ಪ್ರಾಚೀನ ಕಾಲದಿಂದಲೂ ಕರ್ನಾಟಕದ ಮೂಲನಿವಾಸಿಗಳಲ್ಲಿ ತಳವಾರರು ಸಹ ಒಬ್ಬರಾಗಿದ್ದಾರೆ. "ಬೇಟೆಯ ಪರಂಪರೆಯಿಂದ ಗುರುತಿಸಿಕೊಂಡ ಬೇಡ ನಾಯಕರನ್ನು 'ಪುಳಿಂದ', 'ಶಬರ', 'ಕಿರಾತ', 'ನಿಷಾದ', 'ವಾಲ್ಮೀಕಿ', 'ತಳವಾರ', 'ಪರಿವಾರ' ಎಂದು ವಿವಿಧ ಪರ್ಯಾಯ ಪದಗಳಿಂದ ಕರೆಯಲ್ಪಡುವ ವಾಲ್ಮೀಕಿ ನಾಯಕರು ಆರ್ಯೇತರ ಪಂಗಡಕ್ಕೆ ಸೇರಿದ ಪುಲಿಂದರಾಗಿದ್ದಾರೆ. ಪ್ರಾಚೀನ ಭಾರತದ ಲೋಹಯುಗ ಸಂಸ್ಕೃತಿಯ ಜನರ ಪರಂಪರೆಗೆ ಸೇರಿದ ಮಿಶ್ರ ಬುಡಕಟ್ಟು ಜನಾಂಗದವರೆಂದು ಹೇಳಲಾಗಿದೆ."[೩೪] ಆರ್ಯ ಸಂಸ್ಕೃತಿಯ ಆಕ್ರಮಣ, ವಿಸ್ತರಣೆಯಿಂದಾಗಿ ಹಲವು ಸಮುದಾಯಗಳು ಭಾರತದ ಒಂದೊಂದು ಪ್ರದೇಶಗಳಿಗೆ ವಲಸೆ ಹೋದರು. ಅದೇ ರೀತಿ ಬೇಡರು ದಕ್ಷಿಣ ಭಾರತದ ಕಡೆಗೆ ವಲಸೆ ಬಂದು ವಿಂಧ್ಯ ಪರ್ವತ ಪ್ರದೇಶಗಳಲ್ಲಿ ವಾಸಿಸತೊಡಗಿದರು. ಆ ಮೂಲಕವಾಗಿ ಇವರನ್ನು ಆರ್ಯೇತರ ಬುಡಕಟ್ಟು ಜನ ಎಂದು ಕರೆಯಲಾಗುತ್ತದೆ.

ಇನ್ನೊಂದು ಮೂಲದ ಪ್ರಕಾರ ಬೇಡರನ್ನು ದ್ರಾವಿಡರೆಂದು ಹೇಳಲಾಗುತ್ತದೆ. ಅದಕ್ಕೆ ಪೂರಕವಾಗಿ ರಂ.ಶ್ರೀ.ಮುಗಳಿಯವರು "ಬೇಡ ಜನಾಂಗ ದ್ರಾವಿಡ ಜನಾಂಗವಾಗಿದೆ. ದ್ರಾವಿಡರಿಗಿಂತ ಪೂರ್ವಕಾಲದಿಂದಲೂ ಬೇಡರ ಬದುಕನ್ನು ನೋಡುವುದರಿಂದ ಇವರು ಪೂರ್ವ ದ್ರಾವಿಡ ಗುಂಪಿಗೆ ಸೇರಿದ ಬೇಡ ನಾಯಕರು, ಬೆಟ್ಟ ಗುಡ್ಡಗಳಲ್ಲಿ ವಾಸಿಸುವ ಕುಲಗಳಾದ ಇರುಳ, ಕಾಡುಕುರುಬ ಜನಾಂಗಗಳು ದ್ರಾವಿಡರಿಗಿಂತ ಸಂಪೂರ್ಣ ಭಿನ್ನರಾದ ಪೂರ್ವ ದ್ರಾವಿಡರು ಎಂದು ವರ್ಗೀಕರಿಸಲ್ಪಡುತ್ತಾರೆ. ಇವರೇ ದಕ್ಷಿಣ ಭಾರತದ ಮೂಲ ನಿವಾಸಿಗಳೆಂದು ತೋರುತ್ತದೆ. ಶಬರ, ಮಾತಂಗರು, ಬೇಡರು, ಅವರ ಜೊತೆಯವರೇ ಆಗಿದ್ದಾರೆ. ಈ ಬಗ್ಗೆ ಸಂಸ್ಕೃತ ಹಾಗೂ ಕನ್ನಡ ಕಾವ್ಯ ಸಾಹಿತ್ಯ, ಶಾಸನಗಳಲ್ಲಿ ಅವರ ಪ್ರಸ್ತಾವನೆ ಬರುತ್ತದೆ"[೩೫] ಎಂದು ಅಭಿಪ್ರಾಯ ಪಟ್ಟಿದ್ದಾರೆ. ಈ ಎಲ್ಲಾ ಹಿನ್ನೆಲೆಗಳಿಂದ ಬೇಡ ನಾಯಕ ತಳವಾರರು ಭಾರತದ ಮೂಲ ನಿವಾಸಿಗಳಾದ ಶಬರ, ಮಾತಂಗ ಮತ್ತು ಬೇಡರ ಕುಲ ಮೂಲದಿಂದ ಬಂದವರೆಂದು ಹಾಗೂ ದ್ರಾವಿಡರಲ್ಲಿ ಒಬ್ಬರಾಗಿದ್ದರೆಂದು ತಿಳಿಯುತ್ತದೆ.

### ೨.೫. ವೃತ್ತಿಯ ಹಿನ್ನೆಲೆ

ವೃತ್ತಿಗೆ ಮಾನವನ ಇತಿಹಾಸದಷ್ಟು ಪ್ರಾಚೀನತೆ ಇದೆ. ವ್ಯಕ್ತಿಯ ಜೀವನಾಧಾರವಾಗಿ ವೃತ್ತಿ ಇದೆ. ವೃತ್ತಿ ಇಲ್ಲದೆ ಬಾಳುವುದು ಬದುಕುವುದು ಮಾನವನಿಗೆ ಕಷ್ಟಸಾಧ್ಯ. ಹೀಗಾಗಿ ಮನುಕುಲದ ಆರಂಭದಿಂದಲೂ ಒಂದಿಲ್ಲೊಂದು ವೃತ್ತಿಯನ್ನು ಕೈಗೊಳ್ಳುವುದು ಅವನಿಗೆ ಅಗತ್ಯ ಮತ್ತು ಅನಿವಾರ್ಯವಾಗಿತ್ತು. "ಜೀವನಾವಶ್ಯಕ ವಸ್ತು ಮತ್ತು ಕ್ರಿಯೆಗಳಿಗೆ ಮಾತ್ರ ಸೀಮಿತವಾಗಿದ್ದ ಮಾನವನ ಆರಂಭದ ವೃತ್ತಿಗಳು ಹೆಚ್ಚು ನೈಸರ್ಗಿಕವಾಗಿದ್ದವು. ಉದಾಹರಣೆಗೆ ಬೇಟೆ, ಕುಂಬಾರಿಕೆ ಇತ್ಯಾದಿ. ಕಾಲಕ್ರಮೇಣ ನಿಸರ್ಗಜೀವಿಯಾದ ಮಾನವನು ಸಮಾಜ ಜೀವಿಯಾಗಿ ಬೆಳೆದಂತೆ ಈ ನೈಸರ್ಗಿಕ ವೃತ್ತಿಗಳೊಂದಿಗೆ ಅನೇಕ ಸಾಮಾಜಿಕ ವೃತ್ತಿಗಳೂ ಹುಟ್ಟಿಕೊಂಡವು. ಆರಂಭದಲ್ಲಿ ವೃತ್ತಿಗಳು ಆನುವಂಶಿಕವಾಗಿದ್ದವು. ಅಲ್ಲದೆ, ಜಾತಿವಾಚಿ, ಧರ್ಮವಾಚಿಗಳಾಗಿರದೆ, ವೃತ್ತಿವಾಚಿಗಳೆನಿಸಿದ್ದವು. ಕ್ರಮೇಣ ಇವು ಜಾತಿನಿಷ್ಠ, ಜನಾಂಗನಿಷ್ಠ, ಪ್ರದೇಶ ನಿಷ್ಠಗಳಾಗಿಯೂ ಬೆಳೆದುಬಂದಿವೆ. ಆಯಾ ಕಾಲ, ದೇಶಗಳಲ್ಲಿ ಮತ್ತು ಕಾಲ ದೇಶಗಳನ್ನು ದಾಟಿ ಬರುವ ಈ ವೃತ್ತಿಗಳು ಸ್ವರೂಪ ಸ್ವಭಾವಗಳಲ್ಲಿ ಕೆಲವೊಂದು ವ್ಯತ್ಯಾಸಗಳನ್ನು ಪಡೆದಿರಬಹುದು. ಇದಲ್ಲದೆ ಕೆಲವು ಪ್ರಧಾನವೃತ್ತಿಗಳು ಅನೇಕ ಉಪವೃತ್ತಿಗಳನ್ನು ಕೈಗೊಳ್ಳಲು ದಾರಿ ಮಾಡಿಕೊಟ್ಟಿರ ಬಹುದು. ಮುಂದೆ ಈ ಉಪವೃತ್ತಿಗಳಲ್ಲಿಯೇ ಮತ್ತೆ ಒಳವೃತ್ತಿಗಳು ಹುಟ್ಟಿಕೊಂಡಿರುವ ಸಾಧ್ಯತೆ ಇದೆ. ಇನ್ನು ಕೆಲವೊಂದು ಮುಖ್ಯ ವೃತ್ತಿಗಳು ಉಪವೃತ್ತಿಗಳಿಗೆ ಜನ್ಮ ನೀಡದೇ ಹಾಗೆಯೇ ಉಳಿದಿರಬಹುದು. ಇಲವೇ ನಾಶವಾಗಿ ಹೋಗಿರಬಹುದು."[೩೬] ಕಾಲದಿಂದ ಕಾಲಕ್ಕೆ ಬದಲಾದ ಪರಿಸ್ಥಿತಿ ಮತ್ತು ಸಂದರ್ಭಕ್ಕೆ ತಕ್ಕಂತೆ ಈ ರೀತಿಯ ವೃತ್ತಿಯಲ್ಲಿ ಆದ ಬದಲಾವಣೆಗಳನ್ನು ತಳ್ಳಿ ಹಾಕುವಂತಿಲ್ಲ. ಆನುವಂಶಿಕವಾದ

ವೃತ್ತಿಗಳಿಂದ ಹಲವಾರು ಉಪವೃತ್ತಿಗಳು ಕವಲೊಡೆದದವು. ಮೊದಮೊದಲು ವೃತ್ತಿಯಾಗಿದ್ದ ಇವು ೧೨-೧೩ನೇ ಶತಮಾನ ಕಾಲಕ್ಕೆ ಒಂದೊಂದು ವೃತ್ತಿಯೊಂದಿಗೆ ಜಾತಿ ಪ್ರವೇಶ ಪಡೆದಿದೆ. ಏಕೆಂದರೆ ವರ್ಣಗಳ ನಂತರ ಜಾತಿ ಹುಟ್ಟಿದೆ. ವೃತ್ತಿಕಾಯಕದವರನ್ನು ಶೂದ್ರರಲ್ಲಿ ಪರಿಗಣಿಸಿ, ಅವರನ್ನು ಪಂಚಮರು ಎಂದು ಕರೆಯಲಾಗುತ್ತಿತ್ತು. ಇದೇ ಕಾಲದಲ್ಲಿ ಬಂದ ವಚನ ಸಾಹಿತ್ಯದಲ್ಲಿ ಹಲವಾರು ವಚನಕಾರರು ವೃತ್ತಿಯ ಮಹತ್ವವನ್ನು ಹೇಳುತ್ತಲೇ ಆಯಾ ವೃತ್ತಿಯವರು ಒಂದೊಂದು ಗುಂಪಾಗಿ, ಕ್ರಮೇಣ ಜಾತಿಗಳಾದ ಬಗೆಗೆ ಅಭಿವ್ಯಕ್ತಿಸುತ್ತಾರೆ. ೧೪ನೇ ಶತಮಾನದ ಹೇಮಾದ್ರಿಯು ಪಂಚಮರು ಮತ್ತು ಕಾರುಕರ ಬಗ್ಗೆ ಹೇಳುತ್ತಾ ಸ್ಪರ್ಶ-ಅಸ್ಪರ್ಶ ವೃತ್ತಿಯವರ ಬಗೆಗೆ ಮಾಹಿತಿ ನೀಡುತ್ತಾರೆ. ಈ ಕಾಲಕ್ಕಾಗಲೇ ಆಯಾ ವೃತ್ತಿಯವರು ಒಂದೊಂದು ಜಾತಿಗೆ ಸೀಮಿತಗೊಂಡಿರುವುದನ್ನು ಕಾಣಬಹುದು. ಅದೇನೇ ಇದ್ದರೂ ಆರಂಭದ ವೃತ್ತಿಗಳು ಜಾತಿವಾಚಿ, ಜನಾಂಗವಾಚಿ, ಪ್ರದೇಶವಾಚಿ ಮತ್ತು ವರ್ಗವಾಚಿ ವೃತ್ತಿಗಳಾಗಿ ಜನಮಾನಸದಲ್ಲಿ ಉಳಿದುಕೊಂಡು ಬಂದಿವೆ. ಕಾಲಕ್ರಮೇಣ ಮಾನವ ಬೌದ್ಧಿಕತೆ, ವಿಕಾಸವಾದಂತೆ ವೃತ್ತಿಗಳೂ ವಿಕಾಸಗೊಂಡವು. ಇದರಿಂದ ಸಮಾಜ, ಕುಟುಂಬ ಮತ್ತು ರಾಷ್ಟ್ರಗಳ ಪರಿಕಲ್ಪನೆ ಅಸ್ತಿತ್ವಕ್ಕೆ ಬಂದು ಹೊಸ ಹೊಸ ಆಲೋಚನೆ, ಅವಿಷ್ಕಾರಗಳು ಉಂಟಾಗಿವೆ. ಈ ಕಾರಣದಿಂದ ನಿಸರ್ಗ ಜೀವಿಯಾದ ಮಾನವ ಸಮಾಜ ಜೀವಿಯಾದನು. ಆಗ ನೈಸರ್ಗಿಕ ವೃತ್ತಿಗಳೊಂದಿಗೆ ಸಾಮಾಜಿಕ ವೃತ್ತಿಗಳು ಬೆಳೆದು ಬರುವಂತಾಯಿತು. ಈ ರೀತಿಯಾಗಿ ಒಂದು ವೃತ್ತಿ ಸರಳತೆಯಿಂದ ಸಂಕೀರ್ಣತೆಗೆ ಸರಿಯುತ್ತಾ ಬಂದ ಬಗೆಯನ್ನು ನಾವು ತಿಳಿಯಬಹುದು.

ವ್ಯಕ್ತಿ ಶ್ರಮಜೀವಿಯಾಗಿದ್ದಾನೆ. ಈತನ ಬದುಕಿನಲ್ಲಿ ವೃತ್ತಿಗೆ ಬೆಲೆಯುಳ್ಳ ಸ್ಥಾನವಿದೆ. ಶ್ರಮ ಮತ್ತು ವೃತ್ತಿಗಳು ಒಂದಕ್ಕೊಂದು ಪೂರಕವಾಗಿಯೂ, ಪ್ರೇರಕವಾಗಿಯೂ ನಿಂತು ಅವನ ಆರ್ಥಿಕ ಚಟುವಟಿಕೆಗಳನ್ನು ಚುರುಕುಗೊಳಿಸಿದೆ. ಪ್ರತಿಯೊಬ್ಬರಲ್ಲಿಯೂ ವೃತ್ತಿಯ ಆಯ್ಕೆಯಲ್ಲಿ ಬೌದ್ಧಿಕ ಮತ್ತು ದೈಹಿಕ ಸಾಮರ್ಥ್ಯವು ಪ್ರಮುಖ ಪಾತ್ರ ವಹಿಸುತ್ತದೆ. ಪ್ರಕೃತಿಯ ಮಡಿಲಲ್ಲಿ ಜೀವಿಸುವ ಮಾನವ ಪ್ರಕೃತಿ ಒದಗಿಸುವ ವಸ್ತುಗಳನ್ನು ಅವಲಂಬಿಸಿಕೊಂಡೇ ಬದುಕಬೇಕಾಗುತ್ತದೆ. ಇಲ್ಲಿ ಉದ್ಯೋಗ ಮನುಷ್ಯನ ಲಕ್ಷಣವಾದ್ದರಿಂದ ಯಾವುದಾದರೊಂದು ವೃತ್ತಿಗೆ ಹೊಂದಿ ಕೊಂಡಿರುತ್ತಾನೆ. ತಾನು ಕೈಗೊಂಡ ವೃತ್ತಿಗೆ ಆತನ ಆಸಕ್ತಿ, ಶ್ರದ್ಧೆ ಹಾಗೂ ನಿಷ್ಠೆ ಹಾಗೂ ದೈಹಿಕ ಸಾಮರ್ಥ್ಯ ಮತ್ತು ಸಾಹಸಗಳನ್ನು ಅವಲಂಬಿಸಿರುತ್ತದೆ. ಉದ್ಯೋಗ ಬದುಕಿನ ಅವಲಂಬನೆಯ ಜೊತೆಗೆ ಜೀವನ ನಿರ್ವಹಣೆಯ ಅಗತ್ಯ ಮಾರ್ಗವು ಆಗಿರುತ್ತದೆ. ಹೀಗೆ, ಜೀವನಾವಶ್ಯಕತೆಯ ಪರಿಣಾಮವಾಗಿ ಹುಟ್ಟಿಕೊಂಡ ವೃತ್ತಿಗಳು ಕೇವಲ ವೃತ್ತಿಗಳಾಗಿ ಉಳಿಯದೇ ನಮ್ಮ ನಾಡಿನ ಕಲೆಗಳಾಗಿ, ಜೀವನದ ನೆಲೆಗಳಾಗಿ ರೂಪುಗೊಂಡಿವೆ.

"ವ್ಯಕ್ತಿಪ್ರಧಾನವಾಗಿರುವಂತೆ ವೃತ್ತಿಪ್ರಧಾನವೂ ಆಗಿದ್ದ ಪ್ರಾಚೀನ ಮತ್ತು ಮಧ್ಯಕಾಲೀನ ಕರ್ನಾಟಕದ ಸಂದರ್ಭದಲ್ಲಿ ಇಂಥ ಅನೇಕ ವೃತ್ತಿಗಳು ಬೆಳೆದು ಬಂದಿರುವುದು ಕಂಡುಬರುತ್ತದೆ.

ವೃತ್ತಿಗಳಲ್ಲಿ ಉತ್ಪಾದಕ ವೃತ್ತಿ, ವಿನಿಮಯ ವೃತ್ತಿ, ಉತ್ಪಾದಕ ವಿನಿಮಯ ವೃತ್ತಿ, ಇತರೆ ವೃತ್ತಿಗಳು"[೩೭] ಎಂದು ಬಿ.ಆರ್.ಹಿರೇಮಠರು ವರ್ಗೀಕರಿಸಿದ್ದಾರೆ.

**ಉತ್ಪಾದಕ ವೃತ್ತಿ**

ನಿಸರ್ಗದಲ್ಲಿ ದೊರೆಯುವ ಸಂಪನ್ಮೂಲಗಳಿಂದ ಉತ್ಪಾದಿಸುವ ಕಸುಬುಗಳೇ ಉತ್ಪಾದಕ ವೃತ್ತಿಗಳು. ಈ ವೃತ್ತಿಯನ್ನು ಮಾಡುವವರಿಗೆ ಭೂಮಿ, ಶ್ರಮ, ಪರಿಕರ ಮತ್ತು ಹಣರೂಪದ ಬಂಡವಾಳಗಳು ಅವಶ್ಯಕವೆನಿಸುತ್ತವೆ. ಇವುಗಳ ಸಹಾಯದಿಂದಲೇ ಉತ್ಪಾದನೆ ಸಾಧ್ಯ. ಪ್ರಾಚೀನ ಮತ್ತು ಮಧ್ಯಕಾಲೀನ ಕರ್ನಾಟಕದಲ್ಲಿ ಕಂಡುಬರುವ ಬೇಸಾಯ, ಪಶುಪಾಲನೆ ಮುಂತಾದ ವೃತ್ತಿಗಳು ಈ ಉತ್ಪಾದಕ ವೃತ್ತಿಯಲ್ಲಿ ಸಮಾವೇಶಗೊಳ್ಳುತ್ತವೆ.

**ವಿನಿಮಯ ವೃತ್ತಿ**

ಉತ್ಪಾದಕ ವೃತ್ತಿಯವರು ಉತ್ಪಾದಿಸುವ ವಸ್ತುಗಳನ್ನು ಗ್ರಾಹಕರಿಗೆ ಪೂರೈಕೆ ಮಾಡುವ ಕಾರ್ಯ ವಿನಿಮಯ ವೃತ್ತಿಯಿವರದಾಗಿದೆ. ಇವರು ಸಮಾಜದ ಅವಿಭಾಜ್ಯ ಅಂಗವಲ್ಲದೆ ಉತ್ಪಾದಕರ ಮತ್ತು ಗ್ರಾಹಕರ ನಡುವಿನ ಸೇತುವೆಯಾಗಿರುತ್ತಾರೆ.

**ಉತ್ಪಾದಕ, ವಿನಿಮಯ ವೃತ್ತಿ**

ಉತ್ಪಾದನೆ ಹಾಗೂ ಪೂರೈಕೆ ಕಾರ್ಯಗಳನ್ನು ಜೊತೆ ಜೊತೆಯಾಗಿ ನಿರ್ವಹಿಸುವ ಕೆಲಸವನ್ನು ಈ ವೃತ್ತಿಯವರು ಮಾಡುತ್ತಾರೆ. ಶಾಸನಗಳಲ್ಲಿ ಬರುವ ಕುರುಬ, ಮಾಲೆಗಾರ, ತೆಲ್ಲಿಗ, ಪತ್ರಗಾರ, ಸಾಲಿಗ, ಜೇಡ, ಚಿಪ್ಪಿಗ, ಕಂಚುಗಾರ, ಕುಂಬಾರ, ಕಂಬಾರ, ಬೋಗಾರ, ಅಕ್ಕಸಾಲಿಗ, ಮಾಲಿಗ, ಮೇದ, ಸಮಗಾರ, ಬಡಗಿ ಈ ಎಲ್ಲಾ ಉತ್ಪಾದಕ ವಿನಿಮಯ ವೃತ್ತಿಯವರನ್ನು ಸೂಚಿಸುತ್ತದೆ. ಈ ವೃತ್ತಿಯವರಿಗೂ ಭೂಮಿ, ಶ್ರಮ ಹಾಗೂ ಹಣರೂಪದ ಬಂಡವಾಳ ಮತ್ತು ಸಂಘಟನೆಗಳೆಂಬ ನಾಲ್ಕು ಅಂಶಗಳು ಈ ವೃತ್ತಿಯವರಿಗೆ ಬೇಕಾಗುತ್ತದೆ.

**ಇತರೆ ವೃತ್ತಿಗಳು**

"ಉತ್ಪಾದಕ, ವಿನಿಮಯ ಮತ್ತು ಉತ್ಪಾದಕ ವಿನಿಮಯ ವೃತ್ತಿಗಳಲ್ಲದೆ ಯೋಧ, ಅಗಸ, ನಾಯಿಂದ, ನಾಯಕ, ತಳವಾರ, ಶಿಲ್ಪಕರ್ಮಿ, ಸೂಳೆಗಾರಿಕೆ, ಅಂಬಿಗ, ಆಯ್ದಕ್ಕಿ, ಒಕ್ಕಲುತನ, ಕಿನ್ನರಿ, ಗಾಣ, ಢಕ್ಕೆ, ಓಲೆಕಾರ, ತುರುಗಾಹಿ ನುಲಿ, ಬಹುರೂಪ, ಬಾಚಿ, ಸುಂಕ, ಸೂಜಿ, ಮಾದಾರ, ಮೇದಾರ, ರಾಯಸ, ವೈದ್ಯ, ಸತ್ತಿಗೆ, ಹಡಪ ಮುಂತಾದ ವೃತ್ತಿಗಳು ಮಧ್ಯಯುಗೀನ ಕರ್ನಾಟಕದಲ್ಲಿ ಇದ್ದವೆಂದು ತಿಳಿಯುತ್ತದೆ. ಇವೆಲ್ಲ ವೃತ್ತಿಗಳು ಶಾಸನಗಳಲ್ಲಿ ಉಲ್ಲೇಖಿತಗೊಂಡ ವೃತ್ತಿಗಳಾಗಿವೆ."[೩೮] ಇವಲ್ಲದೆ ಅನುಕ್ತವಾದ ಇಂಥ ಹಲವಾರು ವೃತ್ತಿಗಳು ಅಂದು ಸಮಾಜದಲ್ಲಿ ರೂಢಿಯಲ್ಲಿರಬಹುದು.

ಈ ಎಲ್ಲಾ ವೃತ್ತಿಗಳ ಹಿನ್ನೆಲೆಯನ್ನು ಗಮನಿಸಿದಾಗ ಸಮಾಜಜೀವನದ ಅವಿಭಾಜ್ಯ ಅಂಗಗಳಾಗಿ ಹುಟ್ಟಿದ ಈ ವೃತ್ತಿಗಳು ಪ್ರಾಚೀನ ಕಾಲದಲ್ಲೆ ಹುಟ್ಟಿದ ವೃತ್ತಿಗಳೆಂದು ಶಾಸನಗಳ ಆಧಾರದಿಂದ ತಿಳಿದುಬರುತ್ತದೆ. ಸಮಾಜ ಪರಿವರ್ತನೆಯಾದಂತೆ ಕೆಲವು ವೃತ್ತಿಗಳು ಅವಜ್ಞೆಗೆ ಗುರಿಯಾದವು. ಅವುಗಳಲ್ಲಿ ಮುಖ್ಯವಾಗಿ ಉನ್ನತವರ್ಗದ ಜನರು ತಮ್ಮ ಸೇವೆಗಾಗಿಯೇ ವೃತ್ತಿಗಳನ್ನು ಆಧುನಿಕ ಕಾಲದವರೆಗೂ ಮುಂದುವರಿಸಿಕೊಂಡು ಬಂದಿದ್ದಾರೆ. ಮತ್ತೆ ಕೆಲವು ವೃತ್ತಿಗಳು ಕೆಲವು ಕಾನೂನು ಕಟ್ಟಳೆ ಹಾಗೂ ಆಧುನಿಕತೆಯ ಪರಿಣಾಮವಾಗಿ ಇಂದು ಸಮಾಜ ಜೀವನದಲ್ಲಿ ಇಲ್ಲವಾಗಿರುವುದನ್ನು ಕಾಣುತ್ತೇವೆ.

ಹಿಂದಿನಿಂದಲೂ ಸಮಾಜದ ಬೇಕು ಬೇಡಗಳನ್ನು ಈಡೇರಿಸುತ್ತ ಜನರ ಬೇಡಿಕೆಗಳನ್ನು ಪೂರೈಸುತ್ತಿದ್ದ ಒಕ್ಕಲಿಗ, ಅಗಸ, ನಾಯಕ, ತಳವಾರ, ಶಿಲ್ಪಕರ್ಮಿ, ಬಡಗಿ, ಗಾಣ, ಬಾಚಿ, ಮಾದಾರ, ವೈದ್ಯ, ಹೂಗಾರ, ಕುರುಬ, ಅಕ್ಕಸಾಲಿಗ, ಹಡಪ ಮುಂತಾದ ವೃತ್ತಿಗಳು ದೈನಂದಿನ ಸಾಮಾಜಿಕ ಜೀವನಕ್ಕೆ ಅವಶ್ಯಕವೆನಿಸಿದ್ದರ ಪರಿಣಾಮ ಇಂದಿಗೂ ಈ ವೃತ್ತಿಗಳು ಪ್ರತ್ಯಕ್ಷವಾಗಿ, ಪರೋಕ್ಷವಾಗಿ, ಆಧುನಿಕ ಆವಿಷ್ಕಾರ, ವಸ್ತುಗಳ ಮಧ್ಯದಲ್ಲಿಯೇ ಇಂದಿಗೂ ಕೆಲವು ಕಡೆ ಉಳಿದುಕೊಂಡು ಬಂದಿವೆ. ಇನ್ನು ಉಳಿದ ವೃತ್ತಿಗಳಾದ ತೆಲ್ಲಿಗ, ಸಾಲಿಗ, ಬೇಡ, ಚಿಪ್ಪಿಗ, ಸಮಗಾರ, ಕಿನ್ನರಿ, ಢಕ್ಕೆ, ತುರುಗಾಹಿ, ನುಲಿ, ಸುಂಕ, ರಾಯಸ, ಸತ್ತಿಗೆ, ಮುಂತಾದ ವೃತ್ತಿಗಳು ಇಂದು ಅಷ್ಟಾಗಿ ಕಾಣಸಿಗುವುದಿಲ್ಲ. ಇದಕ್ಕೆ ಸಾಮಾಜಿಕ ಪರಿವರ್ತನೆ ಹಾಗೂ ಆಧುನೀಕರಣದ ಪರಿಣಾಮ ಮತ್ತು ಸಂಪನ್ಮೂಲಗಳ ಕೊರತೆ, ಬೇಡಿಕೆಯ ಕೊರತೆಯ ಕಾರಣದಿಂದ ಇವುಗಳು ಇಂದು ನಾಶ ಹೊಂದಿವೆ ಎಂದು ಹೇಳಬಹುದು.

ಒಂದು ನಾಡಿನ ಜೀವನಮಟ್ಟ ಹಾಗೂ ಅಲ್ಲಿನ ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯ ಜೀವನವನ್ನು ರೂಪಿಸುವ ರಕ್ಷಿಸುವ ಇಂಥ ವೃತ್ತಿಗಳ ಅಧ್ಯಯನದಿಂದ ಒಂದು ನಾಡಿನ ಜನರ ಜೀವನ ವಿಧಾನಗಳನ್ನು ತಿಳಿಯಬಹುದಾಗಿದೆ. ಈ ನಿಟ್ಟಿನಲ್ಲಿ ತಳವಾರ ಎನ್ನುವುದು ಗ್ರಾಮರಕ್ಷಣೆ, ಗ್ರಾಮಕಾವಲು, ಕಾವಲುಕಾಯುವಿಕೆಗಾಗಿ ನಿಯೋಜಿಸಲ್ಪಟ್ಟ ವೃತ್ತಿಯಾಗಿದೆ.

'ತಳವಾರಿಕೆ' ಕಾಲಾಂತರದಲ್ಲಿ ಹಲವಾರು ಸಮುದಾಯಗಳ ಸಂಸ್ಕೃತಿ, ಪರಂಪರೆ ಮತ್ತು ಇತಿಹಾಸಗಳಲ್ಲಿ ಮಿಳಿತಗೊಂಡು ಬಂದಿದೆ. ಆ ಮೂಲಕ ಒಂದು ಜನತೆಯ ಬದುಕು, ಹೊಂದಾಣಿಕೆ ಮತ್ತು ಹೊಣೆಗಾರಿಕೆಗಳನ್ನು ಇಂದಿಗೂ ಉಳಿಸಿ, ಬೆಳೆಸಿಕೊಂಡು ಬಂದಿವೆ. ಈ ವೃತ್ತಿಯ ಹಿನ್ನೆಲೆಯನ್ನು ಹಾಗೂ ಪರಂಪರೆಯನ್ನು ಪೌರಾಣಿಕ ಕಥೆ, ಕಾದಂಬರಿ ಹಾಗೂ ಐತಿಹ್ಯಗಳಿಂದಲೂ ಮತ್ತು ಇತಿಹಾಸದ ಆಕರಗಳಿಂದ ಅವರ ಜೀವನ ವಿಧಾನ, ಕಾರ್ಯವಿಧಾನ, ಅಧಿಕಾರ, ಹಕ್ಕು ಮತ್ತು ಕರ್ತವ್ಯಗಳನ್ನು ತಿಳಿಯಬಹುದು.

ಪ್ರಾಚೀನ ಕನ್ನಡ ಕಾವ್ಯ, ಶಾಸನ, ಪುರಾಣ ಇತಿಹಾಸಗಳಲ್ಲಿ ಉಲ್ಲೇಖಿತಗೊಳ್ಳುವ ತಳವಾರ, ಇತರೆ ವೃತ್ತಿಯವರಿಗಿಂತ ವಿಶೇಷವಾಗಿ ಮತ್ತು ಭಿನ್ನವಾಗಿ ಕಾಣುತ್ತಾನೆ. ಇದಕ್ಕೆ ಅಂದಿನ ಸಾಮಾಜಿಕ, ರಾಜಕೀಯ ಜೀವನದಲ್ಲಿ ತಳವಾರನು ಪಡೆದಿದ್ದ ವಿಶೇಷ ಸ್ಥಾನಮಾನ ಮತ್ತು ಪ್ರಾಮುಖ್ಯತೆಯನ್ನು ಹಲವಾರು ದಾಖಲೆಗಳಿಂದ ತಿಳಿಯಬಹುದಾಗಿದೆ.

## ೨.೬. ಸಮಾಜ ಮತ್ತು ಗ್ರಾಮಾಡಳಿತದಲ್ಲಿ ತಳವಾರರು

ಭಾರತೀಯ ಸಮಾಜ ಪ್ರಾಚೀನ ಹಾಗೂ ಸಂಕೀರ್ಣವಾದುದು. ಬಹಳ ವೈವಿಧ್ಯಪೂರ್ಣ ಹಾಗೂ ಸಮೃದ್ಧ ಪರಂಪರೆಯನ್ನು ಹೊಂದಿರುವ ನಾಡಾಗಿದೆ. ಆರ್ಯೀಕರಣದ ಪ್ರಕ್ರಿಯೆಯ ಅಂತಿಮ ಘಟ್ಟದಲ್ಲಿ ಭಾರತೀಯ ಸಮಾಜವು ರೂಪಿತಗೊಂಡಿತ್ತಲ್ಲದೆ, ಹಿಂದುಳಿದ ಜೀವನ ಕ್ರಮಕ್ಕೆ ಆಧಾರವೆನಿಸುವ ಪದ್ಧತಿಯೊಂದು ವಿಕಾಸಗೊಂಡಿತು. ಮಾನವ ಜನಾಂಗವು ಹಲವಾರು ಹಂತಗಳಲ್ಲಿ ಬೆಳೆದುಬಂದಿದೆ. ಮೊದಲನೇ ಹಂತದಲ್ಲಿ ಮಾನವ ತನ್ನ ದಿನನಿತ್ಯದ ಆಹಾರಕ್ಕೋಸ್ಕರ ಗುಡ್ಡಗಾಡು ಪ್ರದೇಶಗಳಲ್ಲಿದ್ದು, ಪ್ರಾಣಿ ಪಕ್ಷಿಗಳನ್ನು ಬೇಟೆಯಾಡಿ ಅವುಗಳನ್ನು ತಿನ್ನುತ್ತಾ ಅಲೆಮಾರಿಯಾಗಿ ಜೀವಿಸುತ್ತಿದ್ದನು. ಎರಡನೇ ಹಂತದಲ್ಲಿ ಅವನು ಗುಡ್ಡಗಾಡು ಬಿಟ್ಟು ಹುಲ್ಲುಗಾವಲು ಅರಸಿಕೊಂಡು ದನಕರುಗಳನ್ನು ಸಾಕುತ್ತಾ ತನ್ನ ಜೀವನ ನಡೆಸತೊಡಗಿದ. ಮೂರನೇ ಹಂತದಲ್ಲಿ ತಾನು ಕೈಗೊಂಡ ವೃತ್ತಿಯನ್ನು ಹವಾಮಾನದ ಬದಲಾವಣೆ ಮತ್ತು ತಾಂತ್ರಿಕ ವಿಶಿಷ್ಟತೆಗಳ ಬೆಳವಣಿಗೆಯಿಂದಾಗಿ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ವಲಸೆ ಹೋಗಲಾರಂಭಿಸಿದ. ಕಾಲಕ್ರಮೇಣ ತನಗೆ ಸೂಕ್ತವೆನಿಸಿದ ಸ್ಥಳದಲ್ಲಿ ಶಾಶ್ವತವಾಗಿ ನೆಲೆ ನಿಂತು, ತನ್ನ ಜೀವನಕ್ಕಾಗಿ ವ್ಯವಸಾಯವನ್ನು ಹಾಗೂ ವ್ಯವಸಾಯಕ್ಕಾಗಿ ದನಕರುಗಳನ್ನು ಸಾಕುತ್ತಾ ಬಂದಿದ್ದಾನೆ. ಕಾಲ ಕಳೆದಂತೆ ಸಮಾಜದಲ್ಲಿ ಹಲವಾರು ಮಾರ್ಪಾಡುಗಳು ಉಂಟಾಗಲಾರಂಭಿಸಿದವು. ಅವುಗಳಲ್ಲಿ ಮುಖ್ಯವಾಗಿ ತನ್ನ ಜೀವನಕ್ಕೆ ಮುಖ್ಯವೆನಿಸಿದ ವಸ್ತುಗಳ ತಯಾರಿಕೆಯಲ್ಲಿ ತೊಡಗಿದ. ಮುಂದೆ ಇವೇ ಒಂದೊಂದು ಕಸುಬುಗಳಾಗಿ ಉಗಮಗೊಂಡವು. ಉದಾಹರಣೆಗೆ ಕುಂಬಾರಿಕೆ, ಕಮ್ಮಾರಿಕೆ, ಅಗಸ, ಬೇಡ, ತಳವಾರ ಮುಂತಾದವರು.

ಅಲೆಮಾರಿಯಾಗಿದ್ದ ಮಾನವ ಒಂದು ಕಡೆ ನೆಲೆನಿಂತ ಮೇಲೆ ತನ್ನ ಜೀವನಕ್ಕೆ ಕೆಲವು ವಸ್ತುಗಳ ಬೇಡಿಕೆ ಹೆಚ್ಚಾಯಿತು. ಇದರಿಂದ ಬೇಡಿಕೆಗೆ ತಕ್ಕಂತೆ ಉತ್ಪಾದನೆ ಕೈಗೊಂಡು ವಿವಿಧ ವೃತ್ತಿ ಕಸುಬುಗಳನ್ನು ಮಾಡುವ ವಿವಿಧ ಗುಂಪುಗಳು ಹುಟ್ಟಿಕೊಂಡವು. ಹೀಗೆ ಉಂಟಾದ ಗುಂಪುಗಳಿಂದಲೇ ವೃತ್ತಿ ಆಧಾರಿತವಾಗಿ ವಿವಿಧ ಜಾತಿ, ಉಪಜಾತಿಗಳು ಹುಟ್ಟಿಕೊಂಡಿವೆ. ಇಂತಹ ಒಂದು ವೃತ್ತಿ ಹಿನ್ನೆಲೆಯುಳ್ಳ ತಳವಾರರು ಮೂಲದಲ್ಲಿ ಬೇಡ ನಾಯಕ ಸಮುದಾಯಕ್ಕೆ ಸೇರಿದವರಾಗಿದ್ದಾರೆ. ಕರ್ನಾಟಕದ ಸಾಂಸ್ಕೃತಿಕ ಇತಿಹಾಸದಲ್ಲಿ 'ತಳವಾರರ' ಪಾತ್ರ ಹಿರಿದಾದುದು.

ಇವರ ಸಾಂಸ್ಕೃತಿಕ ವಿಶಿಷ್ಟತೆಯನ್ನು ತಿಳಿಯಬೇಕಾದರೆ ಸಾಮಾಜಿಕ ಅನನ್ಯತೆಯಲ್ಲಿ ಅವರ ಪಾತ್ರ ಮತ್ತು ವೃತ್ತಿಯಿಂದ ಉಂಟಾದ ಸಂಪ್ರದಾಯ, ಆಚರಣೆಗಳನ್ನು ತಿಳಿಯಬೇಕಾಗುತ್ತದೆ. ಹಿಂದುಳಿದ ವರ್ಗಕ್ಕೆ ಸೇರಿದ ತಳವಾರರು ಸಾಮಾಜಿಕ, ರಾಜಕೀಯ ಮತ್ತು ಆರ್ಥಿಕ ಅಸಮಾನತೆಗೆ ಗುರಿಯಾಗಿದ್ದನ್ನು ಪ್ರಸ್ತುತಪಡಿಸಬೇಕಾಗುತ್ತದೆ. ಈ ನಿಟ್ಟಿನಲ್ಲಿ ತಳವಾರರ ಸಾಮಾಜಿಕ ಮತ್ತು ಸ್ಥಳೀಯ ಆಡಳಿತದಲ್ಲಿನ ಸ್ಥಾನಮಾನಗಳನ್ನು ಒಂದು ಸಂಸ್ಕೃತಿಯ ಹಿನ್ನೆಲೆಯಿಂದ ನೋಡಬಹುದು.

ಸಂಸ್ಕೃತಿ ಯಾವುದೇ ಒಂದು ಜನಾಂಗಕ್ಕೆ ಜಾತಿಗೆ ಸೀಮಿತವಲ್ಲ. ಅದು ಮಾನವ ಕುಲದ ಸಾಮಾಜಿಕ ಲಕ್ಷಣವಾಗಿದ್ದು, ಜನಾಂಗದಿಂದ ಜನಾಂಗಕ್ಕೆ, ಸಮುದಾಯದಿಂದ ಸಮುದಾಯಕ್ಕೆ ಭಿನ್ನತೆ ಕಂಡುಬರುತ್ತದೆ. ಇಂತಹ ಒಂದು ಅಂಶದ ಮೇಲೆಯೇ ಒಂದು ಸಮುದಾಯದ ಸಾಮಾಜಿಕ ಮತ್ತು ಭೌಗೋಳಿಕ ಪರಿಮಿತಿಯೊಳಗಿರುವ ಒಂದು ಗುಂಪಿನ ವೃತ್ತಿ ಮತ್ತು ಆಚರಣೆಗಳ ಒಂದು ಮೌಲ್ಯವಾಗಿ ಸಂಸ್ಕೃತಿಯ ಅಧ್ಯಯನ ಮಾಡಬೇಕಾದುದು ಅವಶ್ಯಕ. ಈ ನಿಟ್ಟಿನಲ್ಲಿ ಭಾರತದ ಬುಡಕಟ್ಟು ಜನಾಂಗಗಳಲ್ಲಿ ಒಂದಾದ ಬೇಡ ನಾಯಕರಲ್ಲಿ ಹೆಚ್ಚಾಗಿ ಗುರುತಿಸಲ್ಪಡುವ ತಳವಾರರ ವೈಶಿಷ್ಟ್ಯತೆಯನ್ನು ಒಂದು ಸಾಮಾಜಿಕ ವ್ಯವಸ್ಥೆಯಲ್ಲಿ ಆತನ ಸ್ಥಾನಮಾನಗಳೇನು ಎಂಬುದನ್ನು ಗುರುತಿಸಬೇಕಾಗುತ್ತದೆ.

ತಳವಾರಿಕೆ ವೃತ್ತಿ ಇಂದು ಕೇವಲ ಒಂದು ಜಾತಿ ಜನಾಂಗಕ್ಕೆ ಸೀಮಿತವಾಗಿಲ್ಲ. ಪ್ರಾದೇಶಿಕ ಭಿನ್ನತೆ ಮತ್ತು ಅನನುಕೂಲ ಪರಿಸ್ಥಿತಿಯಿಂದಾಗಿ ಅದು ಹಲವು ಜಾತಿ ಜನಾಂಗಗಳಲ್ಲಿ ವಿಸ್ತರಿಸಿಕೊಂಡಿದೆ. ಅದರಲ್ಲೂ ಮುಖ್ಯವಾಗಿ ಬೇಡನಾಯಕರು ತಳವಾರ ವೃತ್ತಿಯನ್ನು ಶೇ.೮೦ ಪಾಲನ್ನು ಪಡೆದಿದ್ದಾರೆ. ಗಂಗಾಮತಸ್ಥರು(ಕಬ್ಬಲಿಗರು) ಶೇ.೧೦ ರಷ್ಟಿದ್ದರೆ, ಇನ್ನು ಉಳಿದಂತೆ ಮುಸ್ಲಿಂರು, ಕುರುಬರು, ಹರಿಜನರು, ಲಿಂಗಾಯತರು ಶೇ.೧೦ರಲ್ಲಿ ವಿಂಗಡನೆಯಾಗುತ್ತಾರೆ. ಈ ಹಿನ್ನೆಲೆಯಿಂದ ಹೆಚ್ಚಿನ ಜನ ಬೇಡ ನಾಯಕ/ವಾಲ್ಮೀಕಿ ಸಮುದಾಯಕ್ಕೆ ಸೇರಿದ್ದರಿಂದ ಇವರ ಸಾಮಾಜಿಕ ಹಿನ್ನೆಲೆ ಇಲ್ಲಿ ಮುಖ್ಯವೆನಿಸುತ್ತದೆ.

ತಳವಾರರಿಗೆ ಸಮೀಪವರ್ತಿಯಾದ ಓಲೆಕಾರಿಕೆ, ಕೋಲುಕಾರಿಕೆಯನ್ನೊಳಗೊಂಡ ವೃತ್ತಿಗಳಿಗೆ 'ಹಳಬರು' ಎನ್ನುವ ಪರ್ಯಾಯ ಹೆಸರಿನಿಂದ ಕರೆಯುವ ಪದ್ಧತಿ ಇದೆ. ಕೋಲುಕಾರರಿಗೆ 'ನಾಟಿಕಾರರು', 'ಬಾರಿಕೇರರು' ಎಂದು ಕರೆಯುತ್ತಾರೆ. ಬಿಜಾಪುರ ಜಿಲ್ಲೆಯಲ್ಲಿ ತಳವಾರರಿಗೆ 'ಕಬ್ಬಿಲ', 'ಹಳಬ', 'ತಳವಾರ' ಎಂದು ಕರೆಯುತ್ತಾರೆ. ವಾಲೇಕಾರರು, ತಳವಾರರು, ಕೋಲುಕಾರರು ಯಾವುದೇ ಜಾತಿಯವರಿರಬಹುದು. ಹೆಚ್ಚಾಗಿ ಬೇಡರು ಇರುವುದರಿಂದ ತಳವಾರರು ಎಂದರೆ ಬೇಡರೆಂದೇ ಗುರುತಿಸುತ್ತಾರೆ. ತಳವಾರಿಕೆ ಎನ್ನುವುದು ಜಾತಿಮೂಲವಲ್ಲ. ಇದು ಒಂದು ವೃತ್ತಿ ಮೂಲ. ಓಲೆಕಾರ ಕಾಗದ ಪತ್ರಗಳ ರವಾನೆಯ ಜವಾಬ್ದಾರಿ ಹೊಂದಿದ್ದರೆ, ತಳವಾರ ಸಾರ್ವಜನಿಕರಿಗೆ ನಿಕಟವರ್ತಿಯಾಗಿ ಊರಿನ ಆಗುಹೋಗುಗಳ ಬಗೆಗೆ ಮಾಹಿತಿದಾರನಾಗಿ

ಕಾರ್ಯ ನಿರ್ವಹಿಸುತ್ತಾನೆ. ಕೋಲುಕಾರನು ಊರಿನ ಮುಖಂಡನ ಆದೇಶವನ್ನು ಡಂಗುರ ಹೊಡೆಯುತ್ತಾ ಊರಿನ ಜನರಿಗೆ ಆದೇಶವನ್ನು ಸಾರುತ್ತಾರೆ.

ತಳವಾರರು ತನ್ನದೇ ಆದ ಸಂಸ್ಕೃತಿಯೊಂದಿಗೆ ಒಂದು ಚಾರಿತ್ರಿಕ, ಐತಿಹಾಸಿಕ ಹಿನ್ನೆಲೆಯನ್ನು ಮೈಗೂಡಿಸಿಕೊಂಡು ಬಂದಿದ್ದಾರೆ. ಕಾಡಿನ ಸಂಸ್ಕೃತಿಯಿಂದ ನಾಡಿನ ಸಂಸ್ಕೃತಿಯೆಡೆಗೆ ಧಾವಿಸಿಬಂದ ಈ ಸಮುದಾಯ ದೈಹಿಕ ಸದೃಢತೆ ಮತ್ತು ಧೈರ್ಯಶಾಲಿತನ, ಯಾವುದೇ ಒಂದು ಬೇಟೆ ಮತ್ತು ವಸ್ತುವನ್ನು ಗುರಿಯಿಟ್ಟು ಹೊಡೆಯುವ ಚಾಕಚಕ್ಯತೆ ಇವೆಲ್ಲ ಕಾರಣಗಳಿಂದಾಗಿ ಇವರನ್ನು ರಕ್ಷಣಾವ್ಯವಸ್ಥೆಗೆ ನೇಮಿಸುವ ಪದ್ಧತಿ ಜಾರಿಗೆ ಬಂದಿತು. ರಕ್ಷಣಾವ್ಯವಸ್ಥೆಯಲ್ಲಿ ಮುಂಚೂಣಿಗೆ ಬಂದ ತಳವಾರಿಕೆ ವೃತ್ತಿ ಸೂಚಕವಾಗಿದ್ದಂತೆ ಜಾತಿಸೂಚಕವಾಗಿಯೂ ಬಳಕೆಗೆ ಬಂದಿತು. ತಳವಾರಿಕೆ ಎಂಬುದು ಅಧಿಕಾರದ ಸಂಕೇತ, ದೇಶಸೇವೆ ಜನಸೇವೆಗೆ ಕಂಕಣಬದ್ಧರಾಗಿದ್ದ ಇವರಿಗೆ ಪ್ರಜಾಪ್ರಭುತ್ವದಲ್ಲಿದ್ದ ನಾಯಕರು ಇವರ ಸೇವೆಯ ಕುರುಹಾಗಿ ತಮ್ಮ ಸಂಸ್ಥಾನದ, ದುರ್ಗದ ಪಾಳೆಯಪಟ್ಟಿನ, ಪ್ರತೀ ಊರಿನ ಸ್ಥಳ ವಿಚಾರಗಳನ್ನು ತಿಳಿಯಲು, ತಮ್ಮ ಅಧೀನದಲ್ಲಿದ್ದ ನಾಡಿನ ಆಗುಹೋಗುಗಳನ್ನು ತಳವಾರರಿಂದ ಪಡೆಯುತ್ತಿದ್ದರು. ನಾಡರಕ್ಷಣೆ, ಪ್ರಜಾ ರಕ್ಷಣೆಗಾಗಿ ಹಗಲುರಾತ್ರಿ ಎನ್ನದೆ ನಿಶಾಚರಿಯಾಗಿ ಪ್ರತೀ ಊರಿನ ಗೂಢಚಾರಿಕೆ, ರಕ್ಷಣೆ ಮತ್ತು ದುಷ್ಟ ವರ್ತನೆಗೆ ಎಡೆಗೊಡದಂತೆ ನೋಡಿಕೊಳ್ಳುವ ಜವಾಬ್ದಾರಿ ತಳವಾರನದು. ದುರ್ಗದ ತಳವಾರನಲ್ಲದೆ ಪಾಳೆಯಗಾರನ ಪ್ರತಿನಿಧಿ ಎನಿಸಿಕೊಳ್ಳುತ್ತಿದ್ದ ಅನೇಕ ನಾಯಕರು ಪಾಳೆಯಪಟ್ಟಿನ ಒಳಪಟ್ಟ ಅಧೀನ ನಾಯಕರುಗಳ ಚಲನವಲನಗಳನ್ನು ವೀಕ್ಷಿಸುತ್ತಾ ಅನ್ಯಾಯ, ಅನಾಚಾರಗಳು ನಡೆಯದಂತೆ ಜಾಗೃತ ವಹಿಸುತ್ತಿದ್ದರು. ಅರಸರ, ನಾಯಕರ ಆಜ್ಞಾಪಾಲಕರಾಗಿದ್ದ ಇವರನ್ನು 'ನಾಡ ತಳವಾರ' ಕೋಲಕಾರ, ಓಲೆಕಾರ, ಗುರಿಕಾರ ಎಂದು ವಿವಿಧ ವಿಭಾಗಗಳಲ್ಲಿ ನೇಮಿಸುವ ಪದ್ಧತಿ ರೂಢಿಗೆ ಬಂದಿತು.

ಪ್ರತಿಯೊಬ್ಬ ಅರಸನ ಕೈಕೆಳಗೂ ಒಬ್ಬ ತಳವಾರ ಇರುತ್ತಿದ್ದನು. ನಾಯಕನ ಸನ್ನಿಧಿಯಲ್ಲಿ ಹೊರಟ ಯಾವ ಆಜ್ಞೆಯೇ ಇರಲಿ ಅದು ತಳವಾರನ ಕೈಮುಟ್ಟಿ ಹೋಗಬೇಕಾಗಿತ್ತು. ನಾಡಿನ ಹೊಸ ಹೊಸ ಕಾರ್ಯ ಕೆಲಸಗಳು, ವಿಧಿ ವಿಧಾನಗಳಲ್ಲಿ ತಳವಾರನ ಪಾತ್ರ ಅಮೋಘವಾಗಿತ್ತು. ಬ್ರಿಟಿಷರು ಇಂತಹ ತಳವಾರರಿಗೆ ಸೈನಿಕ ಹುದ್ದೆಗಳನ್ನು ನೀಡಿದ್ದರು. ಮುಂದೆ ಇಂತಿಷ್ಟು ಸಂಬಳಕ್ಕೆ ಎಂಬಂತೆ ಭೂಕಂದಾಯ ಹಾಗೂ ತಲೆಗಂದಾಯ ವಸೂಲಿಗೆ ನಿಲ್ಲಿಸಿ, ಕೆಲವು ಇನಾಂ ಭೂಮಿಗಳನ್ನು ನೀಡಿದರು. ಸ್ವಾತಂತ್ರ್ಯ ನಂತರದಲ್ಲಿ ಜಾರಿಗೆ ಬಂದ ಕಂದಾಯ ಇಲಾಖೆಯಿಂದಾಗಿ ಇವರಿಗೆ ಮುಂಚೆ ಇದ್ದ ಪ್ರಾಶಸ್ತ್ಯ ನಿಂತುಹೋಯಿತು. ವಂಶ ಪರಂಪರೆಯಿಂದ ಬಂದ ವೃತ್ತಿ ಎಂಬ ಕಾರಣದಿಂದ ಇಂದು ಕಂದಾಯ ಇಲಾಖೆಯಲ್ಲಿ ಗ್ರಾಮಲೆಕ್ಕಾಧಿಕಾರಿಯ ಕೈಕೆಳಗೆ ಗ್ರಾಮಸಹಾಯಕನಾಗಿ ಅಧೀನ ವೃತ್ತಿಯಲ್ಲಿ ಮುಂದುವರೆದಿದ್ದಾರೆ. ಪ್ರಾಚೀನ ಕಾಲದಿಂದ

ಬಂದ ತಳವಾರಿಕೆ ಇಂದು ಮರೆಯಾಗಿದೆ. ಅದಕ್ಕೆ ಪ್ರತಿಯಾಗಿ ಗ್ರಾಮ ಸಹಾಯಕ, ಚಾಕರಿದಾರ ಎಂಬ ಹೆಸರಿನಿಂದ ಇಂದು ಇವರನ್ನು ಗುರುತಿಸಲ್ಪಡುತ್ತಾರೆ.

ತಳವಾರರಲ್ಲಿ ಬೇರೆ ಬೇರೆ ಜಾತಿಯವರೂ ಇರುವುದರಿಂದ ಅವರ ಜಾತಿ ಸಂಪ್ರದಾಯಕ್ಕೆ ಅನುಸಾರವಾಗಿ ಅವರ ಮದುವೆ, ಧಾರ್ಮಿಕ, ಸಾಂಸ್ಕೃತಿಕ ಆಚರಣೆಗಳಿವೆ. ಮುಂಚಿನ ಕಾಲಕ್ಕೆ ಊರ ರಕ್ಷಣೆಯ ಜವಾಬ್ದಾರಿ ಊರ ತಳವಾರನ ಮೇಲೆ ಇರುತ್ತಿತ್ತು. ಇದೊಂದು ಆತನಿಗೆ ಹೆಮ್ಮೆಯ ಸಂಗತಿಯೂ ಆಗಿತ್ತು. ಕಾಲಂತರದಲ್ಲಿ ವಿವಿಧ ರಾಜ್ಯ ಸಾಮ್ರಾಜ್ಯಗಳು ಗತಿಸಿ, ಕೋಟೆ ಕೊತ್ತಲಗಳು ಅಳಿಸಿ, ಅಗಸಿ ಬಾಗಿಲಿಗೆ ಬಂದ ತಳವಾರನ ಜೀವನ ಬರುಬರುತ್ತಾ ಗೌಡ, ಕುಲಕರ್ಣಿಯ ಅಮಲದಾರನ ಚಾಕರಿಯ ಆಳಾಗಿ ದುಡಿಯಬೇಕಾಯಿತು. ಅರಸರ ಭರಾಟೆ ಕಡಿಮೆಯಾದ ಮೇಲೆ, ಪೊಲೀಸರ ಕಾರ್ಯವ್ಯಾಪ್ತಿ ದೊಡ್ಡದಾಗುವುದಕ್ಕೂ ಮೊದಲು ತಳವಾರ ಊರ ಕಾವಲಿಗೆ, ಸೇವೆಗೆ ಮುಖ್ಯಸ್ಥನಾಗಿದ್ದ. ಆದರೆ ಇಂದು ಇದಕ್ಕೆ ವ್ಯತಿರಿಕ್ತವೆಂಬಂತೆ ಸಮಾಜದ ದೈವಕಾರ್ಯ, ಮದುವೆ ಮುಂಜಿ, ದೇವಸ್ಥಾನದ ಪೂಜಾರಿಕೆ, ದೇವರಿಗೆ ಕಾರ್ತಿಕ ಹಚ್ಚುವ, ಊರಿಗೆ ಬರುವ ಅಧಿಕಾರಿಗಳನ್ನು ಉಪಚರಿಸುವ ಮತ್ತು ಗ್ರಾಮದೇವತೆಗಳ ಮೆರವಣಿಗೆ, ಗೌರವ್ವ, ಸೀಗವ್ವರನ್ನು ಕೂರಿಸುವ ಮತ್ತು ಕಳುಹಿಸುವ ದಿನಗಳಲ್ಲಿ ಇವನ ಹಾಜರಿ ಇರಲೇ ಬೇಕಾಗುತ್ತದೆ. ಕೆಲವು ಊರುಗಳಲ್ಲಿ ಕೋಲುಕಾರರಾಗಿ ಡಂಗುರ ಹೊಡೆಯುವವರು ತಳವಾರರೇ ಆಗಿದ್ದಾರೆ. ಇನ್ನು ಮದುವೆಯ ಸಂದರ್ಭದಲ್ಲಿ ತಳವಾರ ಮತ್ತು ತಳವಾರಗಿತ್ತಿಗೆ ಕೆಲವು ಕಡೆ ವಿಶೇಷ ಸ್ಥಾನಮಾನಗಳಿವೆ. ವೀಳ್ಯೆಶಾಸ್ತ್ರ ಸಂದರ್ಭದಲ್ಲಿ ತಳವಾರರಿಗೆ ಪ್ರತ್ಯೇಕ ವೀಳ್ಯ ನೀಡುತ್ತಾರೆ. ಮದುವೆಯ ಕಾರ್ಯಕ್ರಮದಲ್ಲಿ ಸಕ್ರಿಯವಾಗಿ ಭಾಗವಹಿಸಲು ಚಾಜ ನೀಡುತ್ತಾರೆ. ಹಂದರಕ್ಕೆ ತಳೀರು ತೋರಣ ತರುವುದು, ಮದುವೆ ಅಡುಗೆ ಪಾತ್ರೆ ತೊಳೆಯುವುದು, ಮನೆ ಮನೆಗೆ ಹೋಗಿ ಮದುವೆಗೆ ಜನರನ್ನು ಆಮಂತ್ರಿಸುವ ಕಾರ್ಯ ಚಾಕರಿ ತಳವಾರನದಾಗಿದೆ. ತಳವಾರನ ಮನೆಯಲ್ಲಿ ಯಾರಾದರೂ ದೇವದಾಸಿಗಳಿದ್ದರೆ, ಅವರ ಕೈಯಲ್ಲೆ ತಾಳಿಮಣಿ(ಮುತ್ತು) ಪೋಣಿಸುವ ಪದ್ಧತಿ ಈಗಲೂ ಕೆಲವು ಕಡೆ ಇದೆ. ಇದಕ್ಕೆ ದೇವದಾಸಿಯರು ಸರ್ವಮಂಗಲೆಯರು, ನಿತ್ಯ ಮುತ್ತೈದೆ ಎಂಬ ಕಾರಣವನ್ನು ನೀಡುತ್ತಾರೆ. ಅವರ ಕೈಯಲ್ಲಿ ತಾಳಿ ಪೋಣಿಸಿದರೆ ತಮ್ಮ ಮಗಳು ದೀರ್ಘ ಸುಮಂಗಲಿಯಾಗಿರುತ್ತಾರೆ ಎಂಬ ನಂಬಿಕೆ ಇದೆ.

ಎಲ್ಲಾ ಊರಿನ ತಳವಾರರಿಗೆ ವತನಿ(ಜಾಗೀರು) ಜಮೀನುಗಳಿಲ್ಲ. ಕೆಲವು ಕಡೆ ಚಾಕರಿ ತಳವಾರನಿಗಿಂತ ಓಲೆಕಾರನಿಗೆ ಹೆಚ್ಚಿನ ಮಾನ್ಯತೆ ನೀಡಿ ಇನಾಂ ಭೂಮಿಗಳನ್ನು ನೀಡಿದ್ದಾರೆ. ಇನ್ನು ಕೆಲವು ಊರುಗಳಲ್ಲಿ ಜನಸಂಖ್ಯೆ ಅನುಸಾರವಾಗಿ ಒಂದೊಂದು ಜಾತಿಯಲ್ಲಿ ಅರ್ಹತೆ ಪಡೆದ ವ್ಯಕ್ತಿಯನ್ನು ಚಾಕರಿ ತಳವಾರನಾಗಿ, ಓಲೆಕಾರನಾಗಿ, ಕೋಲುಕಾರನಾಗಿ ನೇಮಿಸುವ ಪದ್ಧತಿಯೂ ಇತ್ತು. ಈ ಕಾರಣಕ್ಕಾಗಿಯೇ ಗದಗ, ಧಾರವಾಡ, ಬೆಳಗಾವಿ, ಬಿಜಾಪುರ

ಜಿಲ್ಲೆಗಳಲ್ಲಿ ಕಬ್ಬಲಿಗ, ಮುಸ್ಲಿಂ, ಕುರುಬ, ಹರಿಜನ ಜಾತಿಗೆ ಸೇರಿದ ಒಬ್ಬೊಬ್ಬ(ಹಳಬ) ತಳವಾರನಿದ್ದಾನೆ. ತಳವಾರನಿಗೆ ಹೆಚ್ಚಾಗಿ ಇನಾಂ(ವತನಿ) ಜಮೀನುಗಳಿಲ್ಲ. ಹೀಗಾಗಿ ಇವರು ತಮ್ಮ ಜೀವನಕ್ಕಾಗಿ ಕೃಷಿಯನ್ನು, ಪಶುಪಾಲನೆಯನ್ನು ಅವಲಂಬಿಸಬೇಕಾಯಿತು. ಇನ್ನು ಕೆಲವು ಕಡೆ ಆಯಗಾರರಾಗಿ ಸುಗ್ಗಿಯ ಕಾಲದಲ್ಲಿ ರೈತರಿಂದ ದವಸ, ಧಾನ್ಯ ಪಡೆಯುವ ಪದ್ಧತಿ ಇದೆ.

ಸಾಮಾಜಿಕವಾಗಿ ಅಲ್ಪಸಂಖ್ಯಾತರಾಗಿರುವ ತಳವಾರರು ಮೂಲದಲ್ಲಿ ಬೇಡ ಜನಾಂಗಕ್ಕೆ ಸೇರಿದವರಾಗಿದ್ದಾರೆ. ಪ್ರಾಚೀನ ಕಾಲದಿಂದ ಮಧ್ಯಕಾಲೀನ ಇತಿಹಾಸದವರೆಗೂ ಇವರ ವೃತ್ತಿಗೆ ಮತ್ತು ಜಾತಿಗೆ ವಿಶೇಷ ಸ್ಥಾನಮಾನ ಪಡೆದಿದ್ದ ಇವರು ಆಧುನಿಕ ಕಾಲದಲ್ಲಿ ಚಾಕರಿ ಎಂಬ ತಳಮಟ್ಟದ ಕಾರ್ಯಕ್ಕೆ ತಳ್ಳಲಾಗಿದೆ. ವರ್ಣಾಶ್ರಮ ವ್ಯವಸ್ಥೆಯಿಂದ ಇವರನ್ನು ಗುರುತಿಸುವುದಾದರೆ ಕ್ಷತ್ರಿಯನಾಗಿ ಹುಟ್ಟಿದ ತಳವಾರ ಕ್ಷತ್ರಿಯನಾಗೇ ಬೆಳೆದು ಶೂದ್ರನಾಗಿ ದುಡಿದು, ಕೊನೆಗೆ ಶೂದ್ರರಾಗಿಯೇ ಉಳಿದುಕೊಂಡು ಬಿಟ್ಟಿದ್ದಾರೆ. ದೈಹಿಕ ಸದೃಢತೆ ಮತ್ತು ಧೈರ್ಯ, ಸಾಹಸಗಳಿಂದ ತಳವಾರಿಕೆಯಂತಹ ಜವಾಬ್ದಾರಿಯುತ ಹುದ್ದೆಯನ್ನು ನಿಭಾಯಿಸಿದ ತಳವಾರರು ಕಾಲದಿಂದ ಕಾಲಕ್ಕೆ ಬದಲಾದ ಪರಿಸ್ಥಿತಿಗನುಗುಣವಾಗಿ ಸಮಾಜಕ್ಕೆ ಹೊಂದಿಕೊಂಡೇ ತನ್ನ ಜೀವನವನ್ನು ನಿರ್ವಹಿಸುತ್ತಾ ಬಂದಿದ್ದಾನೆ. ಹಾಗೆಯೇ ವಿವಿಧ ಹಂತಗಳಲ್ಲಿ ಹಲವು ಏಳುಬೀಳುಗಳನ್ನು ಕಂಡಿದ್ದಾನೆ.

ಪ್ರಾಚೀನ ಕಾಲದಲ್ಲಿ ಬೇಟೆಯಿಂದ ವೃತ್ತಿ ಆರಂಭಿಸಿದ ಇವರನ್ನು ಸೈನಿಕನಾಗಿ, ನಾಡ ತಳವಾರನಾಗಿ, ತಳವಾರನಾಗಿ, ಓಲೆಕಾರನಾಗಿ, ಗ್ರಾಮರಕ್ಷಕನಾಗಿ ದುಡಿದಿದ್ದಾರೆ. ಸ್ವಾತಂತ್ರ್ಯ ನಂತರದಲ್ಲಿ ಕಂದಾಯ ವಸೂಲಿಗಾರನಾಗಿ ಗೌಡ, ಕುಲಕರ್ಣಿಯವರ ಸಹಾಯಕನಾಗಿ ದುಡಿದಿದ್ದಾನೆ. ಕ್ರಿ.ಶ.೧೯೬೧ರಿಂದೀಚೆಗೆ ಈ ವೃತ್ತಿಯನ್ನು ತೆಗೆದು ಹಾಕಿದ ಅಂದಿನ ಸರ್ಕಾರ ಇವರ ಇನಾಂ ಭೂಮಿಯೊಂದನ್ನು ಬಿಟ್ಟು ಉಳಿದ ಎಲ್ಲಾ ಸೌಲಭ್ಯ, ಗೌರವಗಳನ್ನು ಕಡಿತ ಗೊಳಿಸಿತು. ಹಿಂದಿನಿಂದಲೂ ಗ್ರಾಮಾಡಳಿತ ಮತ್ತು ಗ್ರಾಮರಕ್ಷಣೆಯ ಜವಾಬ್ದಾರಿ ಹೊತ್ತಿದ್ದ ತಳವಾರನಿಗೆ ಯಾವ ಮಾನ್ಯತೆಯನ್ನು ನೀಡದೇ ಇವರನ್ನು ಕಡೆಗಣಿಸಿತು. ಪಾರಂಪರಿಕವಾದ ವೃತ್ತಿ ಎಂಬ ಕಾರಣದಿಂದ ಪ್ರತಿ ಊರಿನಲ್ಲಿ ಕಂದಾಯ ಇಲಾಖೆಯ ಗ್ರಾಮಲೆಕ್ಕಾಧಿಕಾರಿಯ ಸಹಾಯಕನಾಗಿ, ಊರಿನ ಮಾಹಿತಿ ನೀಡುವ ಮಾಹಿತಿದಾರನಾಗಿ 'ಗ್ರಾಮಸಹಾಯಕ' ಎಂಬ ತಾತ್ಕಾಲಿಕ ಹುದ್ದೆಯನ್ನು ಸೃಷ್ಟಿಸಿ ಯಾವುದೇ ಸರಕಾರಿ ಸೌಲಭ್ಯಗಳಿಲ್ಲದೆ, ಗೌರವಧನದ ಆಧಾರದ ಮೇಲೆ ತಳವಾರರನ್ನು ದುಡಿಸಿಕೊಳ್ಳುತ್ತಿದೆ. ಇದರಲ್ಲಿಯೂ ಮೂಲದಿಂದ ತಳವಾರಿಕೆಯನ್ನು ಮಾಡಿಕೊಂಡು ಬಂದ ವಂಶಸ್ಥರು ಶೇ.೬೦ರಷ್ಟಿದ್ದರೆ, ಇನ್ನು ಉಳಿದಂತೆ ರಾಜಕೀಯ ಮತ್ತು ಆರ್ಥಿಕ ಪ್ರಭಾವ ಬಳಸಿ ಕೆಲವು ಮೇಲ್ವರ್ಗದ ಸ್ಥಿತಿವಂತರೂ ಈ ವೃತ್ತಿಯನ್ನು ಅತಿಕ್ರಮಿಸಿದ್ದಾರೆ. ಮೂಲದಲ್ಲಿ ನೀಡಿದ್ದ ಕೆಲವು ಇನಾಂ ಭೂಮಿಗಳೇ ಕೆಲವರಿಗೆ ಇಂದು ಜೀವನಾಧಾರವಾಗಿದ್ದರೆ, ಇನ್ನು ಕೆಲವರಿಗೆ ಇದು ಯಾವುದೂ ಇಲ್ಲ. ಜೀವನೋಪಾಯಕ್ಕಾಗಿ ಕೆಲವರು ಕೂಲಿ–ನಾಲಿ

ಮಾಡಿ ಜೀವನ ನಡೆಸುತ್ತಿದ್ದರೆ, ಮತ್ತೆ ಕೆಲವರು ಪಶುಪಾಲನೆ ಹಾಗೂ ಕೃಷಿ ಮಾಡುತ್ತಾ ತಮ್ಮ ಜೀವನ ನಿರ್ವಹಿಸುತ್ತಿರುವುದು ಕ್ಷೇತ್ರಕಾರ್ಯದ ಮೂಲಕ ತಿಳಿದುಬಂದಿದೆ.

**ಗ್ರಾಮಾಡಳಿತದಲ್ಲಿ ತಳವಾರರು**

ವಿಜಯನಗರದ ಅರಸರು ಒಂದು ಅದ್ಭುತವಾದ ಗ್ರಾಮಾಡಳಿತ ವ್ಯವಸ್ಥೆಯನ್ನು ಜಾರಿಗೆ ತಂದರು. ಇದನ್ನು ಮೊದಲು ಆರಕ್ಷಕ ವ್ಯವಸ್ಥೆಯ ಅಡಿಯಲ್ಲಿ ಎರಡು ರೀತಿಯ ಆಡಳಿತವನ್ನು ಜಾರಿಗೆ ತಂದರು. ಒಂದು ಇಡೀ ಸಾಮ್ರಾಜ್ಯಕ್ಕೆ ಸಂಬಂಧಿಸಿದ್ದಾದರೆ, ಇನ್ನೊಂದು ಸ್ಥಳೀಯ ಹಂತದಲ್ಲಿತ್ತು. ರಾಜಧಾನಿಯ ಆಡಳಿತದಂತೆಯೇ ಸ್ಥಳೀಯ ಆಡಳಿತ ಪದ್ಧತಿ ರೂಢಿಗತವಾಯಿತು. ಆರಕ್ಷಕ ವ್ಯವಸ್ಥೆಯನ್ನು ಸಾಮ್ರಾಜ್ಯದ ಒಂದು ಭಾಗವಾಗಿ ರೂಪಿಸಲಾಯಿತು. ಇಲ್ಲಿ ಆರಕ್ಷಕ, ಗ್ರಾಮರಕ್ಷಕನಾಗಿ ತಳವಾರ ಕಂಡುಬರುತ್ತಾನೆ. ಇತನ ಮುಖ್ಯ ಕರ್ತವ್ಯವೆಂದರೆ ಗ್ರಾಮದ ಶಾಂತಿಯನ್ನು ಕಾಪಾಡುವುದು. ಕಾಡುಮೃಗಗಳಿಂದ ರಕ್ಷಿಸುವುದು. ಗ್ರಾಮದಲ್ಲಿ ಅಪರಾಧಿ ಚಟುವಟಿಕೆಗಳು ನಡೆಯದಂತೆ ಜಾಗ್ರತೆ ವಹಿಸುವುದು. ಹಾಗೂ ಸಣ್ಣಪುಟ್ಟ ಅಪರಾಧಗಳನ್ನು ತನ್ನ ವ್ಯಾಪ್ತಿಯಲ್ಲೇ ಅವುಗಳನ್ನು ಬಗೆಹರಿಸುವುದು. ಹಾಗೂ ಆಯಾ ಊರಿನ ಗೂಢಾಚಾರಿಕೆ ಮಾಹಿತಿಗಳನ್ನು ತನ್ನ ನಾಯಕರಿಗೆ ಒಪ್ಪಿಸುವುದಾಗಿತ್ತು. ಹೀಗೆ ತಳವಾರನು ಮುಖ್ಯವಾಗಿ ಕಾವಲುಗಾರನಾಗಿ ಆಯಾ ಗ್ರಾಮ, ನಗರದ ಸಂಪೂರ್ಣ ರಕ್ಷಣಾ ಜವಾಬ್ದಾರಿಯನ್ನು ಹೊರುವ ಆರಕ್ಷಕನಾಗಿ ಈ ಕಾಲದಲ್ಲೇ ಕಂಡುಬಂದಿದ್ದಾನೆ.

ಕ್ರಿ.ಶ.೧೭೬೦-೧೭೯೯ರಲ್ಲಿ ಆಳ್ವಿಕೆ ನಡೆಸಿದ ಹೈದರಾಲಿ ಮತ್ತು ಟಿಪ್ಪು ಸುಲ್ತಾನ್‌ರ ಆಳ್ವಿಕೆಯಲ್ಲಿ ಕೇಂದ್ರ ನಿರ್ದೇಶಿತ ಆಡಳಿತ ನಿರ್ವಹಣೆಗಾಗಿ ಪೊಲೀಸ್ ವ್ಯವಸ್ಥೆಯನ್ನು ಜಾರಿಗೆ ತಂದರು. ಜೊತೆಗೆ ಜಮೀನ್ದಾರಿ ಪದ್ಧತಿ, ಭೂಕಂದಾಯ ಪದ್ಧತಿ ಜಾರಿಗೆ ಬಂದಿತು. ಇದರ ನಿರ್ವಹಣೆಗಾಗಿ ಸ್ಥಳೀಯ ಮಟ್ಟದಲ್ಲಿ ಗೌಡ(Judge), ಶಾನುಭೋಗ(Registrar), ತಳವಾರ, ತೋಟಿ(Watch man), ನೀರಗಂಟಿ(Water man) ಎಂಬ ವಿವಿಧ ರೀತಿಯ ಹುದ್ದೆಗಳು ಹುಟ್ಟಿಕೊಂಡವು. ಈ ವ್ಯವಸ್ಥೆ ಒಮ್ಮೆಗೆ ಸೃಷ್ಟಿಯಾಗಿಲ್ಲ. ಇವು ಹಲವು ಶತಮಾನಗಳ ಅನುಭವ ಮತ್ತು ವಿಕಸನದಿಂದ ರೂಪ ತಾಳಿವೆ. ಗೌಡ ಊರಿನ ಮುಖಂಡನಾಗಿ ನ್ಯಾಯ, ನೀತಿಗಳನ್ನು ಜಾರಿಗೆ ತರುವ ಮತ್ತು ನಿಯಂತ್ರಿಸುವ ಕರ್ತವ್ಯವನ್ನು ಹೊಂದಿದ್ದ ಇನ್ನು ಕುಲಕರ್ಣಿ(ಶ್ಯಾನುಭೋಗ) ಕಂದಾಯ ಸಂಗ್ರಾಹಕ ಮತ್ತು ಕಡತಗಳ ರಕ್ಷಕನಾಗಿ ಕಾರ್ಯ ನಿರ್ವಹಿಸುತ್ತಿದ್ದ. ತಳವಾರ ಕಂದಾಯ ಸಂಗ್ರಹಣೆ ಮತ್ತು ಆಯುಧಧಾರಿಯಾಗಿ ಗೌಡ, ಪಟೇಲನ ಆಜ್ಞಾನುಧಾರಕನಾಗಿ ಗ್ರಾಮ, ನಗರದ ಶಾಂತಿಪಾಲನೆ ಮತ್ತು ರಕ್ಷಣೆ ಇವನ ಪ್ರಮುಖ ಕಾರ್ಯವಾಗಿತ್ತು.

ಪ್ರತಿಯೊಂದು ಊರಲ್ಲಿಯೂ ಗ್ರಾಮಸಭೆ ಮತ್ತು ನ್ಯಾಯಪಂಚಾಯ್ತಿಗಳು ಇವರ ಮಟ್ಟದಲ್ಲಿಯೇ ಜರುಗುತ್ತಿದ್ದವು. ಇದೇ ಪದ್ಧತಿ ಬಿಜಾಪುರ ಸುಲ್ತಾನರು, ಮೊಘಲ್ ಮತ್ತು

ಮರಾಠರ ಕಾಲಕ್ಕೂ ಮುಂದುವರಿಯಿತು. ನಂತರ ಬಂದ ಬ್ರಿಟಿಷರು ತಮ್ಮ ರಾಜ್ಯಾಡಳಿತಕ್ಕೆ ಹೊಸ ರೂಪವನ್ನು ನೀಡಿದರು. ಬ್ರಿಟಿಷರ ಆಡಳಿತದಲ್ಲಿ ಬ್ರಿಟನ್‌ರಾಣಿಯ ಸರ್ವಆಡಳಿತಕ್ಕೆ ಮುಖ್ಯಸ್ಥಳಾದರೆ, ಆಯಾ ರಾಜ್ಯಕ್ಕೆ ಗವರ್ನರ್ ಜನರಲ್ ಮುಖ್ಯಸ್ಥನಾಗಿದ್ದ. ಅದೇ ರೀತಿ ಜಿಲ್ಲೆಗೆ ಕಲೆಕ್ಟರ್, ಸಬ್ ಕಲೆಕ್ಟರ್, ತಹಶೀಲ್ದಾರ್, ಮಾಮಲೆದಾರ್, ಜಿಲ್ಲೆದಾರ್(ಕಂದಾಯ ಪರಿವೀಕ್ಷಕ). ಗ್ರಾಮಗಳಲ್ಲಿ ಗೌಡ, ಪಟೇಲ, ತಳವಾರ ಎಂಬ ಶ್ರೇಣೀಕೃತ ಅಧಿಕಾರ ವರ್ಗವನ್ನು ಸೃಷ್ಟಿಸಿದರು. ಈಸ್ಟ್ ಇಂಡಿಯಾ ಕಂಪನಿಯ ನಂತರ ಇದಕ್ಕೆ ಒಂದು ಹೊಸ ರೂಪ ನೀಡಿ ಬ್ರಿಟಿಷ್ ಸರ್ಕಾರದ ವ್ಯಾಪ್ತಿಗೆ ಒಳಪಡಿಸಲಾಯಿತು. ಆದರೆ ಅಧಿಕಾರ, ಹಕ್ಕುಗಳು ಎಲ್ಲಾ ಬ್ರಿಟಿಷರ ಕೈಯಲ್ಲಿತ್ತು. ಸ್ಥಳೀಯರಾದ ಗೌಡ, ಪಟೇಲ, ಶ್ಯಾನುಭೋಗ, ತಳವಾರ ಕೇವಲ ಇವರ ಕೈಗೊಂಬೆಗಳಾಗಿದ್ದರು. ಗೌಡ, ಪಟೇಲರಲ್ಲಿ ಮುಕ್ಕಾಲುಪಾಲು ವೀರಶೈವ ಲಿಂಗಾಯತರಾಗಿದ್ದಾರೆ. ಇನ್ನು ಕಾಲುಭಾಗ ಬೇಡರು, ಕುರುಬರು ಇದ್ದಾರೆ. ಅದರಲ್ಲೂ ವಿದ್ಯಾವಂತರಿಗೆ ಹೆಚ್ಚಿನ ಮಾನ್ಯತೆ ನೀಡಲಾಗಿತ್ತು. ಶ್ಯಾನುಭೋಗರಲ್ಲಿ ಹೆಚ್ಚಿನವರು ಬ್ರಾಹ್ಮಣ ಸಮುದಾಯಕ್ಕೆ ಸೇರಿದವರಿದ್ದಾರೆ. ಉಳಿದವರಲ್ಲಿ ಲಿಂಗಾಯತರಿದ್ದಾರೆ. ತಳವಾರ, ಓಲೆಕಾರ, ವೃತ್ತಿಗೆ ಹೆಚ್ಚಾಗಿ ಬೇಡ, ನಾಯಕರನ್ನು ನೇಮಿಸುತ್ತಿದ್ದರು. ಇದಕ್ಕೆ ಅವರ ದೈಹಿಕ, ಮಾನಸಿಕ ಸದೃಢತೆ ಕಾರಣವಾಗಿತ್ತು. ಓಲೆಕಾರರನ್ನು 'ಉಗ್ರಾಣಿ' ಎಂದು ಕರೆಯುವ ವಾಡಿಕೆಯಿದೆ. 'ಉಗ್ರಾಣಿ' ಎಂದರೆ, ಕಂದಾಯವನ್ನು ದವಸ ಧಾನ್ಯದ ರೂಪದಲ್ಲಿ ಸಂಗ್ರಹಿಸಿ ಅವುಗಳನ್ನು ವ್ಯವಸ್ಥಿತವಾಗಿ ತಹಶೀಲ್ ಕಚೇರಿಗೆ ತಲುಪಿಸುವ ಜವಾಬ್ದಾರಿ ಈತನದಾಗಿತ್ತು. ಅದಕ್ಕಾಗಿ 'ಉಗ್ರಾಣಿ'(ಸಂಗ್ರಾಹಕ) ಎಂಬ ಹೆಸರು ಬಂದಿರಬಹುದು. ತೋಟಿ, ನೀರಗಂಟಿಯವರು ಸಾಮಾನ್ಯವಾಗಿ ಹಿಂದುಳಿದ ಮತ್ತು ದಲಿತ ಜನಾಂಗಕ್ಕೆ ಸೇರಿದವರಾಗಿದ್ದಾರೆ. ನಂತರ ಗ್ರಾಮದಲ್ಲಿ ಶಾಂತಿ ಸುವ್ಯವಸ್ಥೆ ಕಾಪಾಡಲು ಮತ್ತು ಪೊಲೀಸ್‌ರಿಗೆ ಸೂಕ್ತ ಮಾಹಿತಿ ನೀಡಲು 'ದಳಪತಿ' ಎನ್ನುವ ಅಧಿಕಾರಿಯನ್ನು ನೇಮಿಸಲಾಯಿತು.

"ಕ್ರಿ.ಶ.೧೮೧೬ರಲ್ಲಿ ತಳವಾರರನ್ನು ಗ್ರಾಮಾಧಿಕಾರಿಗಳ ಅಧಿಕಾರದಲ್ಲಿಡಲಾಯಿತು. ಕ್ರಿ.ಶ.೧೮೫೯ರಲ್ಲಿ ಪೊಲೀಸ್ ಕಾನೂನುಗಳು ಜಾರಿಗೆ ಬಂದ ನಂತರ ತಳವಾರರು ಗ್ರಾಮಾಧಿಕಾರಿಗಳ ಕೆಳಗೆ ಭೂಕಂದಾಯ ಕ್ಷೇತ್ರದಲ್ಲಿ ಮುಂದುವರಿಯಬೇಕಾಯಿತು. ಕ್ರಿ.ಶ.೧೮೯೮ರಲ್ಲಿ ಇವರಿಗೆ ಖಡ್ಗದ ಬದಲಾಗಿ ಹಿತ್ತಾಳೆ ಪಟ್ಟಿ ಮತ್ತು ಲಾಠಿಗಳನ್ನು ಕೊಡಲಾಯಿತು."[೨೦] ಈ ಕಾಲದಲ್ಲೇ ಗೌಡ, ಪಟೇಲ, ಕುಲಕರ್ಣಿ, ತಳವಾರ, ಓಲೆಕಾರನಿಗೆ ಇವರ ಸೇವಾರ್ಥವಾಗಿ ಕಂದಾಯ ರಹಿತ ಸರ್ವಮಾನ್ಯ ವತನಿ ಭೂಮಿ(ಇನಾಂ) ಜಮೀನುಗಳನ್ನು ಕೊಡಲಾಯಿತು. ಇನ್ನು ತೋಟಿ, ನೀರಗಂಟಿ, ದಳವಾಯಿ, ಪೂಜಾರಿಗಳಿಗೂ ಇನಾಂ ಭೂಮಿಗಳನ್ನು ನೀಡಿ ಇದಕ್ಕೆ ಕಡಿಮೆ ದರದ(ಜುಡಿ) ಕಂದಾಯ(ಕ್ವಿಟ್ ರೆಂಟ್) ವಿಧಿಸಲಾಗುತ್ತಿತ್ತು. ಈ ಕಾಲದಲ್ಲಿಯೇ ಜನರ ಸೇವೆಯ ದೃಷ್ಟಿಯಿಂದ ವಿವಿಧ ವೃತ್ತಿಗಳನ್ನು ಕೈಗೊಂಡ ವೃತ್ತಿದಾರರಿಗೆ ಸ್ಥಳೀಯವಾಗಿ 'ಆಯ'

ನೀಡುವ ಪದ್ಧತಿಯೂ ಜಾರಿಗೆ ಬಂದಿತು. ಆಯಗಾರ ಎಂದರೆ ಊರಿನ ಜನರಿಗೆ ಬೇಕಾದ ವಸ್ತು, ಸಲಕರಣೆ, ಸೌಲಭ್ಯ ಸೇವೆಗಳನ್ನು ಉಚಿತವಾಗಿ ಒದಗಿಸುವುದಾಗಿದೆ. ಉದಾಹರಣೆಗೆ ಕ್ಷೌರಿಕ, ಬಡಿಗ, ಕಮ್ಮಾರ, ಕುಂಬಾರ, ಚಮ್ಮಾರ, ತಳವಾರ, ತೋಟಿ, ನೀರಗಂಟಿ ಮುಂತಾದವರು ಇವರು ತಾವು ಮಾಡಿದ, ಸೇವೆಗೆ ಮತ್ತು ನೀಡಿದ ಉತ್ಪನ್ನಗಳಿಗೆ ನಗದು ಹಣ ಕೊಡಬೇಕಾಗಿಲ್ಲ. ಇದಕ್ಕೆ ಬದಲಾಗಿ ವರ್ಷಕ್ಕೆ ಇಂತಿಷ್ಟು ಎಂದು ಒಂದು ನಿಶ್ಚಿತ ಪ್ರಮಾಣದಲ್ಲಿ ದವಸಧಾನ್ಯಗಳನ್ನು ನೀಡುವುದಾಗಿದೆ. ಇದಕ್ಕೆ 'ಬಾರಾ ಬಲೂತಿ' ಎಂದು ಕರೆಯುತ್ತಾರೆ.

ಹಿಂದೆ ಗ್ರಾಮದಲ್ಲಿ ಇದ್ದ ಪಟೇಲ ಮತ್ತು ಕುಲಕರ್ಣಿಗೆ ಸಹಾಯ ಮಾಡಲು ತಳವಾರ, ಹಳಬ, ಓಲೆಕಾರ ಮುಂತಾದ ನೌಕರಿಗಳಿದ್ದವು. ಹಿಂದಿನಿಂದಲೂ ಪಾರಂಪರಿಕವಾಗಿ ಬಂದಿದ್ದ ಈ ಹುದ್ದೆಯನ್ನು ೧೯೬೧ರ ಗ್ರಾಮಾಡಳಿತ ರದ್ಧತಿ ಅಧಿನಿಯಮದ ಪ್ರಕಾರ ರದ್ದು ಮಾಡಲಾಯಿತು. ಆನಂತರ ಗ್ರಾಮ ಲೆಕ್ಕಿಗರ ಸಂದೇಶ ವಾಹಕರಾಗಿ, ದಪ್ತರಗಂಟು(ಹಣದ ಚೀಲ) ಸಾಗಿಸುವ ಮತ್ತು ಜನಗಣತಿ ಹಾಗೂ ಚುನಾವಣೆ ಸಂದರ್ಭದಲ್ಲಿ ನೆರವಾಗುವ ಕಾಯಕ ತಳವಾರನದು. ಕಂದಾಯ ನಿರೀಕ್ಷಕರು ಭೂಮಿ ಅಳತೆ ಮಾಡುವ ಸಂದರ್ಭದಲ್ಲಿ ಅವರ ನೆರವಿಗಾಗಿ ತಳವಾರನಿರಬೇಕು. ಊರಲ್ಲಿ ಯಾವುದೇ ಅವಘಡ, ಅಪಘಾತ, ದುರ್ಮರಣ, ಆತ್ಮಹತ್ಯೆಯಂತಹ ಘಟನೆಗಳು ನಡೆದಾಗ ಅಲ್ಲಿನ ಸಾಕ್ಷ್ಯಗಳು ನಾಶವಾಗದಂತೆ ಎಚ್ಚರವಹಿಸುವುದು ಮತ್ತು ಅವುಗಳನ್ನು ಹಿರಿಯ ಅಧಿಕಾರಿಗಳು ಬರುವವರೆಗೂ ಕಾವಲು ಕಾಯುವುದು ತಳವಾರನ ಕಾಯಕವಾಗಿತ್ತು. ಇಂದಿನ ತಳವಾರ(ಗ್ರಾಮಸಹಾಯಕ)ನ ಅತಿ ಮುಖ್ಯವಾದ ಕಾರ್ಯವೆಂದರೆ ಗ್ರಾಮದಲ್ಲಿ ಜನನ, ಮರಣದ ವರದಿಯನ್ನು ಜರೂರಾಗಿ ಗ್ರಾಮಲೆಕ್ಕಾಧಿಕಾರಿಗೆ ನೀಡುವುದು, ರೈತರ ಪಹಣಿ, ಪತ್ರಗಳನ್ನು ನೀಡುವುದು, ಕಂದಾಯ ಪಾವತಿಸಿದ ರೈತರಿಗೆ ನೋಟಿಸ್ ಕೊಡುವುದು, ಹಿರಿಯ ಅಧಿಕಾರಿಗಳು ಬಂದಾಗ ಅವರ ಜೊತೆಗಿರುವುದಾಗಿದೆ.

ಬ್ರಿಟಿಷರ ಕಾಲಾವಧಿಯಲ್ಲಿದ್ದಂತೆ ಇಂದು ಸಹ ಕಲೆಕ್ಟರ್ ಸ್ಥಾನದಲ್ಲಿ ಜಿಲ್ಲಾಧಿಕಾರಿ ಅಥವಾ ಡೆಪ್ಯೂಟಿ ಕಮೀಷನರ್ ಉಪ ವಿಭಾಗಕ್ಕೆ(ಸಬ್ ಡಿವಿಜನ್) ಸಬ್ ಕಲೆಕ್ಟರ್ ಸ್ಥಾನದಲ್ಲಿ ಅಸಿಸ್ಟೆಂಟ್ ಕಮೀಷನರ್ ಅಥವಾ ಉಪವಿಭಾಗಾಧಿಕಾರಿ ಹಾಗೂ ತಾಲೂಕಿಗೆ ತಹಶೀಲ್ದಾರರು ಇದ್ದಾರೆ. ಹೋಬಳಿಗೆ ಬ್ರಿಟಿಷರ ಕಾಲದಲ್ಲಿ ಇದ್ದಂತೆ ರೆವಿನ್ಯೂ ಇನ್ಸ್‌ಪೆಕ್ಟರ್ ಅಥವಾ ಕಂದಾಯ ಅಧಿಕಾರಿ ಇದ್ದಾನೆ. ಗ್ರಾಮಕ್ಕೆ ಗೌಡ, ಕುಲಕರ್ಣಿಯ ಬದಲಾಗಿ ಗ್ರಾಮ ಲೆಕ್ಕಾಧಿಕಾರಿ ಇದ್ದಾನೆ. ತಳವಾರನ ಸ್ಥಾನ 'ಗ್ರಾಮಸಹಾಯಕ'ನಾಗಿ ಗ್ರಾಮಲೆಕ್ಕಾಧಿಕಾರಿಯ ಕೈಕೆಳಗೆ ಊರಿನ ಮಾಹಿತಿ ದಾರನಾಗಿ ಕಂಡುಬರುತ್ತಾನೆ. "ಬ್ರಿಟಿಷರ ಮತ್ತು ನಿಜಾಮರ ನೀತಿಯಿಂದಾಗಿ ಪ್ರಾಚೀನ ಕಾಲದಿಂದಲೂ ಅಧಿಕಾರದ ಗದ್ದುಗೆಯಲ್ಲಿ ವಿರಾಜಿಸಿದ ತಳವಾರರ ಸ್ಥಿತಿ ಚಿಂತಾಜನಕವಾಯಿತು.

ರಾಜಕೀಯವಾಗಿ, ಸಾಮಾಜಿಕವಾಗಿ ಇವರನ್ನು ಮೂಲೆ ಗುಂಪು ಮಾಡುವುದರ ಮೂಲಕ ಇವರ ಗೌರವಕ್ಕೆ ಧಕ್ಕೆ ತರಲಾಯಿತು. ರಾಜಕೀಯವಾಗಿ ಪ್ರಾಮುಖ್ಯತೆ ಹೊಂದಿದ್ದ 'ಪಾಳೆಯಗಾರ' ಪದಕ್ಕೆ ಅಪಾರ್ಥ ಬರುವಂತೆ ಮಾಡಿದರು. ಪಾಳೆಯಗಾರರಿಗೆ 'ತಳವಾರ' ಹುದ್ದೆಗಳನ್ನು ನೀಡುವ ಮೂಲಕ ಇನ್ನಷ್ಟು ಇಕ್ಕಟ್ಟಿನ ಸ್ಥಿತಿಗೆ ಇವರನ್ನು ತಳ್ಳಿದರು."[೪೦] ಇಲ್ಲಿಂದಲೇ ಹಿಂದೆ ಇಡೀ ಊರಿನ ರಕ್ಷಣೆಯ ಜವಾಬ್ದಾರಿ ಹಾಗೂ ಗೌರವಯುತ ಕಾಯಕವಾಗಿದ್ದ ತಳವಾರಿಕೆ ಹುದ್ದೆಯನ್ನು ಗೌಡ, ಕುಲಕರ್ಣಿ, ಶ್ಯಾನುಭೋಗ, ಗ್ರಾಮಲೆಕ್ಕಿಗರ ಕೈಕೆಳಗೆ ಅವರ ಸೇವೆ ಮಾಡುವ, ಅವರ ಕೈಚೀಲ ಹಿಡಿಯುವ ಹಾಗೆ ಮಾಡಲಾಗಿದೆ. ಇಂದಿನ ತಳವಾರ ಗ್ರಾಮ ಲೆಕ್ಕಾಧಿಕಾರಿಯ ಸಹಾಯಕನಾಗಿ ತಾತ್ಕಾಲಿಕ ಹುದ್ದೆಯ ಮೂಲಕವಾಗಿ ಮುಂದುವರೆದರೂ ತನ್ನ ಸಾಂಪ್ರದಾಯಿಕ ವೃತ್ತಿಯನ್ನು ಮಾತ್ರ ಬಿಟ್ಟಿಲ್ಲ. ಅದನ್ನು ವಂಶಪಾರಂಪರೆಯಂತೆಯೇ ಮುಂದುವರೆಸಿಕೊಂಡು ಬಂದಿದ್ದಾರೆ.

**ಕೊನೆ ಟಿಪ್ಪಣಿಗಳು**

೧. ನಾಗರಾಜ ಮಡಿವಾಳ, 'ಕರ್ನಾಟಕ ಮಡಿವಾಳರು', ಪು.೫

೨. ದೇಸಾಯಿ ಪಾಂಡುರಂಗರಾಯ, 'ತಳವಾರ', ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, ಸಂ.೪೨, ಡಿಸೆಂಬರ್ ೧೯೫೭, ಪು.೫೮

೩. ವಿರೂಪಾಕ್ಷಿ ಪೂಜಾರಹಳ್ಳಿ, 'ಕರ್ನಾಟಕದಲ್ಲಿ ತಳವಾರಿಕೆ', ಪು.೯

೪. ಶ್ರೀರಾಮ ಇಟ್ಟಣ್ಣವರ, ಜಾನಪದ ಪರಿಕ್ರಮ, ಪು.೫೪

೫. ವಿರೂಪಾಕ್ಷಿ ಪೂಜಾರಹಳ್ಳಿ, 'ಕರ್ನಾಟಕದಲ್ಲಿ ತಳವಾರಿಕೆ', ಪು.೯

೬. ವೀರನಾಯಕ ಹರತಿ, ಕ್ಷಾತ್ರಾಂಶ ಪ್ರಬೋಧ, ಪು.೨೦

೭ ಅಂಗಡಿ ಎಸ್.ಎಸ್. ಇವರಿಂದ ಮಾಹಿತಿ

೮. ವಿರೂಪಾಕ್ಷಿ ಪೂಜಾರಹಳ್ಳಿ, 'ಕರ್ನಾಟಕದಲ್ಲಿ ತಳವಾರಿಕೆ', ಪು.೧

೯. ದುರುಗಪ್ಪ ಎಂ.ಕೆ., 'ವಿಜಯನಗರೋತ್ತರಕಾಲೀನ ಬೇಡಜನಾಂಗ', ಪು.೧೪

೧೦. ದೇಸಾಯಿ ಪಾಂಡುರಂಗರಾಯ, 'ತಳವಾರ', ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, ಸಂ.೪೨, ಡಿಸೆಂಬರ್ ೧೯೫೭, ಪು.೫೮

೧೧. ಅದೇ,

೧೨. ಅದೇ,

೧೩. ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೬, 'ಕರ್ನಾಟಕದಲ್ಲಿ ತಳವಾರಿಕೆ', ಪು.೧೫

೧೪. ಕರ್ನಾಟಕ ಇತಿಹಾಸ ದರ್ಶನ, ಪು.೪೯೧

೧೫. ವೀಣಾ ಎಂ.ಪಿ., 'ಮನೆ, ಸಮಾಜ ಮತ್ತು ಸಂಸ್ಕೃತಿ, ಪು.೧೩

೧೬. ಎ.ಕ.IX ನೆಲಮಂ, ಪು.೩೪-೩

೧೭. MAR ೧೯೧೬, ಪು.೧೩-೬

೧೮. ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೬, 'ಕರ್ನಾಟಕದಲ್ಲಿ ತಳವಾರಿಕೆ' ಪು.೨೭

೧೯. ಅದೇ, ಪು.೬

೨೦. ಅದೇ, ಪು.೨೮

೨೧. ಅದೇ, ಪು.೨೯

೨೨. ನಿರುಪಮಾ, 'ಕೃಷ್ಣದೇವರಾಯನ ದಿನಚರಿ ಅಮುಕ್ತ ಮೌಲ್ಯದ'

೨೩. ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೬, 'ಕರ್ನಾಟಕದಲ್ಲಿ ತಳವಾರಿಕೆ', ಪು.೪೦

೨೪. ದುರುಗಪ್ಪ ಎಂ.ಕೆ., 'ವಿಜಯನಗರೋತ್ತರಕಾಲೀನ ಬೇಡ ಜನಾಂಗ', ಪು.೬೨

೨೫. ಅದೇ, ಪು.೧೧೨

೨೬. ವಿರೂಪಾಕ್ಷಿ ಪೂಜಾರಹಳ್ಳಿ, 'ಬಳ್ಳಾರಿ ಜಿಲ್ಲೆಯಲ್ಲಿ ಕಲೆಕ್ಟರ್‌ಗಳ ಆಳ್ವಿಕೆ', ಪು.೧೧-೧೨

೨೭. ವೀರನಾಯಕನ ಹರತಿ, 'ಕ್ಷಾತ್ರಾಂಶ ಪ್ರಬೋಧ'', ಪು.೧೪

೨೮. ಅದೇ, ಪು.೧೬

೨೯. ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೬, 'ಕರ್ನಾಟಕ ತಳವಾರಿಕೆ', ಪು.೫

೩೦. ಅದೇ, ಪು.೬

೩೧. ಭಾನುಮತಿ ವೈ.ಸಿ., ೧೯೯೮, 'ಮಲೆನಾಡಿನ ಶೈವ ಒಕ್ಕಲಿಗರ ಜಾನಪದೀಯ ಅಧ್ಯಯನ', ಪು.೨೮

೩೨. ಅದೇ, ಪು.೮

೩೩. ನಾಗರಾಜ ಮಡಿವಾಳ, ೨೦೧೦, 'ಕರ್ನಾಟಕ ಮಡಿವಾಳರು', ಪು.೧೩

೩೪. ದುರಗಪ್ಪ ಎಂ.ಕೆ., ವಿಜಯನಗರೋತ್ತರಕಾಲೀನ ಬೇಡ ಜನಾಂಗ, ಪು.೯

೩೫. ಮುಗುಳಿ ರಂ.ಶ್ರೀ., ೧೯೭೬, 'ಕರ್ನಾಟಕ ಸಾಂಸ್ಕೃತಿಕ ಪರಂಪರೆ', ಪು.೩೦

೩೬. ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೬. ಕರ್ನಾಟಕದಲ್ಲಿ ತಳವಾರಿಕೆ, ಪು.೩

೩೭. ಹಿರೇಮಠ ಬಿ.ಆರ್., ಶಾಸನಗಳಲ್ಲಿ ಕರ್ನಾಟಕ ವರ್ತಕರು, ಪು.೬

೩೮. ಅದೇ, ಪು.೮

೩೯. ವಿರೂಪಾಕ್ಷಿ ಪೂಜಾರಹಳ್ಳಿ, ವಸಹಾತುಕಾಲೀನ ಬಳ್ಳಾರಿ ಜಿಲ್ಲೆ, ಪು.೪೫

೪೦. ದುರುಗಪ್ಪ ಎಂ.ಕೆ., 'ವಿಜಯನಗರೋತ್ತರಕಾಲೀನ ಬೇಡ ಜನಾಂಗ, ಪು.೧೮೮

# ಅಧ್ಯಾಯ ಮೂರು

# ಕನ್ನಡ ಸಾಹಿತ್ಯ ಮತ್ತು ಶಾಸನಗಳಲ್ಲಿ ತಳವಾರರು

ಅಧ್ಯಾಯ ಮೂರು

# ಕನ್ನಡ ಸಾಹಿತ್ಯ ಮತ್ತು ಶಾಸನಗಳಲ್ಲಿ ತಳವಾರರು

## ೩.೧. ಪ್ರಾಚೀನ ಕನ್ನಡ ಸಾಹಿತ್ಯ

ಕನ್ನಡ ಸಾಹಿತ್ಯ ಹಾಗೂ ಸಮಾಜ ವಿಜ್ಞಾನ ಶಿಸ್ತುಗಳಲ್ಲಿ ತಳವಾರರ ಉಲ್ಲೇಖಗಳಿವೆ. ಪ್ರಮುಖವಾಗಿ ತಳವಾರರ ವೃತ್ತಿ ಜೀವನ, ಸಾಮಾಜಿಕ ಪರಿಸರ, ಆಡಳಿತ ವೈಖರಿ ಹಾಗೂ ವೇಷಭೂಷಣ, ನಡವಳಿಕೆ, ಶೌರ್ಯ, ಕರ್ತವ್ಯ, ರಾಜಕೀಯ ಸ್ಥಾನಮಾನಗಳ ಕುರಿತು ಹಲವಾರು ಸಾಹಿತ್ಯ ಕೃತಿಗಳಲ್ಲಿ ಉಲ್ಲೇಖಗಳು ದೊರೆಯುತ್ತವೆ. ಇಲ್ಲಿಯವರೆಗೂ ಈ ಕುರಿತು ಸಮಗ್ರ ಅಧ್ಯಯನ ನಡೆದಿಲ್ಲವೆಂದೇ ಹೇಳಬೇಕಾಗುತ್ತದೆ. ಈ ಮೂಲಕವಾಗಿ ಅವರ ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ ವಿದ್ಯಮಾನಗಳ ಅಧ್ಯಯನ ಇಲ್ಲಿದೆ.

ಪ್ರಾಚೀನ ಕನ್ನಡ ಸಾಹಿತ್ಯ ಮತ್ತು ಶಾಸನಗಳಲ್ಲಿ ಅಲ್ಲಲ್ಲಿ ಉಲ್ಲೇಖಗೊಳ್ಳುವ ತಳಾರ, ತಳರಿಕೆ, ತಳವಜೆ, ತಳಾರನಾಯಕ, ತಳವಱರ್, ತಳವಾರ, ತಳಾರಿ, ತಾಳಾವಾರ, ತುಳವಗೇರಿ, ತಲಾರಿಕೆ, ತಳವಾಱಿತಿ, ತಳವಾರಗಟ್ಟೆ, ತಳಾರಗೊಲ್, ತಳಾಱಗೆಯು, ತಳಾಜೆಕೆಯಾಯ ಮುಂತಾದ ಶಬ್ದಗಳು ತಳವಾರ ಮತ್ತು ಅವನ ವೃತ್ತಿಗೆ ಸಂಬಂಧಿಸಿದವುಗಳಾಗಿವೆ. ಪ್ರಸ್ತುತ ಹಳಗನ್ನಡ ಸಾಹಿತ್ಯದಲ್ಲಿ ಕಂಡುಬರುವ ಕೆಲವು ಪ್ರಮುಖ ಕೃತಿಗಳಲ್ಲಿ ಬಳಕೆಯಾದ ಉಲ್ಲೇಖದ ಹಿನ್ನಲೆಯಲ್ಲಿ ತಳವಾರರ ಪರಂಪರೆಯನ್ನು ಗುರುತಿಸಬಹುದು.

ಶಿವಕೋಟ್ಯಾಚಾರ್ಯನ 'ವಡ್ಡಾರಾಧನೆ'ಯು ಜೈನ ಧಾರ್ಮಿಕ(ನೋಂಪಿ) ಕಥೆಗಳ ಸಂಗ್ರಹವಾಗಿದೆ. ಇದು ಕ್ರಿ.ಶ.೯೨೦ರಲ್ಲಿ ರಚನೆಯಾಗಿರಬಹುದೆಂದು ಅಭಿಪ್ರಾಯಪಡಲಾಗಿದೆ. ಇದು ಪಂಪಪೂರ್ವ ಯುಗದಲ್ಲಿ ದೊರೆತಿರುವ ಕನ್ನಡದ ಮೊದಲ ಗದ್ಯಕೃತಿಯಾಗಿದೆ. ಇಲ್ಲಿ ಬರುವ ಕಥೆಗಳು ಜೈನ ತತ್ವಕ್ಕನುಗುಣವಾಗಿ ತಪಸ್ಸಾನ್ನಾಚರಿಸಿ ಸದ್ಗತಿಯನ್ನು ಪಡೆದು ಮಹತ್ಮರೆನಿಸಿ ಕೊಂಡದ್ದನ್ನು ಪೂರ್ವೋತ್ತರ ಭವಾವಳಿಯ ಮೂಲಕ ಕಥೆಯೊಳಗೆ ಕಥೆಗಳನ್ನು ಚಿತ್ರಿಸಿ ಓದುಗ ಮುಕ್ತಿಯ ಮಾರ್ಗವನ್ನು ಹಿಡಿಯುವಂತೆ ಪ್ರಚೋದಿಸುವ ವೈರಾಗ್ಯ ಬೋಧನೆಯ

ಉದ್ದೇಶವುಳ್ಳದ್ದಾಗಿದೆ. ಈ ಮೂಲಕವಾಗಿ ಜೈನ ಧರ್ಮದ ನೀತಿ ನಿರೂಪಕ ತತ್ವಗಳನ್ನು ಈ ಕಥೆಗಳ ಮೂಲಕ ವಿಶದಪಡಿಸಲಾಗಿದೆ.

ವಡ್ಡಾರಾಧನೆ ಕೃತಿಯಲ್ಲಿ 'ತಳಾರ' ಎಂಬ ಗ್ರಾಮರಕ್ಷಕನ ಪಾತ್ರದ ಉಲ್ಲೇಖ ಹಲವಾರು ಕಡೆ ಬಂದಿದೆ. ಸುಕುಮಾರಸ್ವಾಮಿ ಕಥೆಯಲ್ಲಿ ಸೋಮಶರ್ಮನು ತನ್ನ ಮಗಳಾದ ನಾಗಶ್ರೀ ಭಟ್ಟಾರದಿಂದ ಶ್ರಾವಕ ವ್ರತಗಳನ್ನು ಸ್ವೀಕರಿಸಿ ಮತ್ತೆ ಅವುಗಳನ್ನು ಪಾಲಿಸಲಾಗದೆ ಋಷಿಗಳಲ್ಲಿ ಬಿಟ್ಟು ಬರುವ ಸಂದರ್ಭ, ಆಗ ಸೋಮಶರ್ಮನು ತನ್ನ ಮಗಳಾದ ನಾಗಶ್ರೀಯ ಕೈಹಿಡಿದು ನಾಗಾಲಯದ ಕಡೆ ಹೊರಟಾಗ ದಾರಿಯಲ್ಲಿ ಒಬ್ಬನನ್ನು ಕೊಲ್ಲಲು ಎಳೆದೊಯ್ಯುತ್ತಿದ್ದರು. ಆಗ ನಾಗಶ್ರೀ ಏಕೆ ಅವನನ್ನು ಕೊಲ್ಲುತ್ತಿದ್ದಾರೆ? ಎಂದು ಅಪ್ಪನಲ್ಲಿ ಕೇಳಿದಾಗ.

"ಸೋಮಶರ್ಮನುಂ ಕೊಲಲುಯ್ವ ತಳಾಱನಂ ಬೆಸಗೊಂಡು ತದ್ವೃತ್ತಾಂತ ಮಲ್ಲಮನಱುದು ನಾಗಶ್ರೀಗಿಂತೆಂದು ಪೇೞ್ಗುಂ"[೧]

ಸೋಮಶರ್ಮನು ನಾಗಶ್ರೀಯ ಪ್ರಶ್ನೆಗೆ ಹೀಗೆ ಹೇಳುತ್ತಾನೆ. ಇರು ಮಗಳೇ ತಳವಾರನನ್ನು ವಿಚಾರಿಸಿ ಹೇಳುತ್ತೇನೆ ಎಂದು ಹೇಳಿ ತಳವಾರನಿಂದ ಕಾರಣ ತಿಳಿದು ಮಗಳಿಗೆ ತಿಳಿಸುತ್ತಾನೆ. ಇಲ್ಲಿ ಆ ಊರಲ್ಲಿ ಯಾವುದೇ ಘಟನೆ ನಡೆದರೂ ಅಲ್ಲಿ ತಳವಾರನಿರುತ್ತಿದ್ದ ಮತ್ತು ಅದರ ಸಂಪೂರ್ಣ ಮಾಹಿತಿಯನ್ನು ತಳವಾರನು ಸಂಗ್ರಹಿಸಿ ಅನಂತರ ಅರಸ ಅಥವಾ ಅಧಿಕಾರಿಗೆ ತಿಳಿಸುತ್ತಿದ್ದ. ಈ ಹಿನ್ನಲೆಯಲ್ಲಿ ತಳವಾರನು ಸಾರ್ವಕಾಲಿಕ ಅಧಿಕಾರಿಯಾಗಿದ್ದನೆಂಬುದು ತಿಳಿಯುತ್ತದೆ.

ವೈನಯಿಕನ ಉಪಕಥೆಯಲ್ಲಿ ಕೌಶಂಬಿ ಪಟ್ಟಣದ ಸುಮಿತ್ರ ಸೆಟ್ಟಿ ಎಂಬ ಶ್ರೀಮಂತನ ಮಗನಿಗೆ ಹಾವು ಕಚ್ಚಿ ಅದರಿಂದ ಸತ್ತಾಗ, ಗರುಡನಾಭಿ ಮಂತ್ರದಿಂದ ಬದುಕಿಸಲು ಮಂತ್ರ ವಾದಿಯನ್ನು ಕರೆತರಲು ತೆರಳುತ್ತಾನೆ. ಹೆಣದ ಕಾವಲಿಗೆ ನಾಲ್ಕು ಜನ ಭಟರನ್ನು ನೇಮಿಸಿರುತ್ತಾನೆ. ಗರುಡನಾಭಿಯಿಂದ ತನ್ನ ಮಗ ಬದುಕಿದಾಗ ಸಂತೋಷಗೊಂಡ ಸುಮಿತ್ರ ಶೆಟ್ಟಿ ಭಟರಿಗೆ ಸಾವಿರ ದಿನಾರದ ಪೊಟ್ಟಣವನ್ನು ಮೇಲಿಂದ ಎಸೆಯುತ್ತಾನೆ. ಜನಸಮೂಹದ ನಡುವೆ ಇದ್ದ ಈ ಭಟರು ಹಣವನ್ನು ತೆಗೆದುಕೊಂಡಿದ್ದರೂ ಇಲ್ಲವೆಂದು ಸುಳ್ಳು ಹೇಳುವ ಸಂದರ್ಭದಲ್ಲಿ, ಸುಮಿತ್ರ ಶೆಟ್ಟಿ ರಾಜನ ಬಳಿಗೆ ಬಂದು ದೇವಾ ನನ್ನ ಸಾವಿರ ದಿನಾರದ ಪೊಟ್ಟಣ ಕಳೆದು ಹೋಗಿದೆ ಅದನ್ನು ಹುಡುಕಿಸಿಕೊಡಿ ಎಂದು ದೂರು ನೀಡುತ್ತಾನೆ. ಅದನ್ನು ತಿಳಿಸುವ ಪದ್ಯದಲ್ಲಿ

"ಎನ್ನ ಸಾಸಿರ ದೀನಾರದ ಪೊಟ್ಟಳಂ ಕೆಟ್ಟುದದಂ ದೇವರಾರೈವುದೆಂದು ಪೇೞ್ದೊಡೆ ತಳಾಱನಂ ಕರೆದು ಬೇಗಂ ಕಳ್ಳನನಾರಯ್ಯಲ್ಲದಾಗಳ್ ಕಳ್ಳಂಗೆ ತಕ್ಕ ನಿಗ್ರಹಮಂ ನಿನಗೆ ಮಾೞ್ಪೆನೆಂದರಸನಾತನಂ"[೨]

ರಾಜನು ತಳವಾರನನ್ನು ಕರೆದು ಒಡನೆಯೇ ಕಳ್ಳನನ್ನು ಹುಡುಕತಕ್ಕದ್ದು ಇಲ್ಲವಾದರೆ ಆ ದಂಡನೆಯನ್ನು ನಿನಗೆ ವಿಧಿಸಬೇಕಾಗುತ್ತದೆ ಎಂದು ಆಜ್ಞೆ ಮಾಡುತ್ತಾನೆ. ಇಲ್ಲಿ ತಳವಾರನು ಕಳ್ಳನನ್ನು ಹಿಡಿಯುವ ಜವಾಬ್ದಾರಿಯನ್ನು ಹೊರುವುದರ ಜೊತೆಗೆ ಸಾರ್ವಜನಿಕರ ಸ್ವತ್ತಿಗೆ ಮತ್ತು ಅದರ ದಂಡಕ್ಕೆ ತಾನೇ ಹೊಣೆಗಾರನಾಗುವ ಸಂದರ್ಭವೂ ತಳವಾರನಿಗೆ ಇತ್ತು ಎಂಬುದನ್ನು ತಿಳಿಸುತ್ತದೆ.

ಸುಧಾಮೆಯ ಉಪಕಥೆಯಲ್ಲಿ ಸುದಾತ್ತನೆಂಬ ಸೆಟ್ಟಿ ಬಾಲ್ಯದಲ್ಲಿ ಸುಧಾಮೆಯನ್ನು ಮೊಸಳೆಯಿಂದ ಪಾರು ಮಾಡುತ್ತಾನೆ. ಇದಕ್ಕೆ ಪ್ರತಿಯಾಗಿ ನಿನಗೆ ಏನು ಬೇಕು? ಕೇಳು ಕೊಡುತ್ತೇನೆ ಎಂದು ಸುಧಾಮೆ ಹೇಳುತ್ತಾಳೆ. ಆಗ ಸೆಟ್ಟಿ ಇದಕ್ಕೆ ಪ್ರತಿಯಾಗಿ ನಿನ್ನ ಮದುವೆಯ ಮೊದಲದಿನದ ಅಲಂಕಾರವನ್ನು ಒಬ್ಬಳೇ ಬಂದು ನನಗೆ ತೋರಿಸಬೇಕು ಎಂದು ಕೇಳಿರುತ್ತಾನೆ. ಪ್ರಾಪ್ತಳಾದ ಸುಧಾಮೆ ಕೊಟ್ಟ ಮಾತಿನಂತೆ ತನ್ನ ಮದುವೆಯಾದ ದಿನ ಸರ್ವಲಂಕಾರ ಭೂಷಿತಳಾಗಿ ಸುದಾತ್ತನತ್ತ ಹೊರಡುತ್ತಾಳೆ. ಅಲ್ಲಿ ಕಳ್ಳ ಅವಳ ಆಭರಣಗಳನ್ನು ಕೊಡುವಂತೆ ಪೀಡಿಸುತ್ತಾನೆ. ಮುಂದೆ ತಳವಾರನು ಇವಳನ್ನು ಅಡ್ಡಗಟ್ಟಿ ಇಷ್ಟು ಹೊತ್ತಿನಲ್ಲಿ ಎಲ್ಲಿಗೆ ಹೋಗುತ್ತಿದ್ದಿಯೇ ಕೆಟ್ಟ ಹೆಂಗಸೇ ಎಂದು ಗದರಿಸುತ್ತಾನೆ. ಈ ಸಂದರ್ಭದಲ್ಲಿ ತಾನು ಹೊರಟ ಕಾರ್ಯವನ್ನು ಅವನಿಗೆ ತಿಳಿಸುವ ಸಂದರ್ಭದಲ್ಲಿ,

"ಸಂತೈಸಿ ಕಿಱುದಂತರಮಂ ಪೋದೊಡೆ ತಳಾಱಂ ಕಂಡೀ ಪೊಟ್ಟೆತ್ತ

ಪೋದಪ್ಪಯ್ ಪೊಲ್ಲ ಮಾನಸಿಯೇ ಎಂದಾತಂ ಪಿಡಿದು"[೩]

"ನಟ್ಟ ನಡುವಿರುಳ್ ಕಳ್ಳರುಂ ತಳಾಱರುಂ ಕಾಡುವರ್ ಬೇಗಂ ಪೋಗೆಂದು ನುಡಿದು"[೪]

ಸುದಾತ್ತ ಸುಧಾಮೆಯನ್ನು ಕುರಿತು ನೀನು ಇಷ್ಟು ಹೊತ್ತಿನಲ್ಲಿ ಏಕೆ ಬಂದೇ ಬೇಗ ಹೋಗು ರಾತ್ರಿಯಲ್ಲಿ ಕಳ್ಳರು ಮತ್ತು ತಳವಾರರು ಕಾಡುತ್ತಾರೆ ಎಂದು ಹೇಳುತ್ತಾನೆ. ಇಲ್ಲಿ ಕಳ್ಳರು ನಡು ರಾತ್ರಿಯಲ್ಲಿ ಕಳ್ಳತನಕ್ಕೆ ಯತ್ನಿಸಿದರೆ, ಅವರನ್ನು ಹಿಡಿಯಲು, ನಿಗ್ರಹಿಸಲು ರಾತ್ರಿಯಿಡಿ ಕಾವಲು ಕಾಯುವ ತಳವಾರರು ಕಳ್ಳರನ್ನು ಮಾತ್ರವಲ್ಲದೇ ಹಾದರ ಮಾಡುವವರನ್ನು ಹಿಡಿದು, ಅವರನ್ನು ಜರಿದು ಶಿಕ್ಷೆ ನೀಡುವ ಕಾರ್ಯ ಮಾಡುತ್ತಿದ್ದನೆಂಬುದು ಈ ಸಾಲುಗಳಿಂದ ತಿಳಿಯುತ್ತದೆ.

ತಳವಾರನು ದುಷ್ಟರನ್ನು ಶಿಕ್ಷಿಸುವ ಕಾರ್ಯದಲ್ಲಿದ್ದರೂ ಸಹ ಶಿಷ್ಟರನ್ನು ಗೌರವಿಸುವ, ಸದ್ಗುಣವುಳ್ಳ ಸ್ತ್ರೀಯರನ್ನು ಹೊಗಳುವ ಒಬ್ಬ ಸಾಧು ಪುರುಷನಾಗಿ ಕಂಡುಬರುತ್ತಾನೆ. ಇದನ್ನು ಸಾರುವ ಒಂದು ಪದ್ಯ ಹೀಗಿದೆ.

"ಬರ್ಪಳನ್ನೆಗಂ ತಳಾಜನ ಕಂಡಿನ್ನೆನಂ ನೀ ಮೆಚ್ಚುಗೆಯ್ಯಂದು ನುಡಿದೊಡಾತನಿಂತೆಂದಂ ನೀ ಪೊಲ್ಲ ಮಾನಸಿಯೇ ಎಂದು ಮನದೊಳೆ ಬಗೆದೆಂ ನಿನ್ನಂತೊಳ್ಳಿದರಾರು ಮಿಲ್ಲ ನುಡಿದ

ನನ್ನಿಯಂ ತಪ್ಪದೆ ಬಂದೆ ಸತ್ಯವಾದಿಯಯ್ ಪೋಗಬ್ಬಾ"[೫] ಎಂದು ನುಡಿಯುತ್ತಾನೆ. ಇಲ್ಲಿ ಕೊಟ್ಟ ಮಾತಿಗೆ ತಪ್ಪದವರನ್ನು, ಸದ್ಗುಣ ನಡತೆಯುಳ್ಳವರನ್ನು ತಿಳಿದು. ಗೌರವಿಸಿ ಕಳುಹಿಸುವ ಸಂದರ್ಭದಲ್ಲಿ ತಳವಾರನು ದುಷ್ಟರಿಗೆ ದುಷ್ಟ, ಶಿಷ್ಟರಿಗೆ ಶಿಷ್ಟ ಎಂಬ ಮಾತು ಅನ್ವಯಿಸುತ್ತದೆ. ಮತ್ತೊಂದು ಕಡೆ,

"ತಳಾಱಂಗೆ ಕಳ್ಳ ನೀತನಲ್ಲೆಂಬುದೊಂದು ನಂಬುಗೆಯಾಗಿ"[೬] ಎಂಬ ಮಾತು ತಳವಾರನು ಕಳ್ಳರನ್ನು ಬಲ್ಲ, ಸುಳ್ಳರನ್ನು ಬಲ್ಲವನಾಗಿ ಯಾರು ಕಳ್ಳರೆಂಬುದನ್ನು ಸುಲಭವಾಗಿ ಪತ್ತೆ ಮಾಡಬಲ್ಲವನಾಗಿದ್ದ. ಅದೇ ರೀತಿ ಕಳ್ಳರಲ್ಲದವರನ್ನು ರಕ್ಷಿಸುವ ಕಾರ್ಯವನ್ನು ಮಾಡುತ್ತಿದ್ದ ನೆಂಬುದನ್ನು ಇದು ಅರ್ಥೈಸುತ್ತದೆ.

ಗಂಭೀರೆಯ ಕಥೆಯಲ್ಲಿ ಬರುವ ಮೋದಾಳಿಯ ಉಪಕಥೆಯಲ್ಲಿ ನಾಗದತ್ತನು ಮೋದಾಳಿಯೊಂದಿಗೆ ರಹಸ್ಯವಾಗಿ ಪ್ರಣಯ ಬೆಳೆಸಿದ್ದ. ಒಂದು ದಿನ ಅವಳೊಂದಿಗೆ ಚಂಪಾ ನಗರಕ್ಕೆ ಬರುವಾಗ ತಳವಾರನ ಕೈಗೆ ಸಿಕ್ಕಿ ಬೀಳುವ ಸಂದರ್ಭ ಬರುತ್ತದೆ.

"ಚಂಪಾನಗರಕ್ಕೆ ವಂದೊಡೆ ತಳಾಱಂ ಕಂಡಾಯಿರ್ವರುಮಂ ಪಿಡಿದುಕೊಂಡು ಪೋಗಿ ಅರಸಂಗೆ ತೋಱಿದೊಡರಸನುವೀರ್ವರು ಮನೆರಡು ಕಾಯ್ವ ಕಾರ್ಬೊನ್ನ ಪ್ರತಿಮೆಗಳನಪ್ಪ ಮೊಱೆಮೆಂದು ತಳಾಱಂಗೆ ಬೆಸವೇೞ್ದೊಡವರಿರ್ವರುಮಂ"[೭]

ನಾಗದತ್ತ ಮತ್ತು ಮೋದಾಳೀಯನ್ನು ಹಿಡಿದ ತಳವಾರನು ಇಬ್ಬರನ್ನು ಅರಸನಿಗೆ ಒಪ್ಪಿಸುತ್ತಾನೆ. ಅಕ್ರಮ ಸಂಬಂಧ ಇಟ್ಟುಕೊಂಡಿದ್ದಕ್ಕಾಗಿ ಇವರಿಬ್ಬರನ್ನು ಕಾದ ಕಬ್ಬಿಣದ ಪ್ರತಿಮೆಗಳನ್ನು ತಬ್ಬಿಕೊಳ್ಳಲು ರಾಜ ಆಜ್ಞೆ ಮಾಡುತ್ತಾನೆ. ಇಲ್ಲಿ ತಳವಾರನೇ ಈ ಶಿಕ್ಷೆಯನ್ನು ನೀಡುವ ಮತ್ತು ಜಾರಿಗೆ ತರುವ ಕಾರ್ಯ ಮಾಡುತ್ತಾನೆ.

ತಳವಾರನು ಕೇವಲ ಊರಿನ ಗ್ರಾಮರಕ್ಷಕನಾಗಿರದೇ ಸೇನಾಪತಿಯೂ ಆಗಿದ್ದ ಎಂಬುದಕ್ಕೆ ಇದೇ ಕೃತಿಯಲ್ಲಿ ಒಂದು ಕಡೆ "ಮಹಾಸಾಮಂತ, ಶ್ರೇಷ್ಠಿ, ಸೇನಾಪತಿ, ತಳಾಱ ದಂಡನಾಯಕ, ಪ್ರಭೃತಿ ಚಂಪಾನಗರ ಸಬಾಳವೃದ್ಧ"[೮] ಎಂದು ಉಲ್ಲೇಖಗೊಂಡಿದೆ. ಹಾಗೆಯೇ ಸೋಮಶರ್ಮನು ತನ್ನ ಮಗಳಾದ ನಾಗಶ್ರೀಯನ್ನು ಭಟಾರರಿಂದ ಬಿಡಿಸುವಂತೆ ಮಹಾರಾಜನನ್ನು ಕೋರುತ್ತಾನೆ. ಆಗ ದೊರೆಯ ಜೊತೆಯಲ್ಲಿ ಸಾಮಂತ, ಮಹಾಸಾಮಂತ, ಶ್ರೇಷ್ಠಿ, ಸೇನಾಧಿಪತಿ, ತಳವಾರ ದಂಡನಾಯಕ ಮೊದಲಾದವರು ಚಂಪಾನಗರ ಅಬಾಲ ವೃದ್ಧರೆಲ್ಲರೂ ಸಂಬರನಾಗ ಎಂಬ ಸ್ಥಳಕ್ಕೆ ಹೋಗುತ್ತಾರೆ. ಊರಿನ ಯಾವುದೇ ಕೆಲಸ ಕಾರ್ಯಗಳು ನಡೆಯಬೇಕಾದರೆ ಅಲ್ಲಿ ತಳವಾರನ ಉಪಸ್ಥಿತಿ ಇರಲೇಬೇಕೆಂಬುದನ್ನು ಇಲ್ಲಿ ಮನಗಾಣಬಹುದು.

ವಿದ್ಯುಚ್ಚೋರನೆಂಬ ರಿಸಿಯ ಕಥೆಯಲ್ಲಿ ಜಂಭೂದ್ವೀಪದ ಮಿಥಿಳೆ ಪಟ್ಟಣದಲ್ಲಿ ವಾಮರಥ ಎಂಬ ಅರಸ ವೈಭೋಗದಿಂದ ಕಾಲ ಕಳೆಯುತ್ತಿದ್ದ. ಅದೇ ಪಟ್ಟಣದಲ್ಲಿ ಯಮದಂಡ ಎಂಬ

ತಳವಾರನಿರುತ್ತಾನೆ. ಹಾಗೆ ವಿದ್ಯುಚ್ಚೋರನೆಂಬ ಕಳ್ಳನೂ ಇರುತ್ತಾನೆ. ಈ ಮೂವರ ನಡುವೆ ನಡೆಯುವ ಈ ಕಥೆಯ ಉದ್ದಕ್ಕೂ ಕಳ್ಳ, ತಳವಾರನ ನಡುವೆ ನಡೆಯುವ ಸಂಭಾಷಣೆ, ಕಳ್ಳತನ ವಿದ್ಯೆಯ ಮೂಲಕ ಕಳ್ಳತನ ಮಾಡುವುದು, ತಳವಾರ ಸುರಖ ವಿದ್ಯೆಯ ಮೂಲಕ ಅವರನ್ನು ಕಂಡುಹಿಡಿಯುವುದು. ಮೊದಲಾದ ಸನ್ನಿವೇಶಗಳು ಈ ಕಥೆಯಲ್ಲಿ ಬರುತ್ತದೆ. ಉದಾಹರಣೆಗೆ

"ಮತ್ತಾ ಪೊಟಲೊಳ್ ಯಮದಂಡನೆಂಬೊಂ ತಳಾಱಂ ಮತ್ತಲ್ಲಿ ಇರ್ಪೂಂ ವಿದ್ಯೂಚ್ಚೋರ ನೆಂಬೊಂ ಕಳ್ಳನಾತಂ"[೯]

"ಆಸ್ಥಾನ ಮಂಟಪದೊಳ್ ಸಿಂಹಾಸನಮಸ್ತಕ ಸ್ಥಿತನಾಗಿರ್ದು ತಳಾಱನಪ್ಪ ಯಮದಂಡಂಗೆ ಬಱಿಯಟ್ಟಿವರಸಿ ಇಂತೆಂದ ನೆಲವೊ ಯಮದಂಡಾ ಪೋಟಲ ಪಾರ್ವರ, ಪರದರ ಸೂಳೆಯರ ಒಕ್ಕಲ ಮಕ್ಕಳ ಕಸವರಮೆಲ್ಲಮಂ ಕಳ್ಳೊಡಮಾರಯ್ಯದೆ ಕೆಮ್ಮಗಿರ್ಪೆಯಲ್ಲದೆ"[೧೦]

ಊರೊಳಗೆ ನಡೆಯುವ ಕಳ್ಳತನದ ಕುರಿತು ರಾಜನು ತಳವಾರನನ್ನು ಕುರಿತು ಎಲವೊ ಯಮದಂಡ ಈ ಊರಲ್ಲಿ ಬ್ರಾಹ್ಮಣರ, ಪರಸ್ಥಳದವರ, ಸೂಳೆಯರ, ರೈತರ, ಬಂಗಾರಗಳೆಲ್ಲಾ ಕಳ್ಳತನವಾಗುತ್ತಿದ್ದರೂ ಏಕೆ ಸುಮ್ಮನೆ ಕುಳಿತ್ತಿದ್ದಿಯಾ ಬೇಗನೇ ಪತ್ತೆ ಹಚ್ಚು ಅವರು ಯಾರು ಎಂದು ಕಂಡುಹಿಡಿಯಬೇಕು ಅಪ್ಪಣೆ ಹೊರಡಿಸುತ್ತಾನೆ. ಆಯಾ ಊರಿನ ರಕ್ಷಣೆಯ ಜೊತೆಗೆ ಕಳ್ಳರನ್ನು ಒಡನೆಯೇ ಪತ್ತೆಹಚ್ಚುವುದು ತಳವಾರನ ಪ್ರಮುಖ ಕರ್ತವ್ಯವಾಗಿತ್ತು.

"ಬೇಗಂ ಕಳ್ಳನನಾರಯ್ದು ಹಾರಮಂ ಕೊಂಡು ಬಾ ಅಲ್ಲದಾಗಳ್ ಕಳ್ಳಂಗೆ ತಕ್ಕ ನಿಗ್ರಹಮಂ ನಿನಗೆ ಮಾಡಿದೆಪ್ಪನೆಂದೊಡ ತಳಾಱನೆಂದಂ, ದೇವಾ ಏೞು ದಿವಸಮೆನಗೆಡೆಯ ನೀವು ದೊಂದೊಡರಸನಂತೆ ಗಯ್ಯಂದೊಡರ ಮನೆಯಿಂದಂ"[೧೧]

ಬೇಗನೇ ಕಳ್ಳನನ್ನು ಪತ್ತೆಹಚ್ಚು ಇಲ್ಲವಾದಲ್ಲಿ ಕಳ್ಳನಿಗೆ ಕೊಡಬೇಕಾದ ಶಿಕ್ಷೆ ನಿನಗೆ ಕೊಡುತ್ತೇನೆ ಎಂದ ರಾಜನಿಗೆ ಪ್ರತಿಯಾಗಿ ತನಗೆ ಏಳು ದಿವಸ ಸಮಯ ನೀಡುವಂತೆ ಕೇಳಿ, ಅಷ್ಟರೊಳಗೆ ಹಿಡಿಯದಿದ್ದರೆ ತಮ್ಮ ಇಷ್ಟದಂತೆ ಮಾಡಬಹುದು ಎಂದು ತಳವಾರ ಹೇಳುತ್ತಾನೆ. ಇಲ್ಲಿ ತಳವಾರನಾದವನಿಗೆ ಕಳ್ಳನನ್ನು ಪತ್ತೆ ಹಚ್ಚಲೇ ಬೇಕಾದ ಅನಿವಾರ್ಯತೆ ಇತ್ತು. ಒಂದು ವೇಳೆ ವಿಫಲನಾದಲ್ಲಿ ಆ ಶಿಕ್ಷೆಗೆ ತಾನೇ ಗುರಿಯಾಗುವ ಸಂದಿಗ್ಧತೆಯೂ ಇತ್ತೆಂಬುದು ಇದರಿಂದ ತಿಳಿಯುತ್ತದೆ.

"ದೇವಾ ನಾಂ ಕಳ್ಳನಲ್ಲದುದರ್ಕೆ ಪೊಟಲೆಲ್ಲಮಱಿಗಂ ಕಳ್ಳನುನಾರಯ್ಯಲಾಱದೆನ್ನಂ ತನ್ನ ಸಾವಿಗಂಜಿ ಬಡವನು ದೇಸಿಗನಂ ಪೊಟಲೊಳ್ ಬೈಕಂದಿರಿ ದಂಡು ಬಾವ್ವಿನಂ ಪಿಡಿದು

ಕೊಂಡು ಬಂದು ಕೂಲಿಸಿದಪ್ಪನೆಂದೊಡೆ ತಳಾಱಂ ಕಳ್ಳರನಾರಯ್ವ ಶಾಸ್ತ್ರಂಗಳೊಳಾದ ಮಾನುಂ ಕುಶಲನಪ್ಪುದಱಿಂದಂರಸಂಗಿಂತೆಂದ"[೧೨]

ತಳವಾರನು ಕಳ್ಳನನ್ನು ಹಿಡಿದು ತಂದಾಗ ಕಳ್ಳನು ದೇವಾ ನಾನು ಕಳ್ಳನಲ್ಲ ಎಂಬುದು ಈ ಊರಿಗೆಲ್ಲ ಗೊತ್ತು. ಕಳ್ಳನನ್ನು ಹುಡುಕಲಾರದೆ ತನ್ನ ಸಾವಿಗೆ ಹೆದರಿ ಬಡವನೂ, ದಿಕ್ಕಿಲ್ಲದವನೂ, ಭಿಕ್ಷೆ ಬೇಡಿ ತಿಂದು ಬದುಕುವ ತನ್ನನ್ನು ಹಿಡಿದುಕೊಂಡು ಬಂದಿದ್ದಾನೆ ಎಂದು ತಳವಾರನ ಮೇಲೆ ಪ್ರತ್ಯಾರೋಪ ಮಾಡುತ್ತಾನೆ. ಆದರೆ ಕಳ್ಳರನ್ನು ಪತ್ತೆ ಹಚ್ಚುವ ಶಾಸ್ತ್ರದಲ್ಲಿ ಬುದ್ಧಿವಂತನಾದ ತಳವಾರನು ಅರಸನಿಗೆ ಆತನ ವೃತ್ತಾಂತವೆಲ್ಲವನ್ನು ತಿಳಿಸುತ್ತಾನೆ.

"ಪ್ರತಿಘುಟಿಕಾಂಜನಂಗಳಂ ತೊನ್ನನ ಕಣ್ಣಿನೊಳಿಚ್ಚಿದೊಡೆ ದಿವ್ಯಮಪ್ಪ ತನ್ನ ಮುನ್ನಿನ ರೂಪಾಗಿ(ರ್ದಿ)ಂತೆಂದನೀತಂ ಘುಟಿಕಾಂಜನ ಕುಹಕಂ ಇಂದ್ರ ಜಾಲಂಗಳಂ ಬಲ್ಲೊನಪ್ಪುದಱಿಂದೆಲ್ಲಾ ರೂಪುಗಳಂ ಮಾಡಲ್ ಬಲ್ಲೊನೆಂದೊಡೆ"[೧೩] 

ಕಳ್ಳರನ್ನು ಪತ್ತೆಹಚ್ಚುವಶಾಸ್ತ್ರ ಸುರಖ ವಿದ್ಯೆಯಲ್ಲಿ ಪರಿಣಿತಿಯನ್ನು ಪಡೆದ ತಳವಾರನು ಘುಟಿಕಾಂಜನವನ್ನು ಕಳ್ಳನ ಕಣ್ಣಿಗೆ ಹಚ್ಚಿದಾಗ ಅವನ ದಿವ್ಯ ರೂಪ ಬರುತ್ತದೆ. ಆಗ ಕಳ್ಳನು ತಳವಾರನನ್ನು ಕುರಿತು ಇವನು ಘುಟಿಕಾಂಜನ ಕುಹಕಿ, ಇಂದ್ರಜಾಲವನ್ನು ಬಲ್ಲವನು ಆದ್ದರಿಂದ ಇವನಿಗೆ ಎಲ್ಲಾ ರೂಪುಗಳನ್ನು ಮಾಡಲು ಬರುತ್ತದೆ ಎಂದು ಹೇಳುತ್ತಾನೆ. ಇಲ್ಲಿ ತಳವಾರನು ಸುರಖ ವಿದ್ಯೆಯ ಜೊತೆ ಜೊತೆಗೆ ಘುಟಿಕಾಂಜನ ಮತ್ತು ಇಂದ್ರಜಾಲ ವಿದ್ಯೆಯನ್ನು ತನ್ನ ವೃತ್ತಿ ಜೀವನದಲ್ಲಿ ಕರಗತ ಮಾಡಿಕೊಂಡಿದ್ದನೆಂಬುದು ತಿಳಿದುಬರುತ್ತದೆ.

ಕಳ್ಳರನ್ನು ಶಿಕ್ಷಿಸಲು ತಳವಾರನು ಮೂವತ್ತೆರಡು ಬಗೆಯ ಶಿಕ್ಷೆಗಳನ್ನು ವಿಧಿಸುತ್ತಿದ್ದನು. ಅವುಗಳ ಬಗೆಗೆ ಉಲ್ಲೇಖವಿಲ್ಲ. ಆದರೆ ಅವುಗಳಿಂದ ಕಳ್ಳರನ್ನು ಗುರಿತಿಸುವ ಮತ್ತು ಕಳ್ಳತನ ಸಾಬೀತುಪಡಿಸುವ ಕಲೆ ತಳವಾರನಿಗೆ ಗೊತ್ತಿತ್ತು. ಈ ಮೂಲಕ ಯಾರು ಕಳ್ಳರು? ಯಾರು ಕಳ್ಳರಲ್ಲವೆಂಬುದನ್ನು ತಿಳಿಯುತ್ತಿದ್ದ. ಇದರ ಒಂದು ಉಲ್ಲೇಖ ದೊರೆಯುತ್ತದೆ.

"ಮಾಘ ಮಾಸದಿರುಳ್ ಕಡುಸೀತದೊಳ್ ಘೋರಮಪ್ಪ ಮೂವತ್ತೆರಡು ದಂಡಣೆಗಳಿಂ ನೀಡುಂ ದಂಡಿಸೆಯನಿತುಮಂ ಬಾಟಿವಾಟಿ ಅವಯವದೆ ಸೈರಿಸಿಯುಂ ಕಳ್ಳನಲ್ಲೆನಯ್ಯ ಬಲ್ಲಾಳ್ತನಂದಿ ದೆನ್ನಂ ತಳಾಱಂ ಕೊಂದಪ್ಪ ನೆಂದೊಳಱೆ ಪ್ರಯ್ಯಲಿಡೆ ತಳಾಱಂಗೆ ಕಳ್ಳನೀತ ನಲ್ಲೆಂಬುದೊಂದು ನಂಬುಗೆಯಾಗೆ ನೇಸಱ್ ಮೂಡೆಯರ ಮನೆಗೆ ಪೋಗಿ"[೧೪]

ನಿಜವಾದ ಕಳ್ಳನನ್ನು ಸಾಬೀತು ಪಡಿಸಲು ತಳವಾರನು ಮಾಘ ಮಾಸದ ರಾತ್ರಿ ಭಯಂಕರ ಚಳೀಯಲ್ಲಿ ಘೋರವಾದ ಮೂವತ್ತೆರಡು ಶಿಕ್ಷೆಗಳನ್ನು ಕೊಟ್ಟ ಬಹುಕಾಲ ದಂಡಿಸಿದರೂ, ಅವೆಲ್ಲವನ್ನು ವಿದ್ಯುಚ್ಚೋರನೆಂಬ ಕಳ್ಳ ಸಹಿಸಿಕೊಂಡಿದ್ದನ್ನು ಕಂಡ ತಳವಾರನು ಇವನು

ಕಳ್ಳನಲ್ಲ ಎಂಬ ನಿರ್ಧಾರಕ್ಕೆ ಬರುತ್ತಾನೆ. ಇಲ್ಲಿ ಅಂದಿನ ಕಾಲದಲ್ಲಿ ತಪ್ಪಿತಸ್ಥರಿಗೆ ವಿಧಿಸುತ್ತಿದ್ದ ಶಿಕ್ಷೆಗಳಲ್ಲಿ ಹಲವಾರು ಪ್ರಕಾರಗಳಿದ್ದವು. ಆಯಾ ಅಪರಾಧಕ್ಕೆ ತಕ್ಕಂತೆ ಅಪರಾಧಿಗಳನ್ನು ಪತ್ತೆ ಹಚ್ಚುವುದಕೋಸ್ಕರ ವಿಧಿಸುತ್ತಿದ್ದ ಘೋರ ಶಿಕ್ಷೆಗಳು ಹೇಗಿದ್ದವೆಂದು ತಿಳಿಯಬಹುದು. ಈ ಮೂಲಕವಾಗಿ ಇಂದಿನ ಪೊಲೀಸ್ ಇಲಾಖೆ ಈ ಶಿಕ್ಷೆಗಳನ್ನೇ ಅನುಕರಣೆ ಮಾಡಿಕೊಂಡಿರಬಹುದು. ಅಪರಾಧಿಗಳ ಬಾಯಿ ಬಿಡಿಸುವ ಏರೋಪ್ಲೇನ್, ಲಾಕಪ್, ಥರ್ಡ್‌ಡಿಗ್ರಿ, ಶಾಕ್ ಟ್ರಿಟ್‌ಮೆಂಟ್ ಎಂತೆಲ್ಲಾ ಬಳಕೆ ಮಾಡುತ್ತಾರೆ. ಇವೆಲ್ಲಕ್ಕೂ ಪ್ರಾಚೀನ ಕಾಲದ ಈ ಶಿಕ್ಷೆ ಪ್ರಕಾರಗಳೇ ಪ್ರೇರಣೆಯಾಗಿರಬೇಕು.

ತಳವಾರನ ಹೆಸರಿನ ಕುರಿತಾದ ಒಂದು ಪದ್ಯ ಹೀಗಿದೆ.

"ಪೊಟಿಲೊಳ್ ಯಮಪಾಶನೆಂಬೊಂ ತಳಾಱನಾತನ ಪೆಂಡತಿ ನಿಜಗುಣ ದೇವತೆಯೆಂಬೊಳಾ ಇರ್ವರ್ಗ್ಗಂ ಮಗನೀತಂ ಯಮದಂಡ ನೆಂಬೊಂ"[೧೫]

ತಳವಾರ ಎಂಬುವವನು ನಿಕೃಷ್ಟ ವ್ಯಕ್ತಿ, ನಿರ್ದಯಿ ಎಂಬುದನ್ನು ಯಮಪಾಶ ಎಂಬ ಅರ್ಥದಲ್ಲೇ ತಿಳಿಯುತ್ತದೆ. ಯಮದಂಡನೆಂದರೆ ಯಮನಂತೆ ಶಿಷ್ಟರನ್ನು ರಕ್ಷಿಸುವ, ದುಷ್ಟರನ್ನು ಶಿಕ್ಷಿಸುವ ದಂಡಾಧಿಕಾರಿಯಾಗಿರುವುದು ಅವರ ಹೆಸರಲ್ಲೆ ಗುರುತಿಸಬಹುದು. ಹೆಂಡತಿ ನಿಜಗುಣ ದೇವತೆ, ಸದ್ಗುಣವಂತೆ ಕರುಣಾಮಯಿಯಂತೆ ಬಿಂಬಿಸಲಾಗಿದೆ. ವಡ್ಡಾರಾಧನೆ ಕಥೆಗಳಲ್ಲಿ ಒಳ್ಳೆಯದು ಕೆಟ್ಟದ್ದು, ದುಷ್ಟ-ಶಿಷ್ಟ, ಸದ್ಗುಣೆ-ದುರ್ಗುಣೆ, ದಯಾಮಯಿ-ನಿರ್ದಯಿ ಗುಣಗಳುಳ್ಳ ವ್ಯಕ್ತಿಗಳನ್ನು ಪಾತ್ರಗಳಲ್ಲಿ ಚಿತ್ರಿಸಿದ್ದಾನೆ.

ಕಳ್ಳತನ ಮತ್ತು ಕಳ್ಳರನ್ನು ಹಿಡಿಯುವ ವಿದ್ಯೆಗಳಿದ್ದವೆಂದು ಒಂದು ಪದ್ಯದಲ್ಲಿ,

"ತಳಾಱನ ಮಗನಪ್ಪುದಱುಂ ತನಗೆ ತಕ್ಕ ಕಳ್ಳರನಾರಯ್ವ ತೆಱನಂ ಪೇೞ್ವ ಸುರಖಮೆಂಬೋದಂ ಕಲ್ತೊನಾನುಂ ಕಳ್ವ ಪಾಯಮಂ ಪೇೞ್ವ ಕರಪಟ ಶಾಸ್ತ್ರಮಂ ಕಲ್ತೆ"[೧೬]

ಇಲ್ಲಿ ಕಳ್ಳರನ್ನು ಕಂಡು ಹಿಡಿಯುವ ಮತ್ತು ಪತ್ತೆ ಹಚ್ಚುವ 'ಸುರಖ' ಎಂಬ ವಿದ್ಯೆಯನ್ನು ತಳವಾರನು ಕಲಿತಿದ್ದರೆ, ಕಳ್ಳನಾದವನು ಕಳ್ಳತನ ಮಾಡುವ ಮತ್ತು ಅದರಿಂದ ತಪ್ಪಿಸಿಕೊಳ್ಳುವ ಉಪಾಯವನ್ನು ತಿಳಿಸುವ 'ಕರಪಟ' ಎಂಬ ಶಾಸ್ತ್ರವನ್ನು ಕಲಿಯುತ್ತಿದ್ದರು ಎಂದು ತಿಳಿಯುತ್ತದೆ. ಈ ಕರಪಟ ಎಂಬ ಕಳ್ಳತನ ಮಾಡುವ ಶಾಸ್ತ್ರದಿಂದ ಒಂಬತ್ತು ಬಗೆಯ ಕಳ್ಳತನ ಮಾಡುವ ವಿದ್ಯೆಗಳಿದ್ದವೆಂದು ತಿಳಿಸುವ ಪದ್ಯ.

"ವಿದ್ಯುಚ್ಚೋರ ನೆಂಬೊಂ ಕಳ್ಳನಾತಂ ಜೃಂಭಿನಿ, ಸ್ತಂಭಿನಿ, ಮೋಹಿನಿ, ಸರ್ಷಕ್ಷ ತಾಳೋದ್ಘಾಟನಿ ವಿದ್ಯಾಮಂತ್ರ ಚೂರ್ಣ, ಯೋಗ ಘುಟಿಕಾಂಜನಮೆಂದಿವು ಮೊದಲಾಗೊಡೆಯ ತಸ್ಕರ ಶಾಸ್ತ್ರಂಗಳೊಳಾದಮಾನುಂ ಕುಶಲನಂತಪ್ಪ"[೧೭]

ವಿದ್ಯುಚ್ಚೋರನೆಂಬ ಕಳ್ಳನು ಜೃಂಭಿನಿ, ಸ್ತಂಭಿನಿ, ಮೋಹಿನಿ, ಸರ್ಷಪ, ತಾಳೋದ್ಘಾಟಿನಿ, ವಿದ್ಯಾ-ಮಂತ್ರ, ಚೂರ್ಣ, ಯೋಗ, ಘುಟಿಕಾಂಜನ ಮೊದಲಾದ ಕಳ್ಳರ ಶಾಸ್ತ್ರಗಳಲ್ಲಿ ಅತ್ಯಂತ ಕುಶಲಿಯಾಗಿದ್ದನು. ಈ ಎಲ್ಲಾ ಕಳ್ಳತನದ ಶಾಸ್ತ್ರವನ್ನು ಅರಿತ ಕಳ್ಳನು ಎಷ್ಟೇ ಕುಶಲಮತಿಯಾಗಿ ಕಳ್ಳತನ ಮಾಡಿದರೂ ಅದನ್ನು ಪತ್ತೆ ಹಚ್ಚುವ 'ಸುರಖ' ವಿದ್ಯೆ ಎಂಬ ಒಂದೇ ವಿದ್ವತ್‌ನಿಂದ ಕಳ್ಳರನ್ನು ಕಂಡುಹಿಡಿಯುವ ಕೆಲಸ ತಳವಾರ ಮಾಡುತ್ತಿದ್ದ. ಇವರ ಜೊತೆ ಜೊತೆಗೆ ಘುಟಿಕಾಂಜನ ಎಂಬ ಕಣ್ಣಿಗೆ ಅಂಜನ ಹಚ್ಚಿಕೊಂಡು ತನ್ನನ್ನು ಯಾರು ಕಾಣದಂತೆ ಮಾಡಿಕೊಳ್ಳುವ ಇಂದ್ರಜಾಲ ವಿದ್ಯೆಯನ್ನು ಕಲಿತಿದ್ದನೆಂಬುದು ಮತ್ತೊಂದು ಪದ್ಯದ ಸಾಲುಗಳಿಂದ ತಿಳಿಯುತ್ತದೆ. ತಳವಾರನಾದವನು ತನ್ನ ಕರ್ತವ್ಯವನ್ನು ಯಶಸ್ವಿಯಾಗಿ ನಿರ್ವಹಿಸಬೇಕಾದರೆ ದೈಹಿಕ ಬಲಾಢ್ಯತೆ ಜೊತೆ ಜೊತೆಗೆ ಇಂತಹ ಬೌದ್ಧಿಕ ಚತುರ ವಿದ್ಯೆಗಳನ್ನು ಕಲಿತು ಸಕಲ ಕಲಾ ವಲ್ಲಭನಾಗಿರುತ್ತಿದ್ದ ನೆಂಬುದು ಈ ಪಠ್ಯಗಳಿಂದ ತಿಳಿದುಬರುತ್ತದೆ.

ವಡ್ಡಾರಾಧನೆಯು ಸಂಸ್ಕೃತ ಭೂಯಿಷ್ಟ ಗದ್ಯ ಶೈಲಿಯನ್ನೊಳಗೊಂಡಿದೆ. ಜೈನ ಧರ್ಮ ಪ್ರಚಾರವನ್ನು ವಿವಿಧ ಕಥೆಗಳ ಮೂಲಕ ಸರಳ ಭಾಷೆಯಲ್ಲಿ ರಚನೆಗೊಂಡಿದೆ. ಇಲ್ಲಿನ ಪ್ರತಿಯೊಂದು ಕಥೆಯಲ್ಲಿಯೂ ಒಂದು ಕ್ರಮವನ್ನು ಅನುಸರಿಸಲಾಗಿದೆ. ಒಂದು ದೇಶ, ಅದರೊಳಗೊಂದು ಪಟ್ಟಣ, ಅದಕ್ಕೊಬ್ಬ ಅರಸ, ಅವನಿಗೊಬ್ಬಳು ರಾಣಿ, ಅವರಿಬ್ಬರಿಗು ಒಬ್ಬ ಮಂತ್ರಿ, ಪಟ್ಟಣದ ರಕ್ಷಣೆಗೆ ತಳವಾರ, ಅವನಿಗೊಬ್ಬ ಹೆಂಡತಿ, ಈ ರೀತಿಯಾಗಿ ಒಂದೊಂದು ಪಾತ್ರದ ಮೂಲಕ ಒಳ್ಳೆಯದು, ಕೆಟ್ಟದ್ದು ಎಂದು ಒಂದು ಲಯಗಾರಿಕೆಯಿಂದಲೇ ತಿಳಿಸುತ್ತಾ ಹೋಗುತ್ತದೆ. ಗ್ರಾಮ, ನಗರ, ಖೇಡ, ಖರ್ವಡ, ಮಡಂಬ, ಪತ್ತನ, ದ್ರೋಣಾಮುಖ ಎಂಬ ವಿವಿಧ ಪ್ರಾಂತಗಳಲ್ಲಿನ ಮತ್ತು ಒಂದು ಪರಿಸರದ ಸಾಮಾಜಿಕ, ಧಾರ್ಮಿಕ, ಆಡಳಿತದ ವೈಶಿಷ್ಟ್ಯತೆಗಳನ್ನು ಹಲವಾರು ಕಥೆಗಳ ಮೂಲಕವಾಗಿ ವಿಶದಪಡಿಸಿದ್ದಾನೆ. ಈ ಮೂಲಕವಾಗಿ ಅಂದಿನ ಆಡಳಿತದಲ್ಲಿ ತಳವಾರನು ಮುಖ್ಯನಾಗಿದ್ದನೆಂಬುದು ಈ ಕೃತಿಯ ಮೂಲಕ ಸ್ಪಷ್ಟವಾಗಿ ತಿಳಿಯುತ್ತದೆ.

ಕನ್ನಡ ಸಾಹಿತ್ಯ ಬೆಳಗಿಸಿದ ಕವಿಶ್ರೇಷ್ಠರಲ್ಲಿ ಒಬ್ಬನಾದ ರತ್ನತ್ರಯರಲ್ಲಿ ಒಬ್ಬನಾದ ರನ್ನನಿಂದ ರಚಿತಗೊಂಡ ಅಜಿತ ತೀರ್ಥಂಕರ ಪುರಾಣ ತಿಲಕವು ಕ್ರಿ.ಶ.೯೯೩ರಲ್ಲಿ ರಚನೆಗೊಂಡಿದೆ. ಅತ್ತಿಮಬ್ಬೆ ಈತನಿಂದ ಈ ಕೃತಿಯನ್ನು ಬರೆಸಿದ್ದಾಳೆ. ಈ ಕೃತಿಯಲ್ಲಿ ಒಂದು ಕಡೆ ತಳವಾರನ ಕುರಿತು ಉಲ್ಲೇಖ ಬರುತ್ತದೆ.

"ಸೇನಾಪತಿ ತಳವರ ದಂಡನಾಯಕ ಪ್ರಭೃತಿಗಳುಂ"[೧೮]

೧೦ನೇ ಶತಮಾನದ ಕಾಲದಲ್ಲಿ ರಾಜ್ಯ, ನಗರ, ಪಟ್ಟಣಗಳಲ್ಲಿ ತಳವಾರಿಕೆ ರೂಢಿಯಲ್ಲಿತ್ತು. ಅದೇ ರೀತಿಯಾಗಿ, ರನ್ನನೂ ಸಹ ತನ್ನ ಕಾಲಮಾನದಲ್ಲಿದ್ದ ತಳವಾರನ ಕುರಿತಾಗಿ ಒಂದು ಸಂದರ್ಭಕ್ಕೆ ಸೇನಾಪತಿಯೊಂದಿಗೆ ತಳವಾರ ದಂಡನಾಯಕ ಪ್ರಭೃತಿಗಳು ಧಾವಿಸಿದರು ಎಂದು

ಉಲ್ಲೇಖಿಸುತ್ತಾನೆ. ತಳವಾರನೂ ನಾಡ ರಕ್ಷಣೆಯ ಜೊತೆಗೆ ದಂಡನಾಯಕನಾಗಿಯೂ ತನ್ನ ಕಾರ್ಯ ನಿರ್ವಹಿಸಿದ್ದನೆಂಬುದು ಇದರಿಂದ ತಿಳಿಯುತ್ತದೆ.

ಕನ್ನಡದಲ್ಲಿ ಪಂಚತಂತ್ರವನ್ನು ರಚಿಸಿದ ದುರ್ಗಸಿಂಹ ಕಿಸುನಾಡಿನ ಸಯ್ಯಡಿಯಲ್ಲಿ ಜಗದೇಕಮಲ್ಲನ ದಂಡನಾಯಕನಾಗಿದ್ದವನು. ಈತನು ಕ್ರಿ.ಶ.೧೦೩೧ರಲ್ಲಿ ಜೀವಿಸಿದ್ದ ಕವಿ. ಈತನ ಪಂಚತಂತ್ರವು ಒಂದು ಚಂಪೂ ಕೃತಿ. ಗುಣಾಢ್ಯನ ಬೃಹತ್ಕಥೆಯನ್ನು ಆಧರಿಸಿ ವಸುಭಾಗಭಟ್ಟನು ಪಂಚತಂತ್ರವನ್ನು ಬರೆದನು. ಈ ಕೃತಿಯನ್ನು ಆಧರಿಸಿ ಕನ್ನಡದಲ್ಲಿ ದುರ್ಗಸಿಂಹನು ಈ ಕೃತಿಯನ್ನು ಬರೆದಿದ್ದಾನೆ. ಒಂದು ಕಥನ ಕಾವ್ಯದ ಮೂಲಕ ಒಂದೊಂದು ತಂತ್ರದೊಳಗೆ ಒಂದೊಂದು ಕಥೆ ಹೆಣೆದು ನೀತಿ ನಿರೂಪಣೆಯನ್ನು ಮಾಡಿದ್ದಾನೆ. ನೀತಿ, ಅನೀತಿಗಳನ್ನು ಸಾರುವ ಇಲ್ಲಿನ ಕಥೆಗಳಲ್ಲಿ ಅಲ್ಲಲ್ಲಿ ತಳವಾರನು ಕಂಡುಬರುತ್ತಾನೆ.

"ಹಾಹಾಕ್ರಂದನರವದಿಂ ಪುಯ್ಯಲಿಡುವ ಕರುಣಾರವಮಂ ತಳವಾಱಂ ಕೇಳ್ದು"[೧೯]

ತಳವಾರರ ಭೀತಿಯಿಂದ ಕಳ್ಳರು ಹಾಹಾಕಾರದಿಂದ ಓಡಾಡುತ್ತಾ ತಳವಾರನಿಗೆ ಕರುಣೆ ತೋರಿಸು ಎಂದು ಬೇಡುವ ಸನ್ನಿವೇಶವನ್ನು ಕಥೆಯಲ್ಲಿ ಬಳಸಿದ್ದಾನೆ. ತಳವಾರನೆಂದರೆ ಅಪರಾಧಿಗಳಿಗೆ ಭಯದ ಜೊತೆಗೆ ಭೀತಿಯೂ ಇದ್ದಿತ್ತು ಎಂಬುದು ತಿಳಿಯುತ್ತದೆ.

ನಾಗಚಂದ್ರನ ಸಮಕಾಲೀನನಾದ ನಯಸೇನ ಕ್ರಿ.ಶ.೧೧೧೨ರಲ್ಲಿ ಜೀವಿಸದ್ದ ಕವಿ. ಈತನ ಧರ್ಮಾಮೃತದಲ್ಲಿ ಜೈನ ಮತಾಚಾರದ ಸದ್ಗತಿಗಳನ್ನು ಬಿಂಬಿಸುವ ಕಥೆಗಳನ್ನೊಳಗೊಂಡ ಈ ಕೃತಿಯಲ್ಲಿ ದೇಸಿ ಶೈಲಿಯಲ್ಲಿ ಪರಂಪರೆಯಿಂದ ಬರುವ ಕಥೆಗಳನ್ನು ಹಿಂಜಿ, ವಿಡಂಬನೆ ಹಾಗೂ ಬುದ್ಧಿಪೂರ್ವಕ, ವಿವೇಚನಾರಹಿತವಲ್ಲದ ಗಾಂಭೀರ್ಯ ಈ ಕಥೆಗಳಲ್ಲಿ ವ್ಯಕ್ತವಾಗಿದೆ. ಇಂತಹ ಒಂದು ಧರ್ಮ ನಿರೂಪಣಾ ಕೃತಿಯಲ್ಲಿ ತಳವಾರನ ಪಾತ್ರ ಬರುತ್ತದೆ.

"ತಳಾಱನಂತೆ ನಿದ್ರೆಗೆಟ್ಟು"[೨೦]

ಜೈನ ಮತಾಚಾರದ ಕುರಿತಾಗಿ ಹೇಳುವ ಸಂದರ್ಭದಲ್ಲಿ ವ್ರತ ಕೈಗೊಂಡ ಭಟಾರರು ಹಗಲಿರುಳೆನ್ನದೆ ಪಹರೆ ಕಾಯುವ ತಳವಾರನಂತೆ ವಿಶ್ರಾಂತಿಯಿಲ್ಲದೆ ನಿದ್ರೆಗೆಟ್ಟು ವ್ರತವನ್ನು ಆಚರಿಸಿದರು ಎಂದು ಹೇಳುತ್ತಿರುವ ಈ ಸಾಲುಗಳಲ್ಲಿ ವ್ಯಕ್ತವಾಗುವ ತಳವಾರನು ಊರ ರಕ್ಷಣೆಯಲ್ಲಿ ಸದಾ ಜಾಗೃತನಾಗಿರುತ್ತಿದ್ದ. ಕಳ್ಳತನ, ಹಾದರತನ ಮೊದಲಾದ ಅನೈತಿಕ ಚಟುವಟಿಕೆಗಳು ನಡೆಯದಂತೆ ಈತನು ಸದಾ ಎಚ್ಚರಿಕೆಯಿಂದ ನೋಡಿಕೊಳ್ಳಬೇಕಾಗಿತ್ತು ಎಂಬುದನ್ನು ತಿಳಿಸುತ್ತದೆ.

ನೇಮಿಚಂದ್ರನು ೧೨ನೇ ಶತಮಾನದಲ್ಲಿ ಲೀಲಾವತಿ ಪ್ರಬಂಧಂ ಎಂಬ ಚಂಪೂ ಕಾವ್ಯವನ್ನು ಬರೆದಿದ್ದಾನೆ. ೧೪ ಅಶ್ವಾಸಗಳ ಪ್ರೌಢ ಕಾವ್ಯದಲ್ಲಿ ಕಥೆ ಕಿರಿದಾಗಿದ್ದು, ವರ್ಣನೆಯ ಮೂಲಕ ಕನಸಿನ ಕಲ್ಪನೆಯಲ್ಲಿ ನಲ್ಲ–ನಲ್ಲೆಯರು, ಕೂಡಿ ಅಗಲಿ ಮತ್ತೆ ಒಂದಾಗುವ ಸನ್ನಿವೇಶವೇ 'ಲೀಲಾವತಿ ಪ್ರಬಂಧ' ಈ ಕಾವ್ಯದಲ್ಲಿ ಅಲ್ಲಲ್ಲಿ ತಳವಾರನ ಪಾತ್ರ ಬರುತ್ತದೆ.

"ಮಿಸುಪ ಪೂಸದಳಿರ್ಗಳೊಳಂ ತಳಿರ್ವರಲು..........

..............ಗೊಂಚಲ್ಗಳೂಳಂ(ಪಾತಂ–ತ್ತುವಂ) (ತಳರ್+ಇಕೆ)"[೨೧]

ನೇಮಿನಾಥ ಪುರಾಣದಲ್ಲಿ ತಳವಾರನ ಪ್ರಸಂಗವಿದೆ. ಅಯೋಧ್ಯಾ ನಗರದ ರಾಜ ಅನಂತವೀರ್ಯ, ರಾಜಶ್ರೇಷ್ಠಿ ಸುರೇಂದ್ರದತ್ತ ದಾನ–ಧರ್ಮಗಳಲ್ಲಿರುತ್ತಾರೆ. ರುದ್ರದತ್ತನೆಂಬ ಬ್ರಾಹ್ಮಣನ ಬಳಿ ಸಾಕಷ್ಟು ದ್ರವ್ಯವನ್ನಿಟ್ಟು ೧೨ ವರ್ಷ ವ್ಯಾಪಾರಕ್ಕೆಂದು ಹೊರಡುತ್ತಾನೆ. ಪರಸ್ತ್ರೀ, ಪರಧನ, ವ್ಯಸನಿಗನಾದ ಬ್ರಾಹ್ಮಣನು ದ್ರವ್ಯವನ್ನು ಪೋಲುಮಾಡಿ ಕಳ್ಳತನ ಮಾಡುವಾಗ ತಳವಾರನ ಕೈಗೆ ಸಿಕ್ಕಿಕೊಂಡ. ನಂತರ ಅನೇಕ ಘಟನೆಗಳಲ್ಲಿ ಭಾಗವಹಿಸಿ ಅವನು ಮರಣ ಹೊಂದಿದ ಎಂದು ಬೇಟೆ ಮತ್ತು ಬೇಡರ ಕೃತಿಯಲ್ಲಿ ವ್ಯಕ್ತವಾಗಿದೆ.

ಜೈನ ಕವಿಯಾದ ೨ನೇ ಗುಣವರ್ಮನು ಕ್ರಿ.ಶ.ಸುಮಾರು ೧೨೧೫ರಲ್ಲಿ ರಚಿಸಿದನೆನ್ನಲಾದ 'ಪುಷ್ಪದಂತ ಪುರಾಣ'ದಲ್ಲಿಯೂ ಸಹ ತಳವಾರಿಕೆಗೆ ಸಂಬಂಧಿಸಿದ ಉಲ್ಲೇಖ ಬಂದಿದೆ.

"ಅಲ್ಲಲ್ಲಿ ಜಾವ ಮುಕ್ಕಡೆ(ಗ)ರವಟಿಗ ತಳವ(ಜೆ)ಕೆಯ

(ಮ)ಕ್ಕೆಕ್ಕೆ ಯೊಳಂ ಠಾಣಾಂತರಮುಂ ನಿರವಿಸೆಯುಂ"[೨೨]

ಗ್ರಾಮದ ರಕ್ಷಣೆಗಾಗಿ ಬೀದಿ ಬೀದಿಗಳಲ್ಲಿ ತಳವಾರಿಕೆಯ ಚಾವಡಿಗಳಿದ್ದವು. ಅಲ್ಲಿ ತಳವಾರರು ಹಗಲು–ರಾತ್ರಿ ಊರ ರಕ್ಷಣೆ ಮಾಡುತ್ತಿದ್ದರು.

ಕವಿ ಜನ್ನನು ಕ್ರಿ.ಶ.೧೩ನೇ ಶತಮಾನದಲ್ಲಿ ರಚಿಸಿದ 'ಅನಂತನಾಥ ಪುರಾಣ'ವು ಹದಿನಾಲ್ಕನೆ ಜಿನನಾದ ಅನಂತನಾಥನ ಕಥೆಯನ್ನೊಳಗೊಂಡ ಚಂಪೂ ಕೃತಿ. ಇದರಲ್ಲಿ ಶೃಂಗಾರದ ಅತಿರೇಕದೊಂದಿಗೆ ಧಾರ್ಮಿಕ ಕಥೆಗಳನ್ನು ಹೇಳಿದ್ದಾನೆ. ಇದರಲ್ಲಿ ಬರುವ ಚಂಡಶಾಸನ ಕಥೆಯಲ್ಲಿ ವಸುಷೇಣ ಮತ್ತು ಅವನ ಪತ್ನಿ ಸುನಂದೆ ವೈಹಾಳಿಯಲ್ಲಿರುವಾಗ ಕಾಮದೇವನ ಕರವಾಳನಂತಿದ್ದ ಸುನಂದೆಯನ್ನು ವಸುಷೇಣನ ಸ್ನೇಹಿತನಾದ ಚಂಡಶಾಸನ ನೋಡಿ, ವ್ಯಾಮೋಹದಿಂದ ಹುಚ್ಚನಾಗಿ ಅವಳನ್ನು ಒಲಿಸಿಕೊಳ್ಳಲು ಪ್ರಯತ್ನಿಸುತ್ತಾನೆ. ಆ ಒಂದು ಸಂದರ್ಭದಲ್ಲಿ

"....ದೀವಳಿಗೆ ನಾಟ್ಕೆ ಬಸಂತನ ಕಾಪು ಕಾಮದೇ
ವನ ರತಿಯಾಜ್ಞೆ ಚಂದ್ರನ ತಳಾರಿಕೆ ತೆಂಬೆಲರೊಂದು
ಬೆಂಬಲಂ"[೨೩]

ಚಂದ್ರನ ಬೆಳಕು ರತಿಸುಖಕ್ಕೆ ಇಷ್ಟವಾದಂತೆ ಬಹುಶಃ ಕಳ್ಳರನ್ನು ಹಿಡಿಯಲು ಚಂದ್ರನು ಬೆಳದಿಂಗಳಲ್ಲಿ ತಳವಾರನಾಗುತ್ತಾನೆಂಬ ಹೋಲಿಕೆ ಮಾಡಲಾಗಿದೆ. ಸೂರ್ಯನು ದಿನ ಬೆಳಗಿದರೆ ರಾತ್ರಿ ಚಂದ್ರ ಬೆಳಗಿರುತ್ತಾನೆ. ಅದೇ ರೀತಿ ತಳವಾರನು ಚಂದ್ರನಂತೆ ರಾತ್ರಿಯಿಡಿ ಕಳ್ಳಕಾಕರಿಂದ

ಊರು ಬೆಳಗಿರುತ್ತಾನೆ. ಒಂದು ವೃತ್ತಿ ಸೇವಕನನ್ನು ನಿಸರ್ಗದತ್ತವಾದ ಚಂದ್ರನಿಗೆ ಹೋಲಿಸಿದ್ದು ಇದೇ ಮೊದಲು ಎಂದೆನಿಸುತ್ತದೆ.

ಜನ್ನನ ಮತ್ತೊಂದು ಕೃತಿ ಯಶೋಧರ ಚರಿತೆಯಲ್ಲಿ ಅಭಯಮತಿ, ಅಭಯರುಚಿಯರು ಮಾರಿದತ್ತನ ಹಿಂಸೆಯಿಂದ ಬೇಸತ್ತು, ತಾವು ಅನುಭವಿಸಿ ಬಂದ ಭವಾವಳಿಗಳನ್ನು ಹೇಳುತ್ತಾರೆ. ಜೈನ ಮತಾಚಾರದ ಹಿನ್ನಲೆಯಿರುವ ಈ ಕೃತಿಯಲ್ಲಿ ಮುಖ್ಯವಾಗಿ ದಾಂಪತ್ಯ, ವಿಷ ಪ್ರೇಮ ಮತ್ತು ಮನುಷ್ಯನ ಹಲವಾರು ಬಿಕ್ಕಟ್ಟುಗಳನ್ನು ವ್ಯಕ್ತಪಡಿಸಲಾಗಿದೆ. ಇದರಲ್ಲಿ ಬರುವ ಪ್ರತಿಯೊಂದು ಕಥೆಯಲ್ಲಿಯೂ 'ಚಂಡಕರ್ಮ'ನೆಂಬ ತಳವಾರನ ಉಲ್ಲೇಖಗಳಿವೆ. ಈತನ ಮೂಲಕವೇ ಸಮಾಜದಲ್ಲಿನ ಹಲವಾರು ಸಮಸ್ಯೆ ಹಾಗೂ ಬಿಕ್ಕಟ್ಟುಗಳ ಪರಿಹಾರಕ್ಕೆ ಸೇತುವೆಯಾಗುತ್ತಾನೆ. ಉದಾ: ಅಯೋಧ್ಯ ದೇಶದ ಮಾರಿದತ್ತನೆಂಬ ರಾಜ ಚಂಡಮಾರಿಯ ತೃಪ್ತಿಗಾಗಿ ಅಭಯರುಚಿ ಮತ್ತು ಅಭಯಮತಿ ಎಂಬ ಅಣ್ಣ–ತಂಗಿಯ ಬಲಿಗಾಗಿ ತಳಾರನಾದ ಚಂಡಕರ್ಮನಿಗೆ ಆದೇಶಿಸುತ್ತಾನೆ.

"ನಿಂದು ನರಪತಿ
ತಳಾರಂಗೆ;
ಎಂದಂ ನೀನ್ ಬರಿಸು;
ಮನುಜ ಯುಗಮಂ;
ಮುನ್ನಂ ಕೊಂದು;
ಅರ್ಜಿಸುವೆಂ;
ಪೂಜೆಯೊಳ್;
ಎಂದಿನ ಪರಿತಪ್ಪೆ;
ದೇವಿ ತಪ್ಪದೆ ಮಾಣಳ್"[೨೪]

ತಳವಾರನನ್ನು ಕರೆದ ರಾಜ ಈ ಇಬ್ಬರನ್ನು ನೀನು ಬರಮಾಡು ಎಲ್ಲರಿಗಿಂತ ಮೊದಲು ಅವರನ್ನು ಕೊಂದು ದೇವಿಯನ್ನು ಪೂಜಿಸುವೆನು. ಇದು ಹಿಂದಿನಿಂದಲೂ ಬಂದ ಸಂಪ್ರದಾಯ. ಇಲ್ಲವೆಂದರೆ ದೇವಿ ನಮಗೆ ಶಾಪವನ್ನು, ತೊಂದರೆಯನ್ನು ತರುತ್ತಾಳೆ ಎಂದು ತಳವಾರನಿಗೆ ಹೇಳಿದ. ಇಲ್ಲಿ ಅರಸನ ಪ್ರತಿಯೊಂದು ಕಾರ್ಯದಲ್ಲೂ ತಳವಾರ ಸಕ್ರಿಯವಾಗಿ ಪಾಲ್ಗೊಳ್ಳುತ್ತಿದ್ದ. ಹಾಗೇನೆ ರಾಜನ ಗುಪ್ತ ಆಚಾರ–ವಿಚಾರಗಳೆಲ್ಲವನ್ನು ಬಲ್ಲವನಾಗಿದ್ದ ಎಂಬುದು ತಿಳಿಯುತ್ತದೆ.

೧೪ನೇ ಅಧ್ಯಾಯದ ೧೮ನೇ ಪದ್ಯದಲ್ಲಿ ಆಕಂಪನ ಗುರುಗಳು ಚಂಡಕರ್ಮನಿಗೆ ಅಹಿಂಸಾ ತತ್ವದ ಬೋಧನೆ ಮಾಡಿದಾಗ ಅವರಿಗೆ ಪ್ರತಿಯಾಗಿ ತಳವಾರನು ಈ ರೀತಿಯಾಗಿ ಹೇಳುತ್ತಾನೆ.

"...ತಳಾರನಾಯಕನ್;

ಎಂದಂ ನೀಮ್ ಎಂದ;

ಮಾತು ಪೊಲ್ಲರು ನೋಡಲ್ಕೆ;

ಮಾತು ಪಲರಂ ವಿಚಾರಿಸಿ;

ಕೊಂದೆಂ ತನುವಲ್ಲದೆ;

ಆತ್ಮನಂ ಕಂಡು ಅರಿಯೆ?"[೨೫]

ನಿವಾಡಿದ ಮಾತು ಸರಿಯಾದುದಲ್ಲ ಗುರುಗಳೇ ಏಕೆಂದರೆ ಆತ್ಮದ ವಿಷಯದಲ್ಲಿ ಪರೀಕ್ಷಿಸಲು ನಾನು ಹಲವರನ್ನು ವಿಚಾರಿಸಿದ್ದೇನೆ. ಹಲವರನ್ನು ಕೊಂದಿದ್ದೇನೆ. ಆದರೇನು ನಾನು ಮಾಡಿದ ಪ್ರಯೋಗದ ಫಲವಾಗಿ ಅವರ ದೇಹವನ್ನಲ್ಲದೆ ಆತ್ಮವನ್ನು ಮಾತ್ರ ಕಂಡಿಲ್ಲ ಎಂದು ಹೇಳುತ್ತಾನೆ. ಜೈನ ಧರ್ಮದ ಅಹಿಂಸಾ ತತ್ವದ ಪ್ರಭಾವವನ್ನು ತಳವಾರನ ಮೂಲಕ ಪ್ರಸ್ತುತ ಪಡಿಸುವ ಈ ಸಾಲುಗಳಲ್ಲಿ ಪಾಪಪ್ರಜ್ಞೆ ಹಾಗೂ ಪ್ರಾಯಶ್ಚಿತ ಮನೋಭಾವ ಆತ್ಮದ ವಿಷಯದಲ್ಲಿ ತಳವಾರನಿಗೂ ಆಗಿರಬೇಕು ಎಂದೆನಿಸುತ್ತದೆ.

ಮಾರಿದೇವತೆಗೆ ಬಲಿಕೊಡುವ ಸಲುವಾಗಿ ಎಳೆಯ ವಯಸ್ಸಿನ ಶುಭ ಲಕ್ಷಣವುಳ್ಳ, ಬುದ್ಧಿವಂತರಾದ, ಒಳ್ಳೆಯ ವಂಶದಲ್ಲಿ ಹುಟ್ಟಿದ ಮಾನವ ಜೋಡಿಯನ್ನು ಹುಡುಕುತ್ತಾ ಹೊರಟ ಚಂಡಕರ್ಮನೆಂಬ ತಳವಾರನ ಕುರಿತು ಹೇಳುವ ಪದ್ಯದಲ್ಲಿ

"ಕಿರುವರೆಯದ;

ಶುಭ ಲಕ್ಷಣದ;

ಅರಿಕೆಯ ಸತ್ಕುಲದ;

ಮರ್ತ್ಯಯುಗಲಕ;

ತಾ ಅರಸಲ;

ಬಳರಿಯ ಬನದಿಂ;

ಪೊರ ಮಟ್ಟಂ;

ಚಂಡಕರ್ಮನೆಂಬ ತಳಾರಂ"[೨೬]

ಇಲ್ಲಿ ವ್ಯಕ್ತವಾಗುವ ಮಾತುಗಳಲ್ಲಿ ಒಳ್ಳೆಯ ವಂಶಕ್ಕೆ ಮತ್ತು ಬುದ್ಧಿವಂತ ಲಕ್ಷಣವುಳ್ಳ ಜೋಡಿಯನ್ನು ಹುಡುಕುವುದು ಸುಲಭವಾದುದಲ್ಲ. ಆದರೆ ಅದು ತಳವಾರನಿಗೆ ಸಾಧ್ಯ ಎಂಬುದು ಈ ಮೂಲಕ ಸಾಬೀತಾಗಿದೆ. ಇವರನ್ನು ಹುಡುಕುವ ಮತ್ತು ಅವರನ್ನು ಹಿಡಿದು ತಂದ ಬಗೆಯನ್ನು ತಿಳಿಸುವ ಮತ್ತೊಂದು ಪದ್ಯ ಇಂತಿದೆ.

"ತರುಣ ವನ ಹರಿಣಯುಗಮಂ

ತರುಕ್ಷು ಪಿಡಿವಂತೆ

ಚಂಡಕರ್ಮಂ ಪಿಡಿದಂ"[೨೭]

ಎಳೆಯ ಜಿಂಕೆ ಮರಿಗಳನ್ನು ಹುಲಿ ಹಿಡಿಯುವಂತೆ ತಳವಾರ ಚಂಡಕರ್ಮನು ಇಬ್ಬರನ್ನು ಹಿಡಿದನು ಎಂದು ಅರ್ಥೈಸುವ ಈ ಸಾಲಿನಲ್ಲಿ ಬಲಶಾಲಿಯಾದ ಚಂಡಕರ್ಮ ಎದುರಾಳಿ ಎಷ್ಟೇ ಬಲಿಷ್ಠವಾಗಿದ್ದೂ ಅವರನ್ನು ಎದುರಿಸುವ ಹುಲಿಯಾದರೆ, ಹಸುಳೆಗಳಾದ ಈ ಇಬ್ಬರು ಎಳೆಯ ಮರಿಗಳಂತಿದ್ದರು ಎಂದು ಹೋಲಿಸಿದ್ದಾನೆ.

ಉಭಯ ಭಾಷಾ ಕವಿ ಚಕ್ರವರ್ತಿ ಎನಿಸಿಕೊಂಡಿದ್ದ ಬಾಹುಬಲಿ ಪಂಡಿತನು 'ಧರ್ಮನಾಥ ಪುರಾಣ'ವನ್ನು ಬರೆದಿದ್ದಾನೆ. ಈತನ ಈ ಕೃತಿಯಲ್ಲಿ ೧೫ನೇ ತೀರ್ಥಂಕರನಾದ ಧರ್ಮನಾಥನ ಚರಿತ್ರೆಯನ್ನು ಹೇಳುವ ಇದರಲ್ಲಿ ತಳವಾರನ ಉಲ್ಲೇಖ ಬರುತ್ತದೆ.

"ದುಃಖಂಗಳನನುಭವಿಸುತ್ತಿರ್ಪರ್ ತಳವಱರ ವಶಕ್ಕೆ ಸಂದ ಕಳ್ಳರ ತೆಱದಿಂ"[೨೮]

ತಳವಾರನ ಕೈಗೆ ಸಿಕ್ಕುವ ಕಳ್ಳರು ಅವನಿಂದ ಅನುಭವಿಸುವ ಹಿಂಸೆ, ದುಃಖಗಳನ್ನು ತೋರ್ಪಡಿಸುತ್ತದೆ. ಒಮ್ಮೆ ಕಳ್ಳತನ ಮಾಡಿ ಸಿಕ್ಕ ಕಳ್ಳನು ಈತನ ಶಿಕ್ಷೆಗೆ ಹೆದರಿ ಮತ್ತೊಮ್ಮೆ ಕಳ್ಳತನ ಮಾಡದಂತೆ ಪರಿವರ್ತಿಸುವ ಕೆಲಸವನ್ನು ತಳವಾರನು ಮಾಡುತ್ತಿದ್ದನೆಂಬುದು ತಿಳಿದು ಬರುತ್ತದೆ.

ಪದ್ಮಣಾಂಕನ "ಪದ್ಮರಾಜ ಪುರಾಣ"ದಲ್ಲಿಯೂ ಸಹ ತಳವಾರನ ಆದಾಯ ಮತ್ತು ವೆಚ್ಚಗಳ ಕುರಿತಾಗಿ ಬರುತ್ತದೆ.

"ಪೊಱವೆಚ್ಚ ಮೊಳವೆಚ್ಚಮಂತೆ ಸುಂಕಂ ತಳಾಱಿಕೆ

ಚರಾದಾಯ ಮಂಬಿಂತೆಲ್ಲವೆಂ ಪರಿಕಿಸಿ"[೨೯]

ಪುರದ ವೆಚ್ಚಗಳು, ಭೂ ತೆರಿಗೆಗಳಂತೆ ತಳವಾರಿಕೆಯ ಆದಾಯವೂ ಇತ್ತು. ಇದನ್ನು ಹಾಗಾಗ ಪರೀಕ್ಷಿಸಲಾಗುತ್ತಿತ್ತು. ತಳಾರಿಕೆಯಿಂದ ಬರುವ ಆದಾಯವನ್ನು ಲೆಕ್ಕ ಸಮೇತವಾಗಿ ಒಡೆಯನಿಗೆ ಒಪ್ಪಿಸುವ ಕಾರ್ಯವನ್ನು ತಳವಾರನು ಮಾಡುತ್ತಿದ್ದನೆಂಬುದು ತಿಳಿಸುತ್ತದೆ.

ಕುಮಾರವ್ಯಾಸ ವಿರಚಿತ 'ಕರ್ಣಾಟ ಭಾರತ ಕಥಾಮಂಜರಿ'ಯಲ್ಲಿಯೂ ಸಹ ತಳವಾರನ ಕುರಿತಾದ ಪ್ರಸ್ತಾಪಗಳು ಬರುತ್ತವೆ. ಅವುಗಳಲ್ಲಿ ಭೀಷ್ಮಪರ್ವದ ಮೊದಲನೇ ಸಂಧಿಯ ಒಂದು ಪದ್ಯದಲ್ಲಿ ದುರ್ಯೋಧನ ಕರ್ಣನಿಗೆ ಹೇಳುವ ಮಾತು.

"......ನಿನ್ನನು ಬಿಡಿಸಿದವನರ್ಜುನನೂ ರವಿಸುತನೊ

ಸಾಹಸಿಗಳಿಲ್ಲಿಲ್ಲ ಹರಿ ತುರು

ಗಾಹಿ ಪಾಂಡವರೈವರಡವಿಯ

ಮೇಹುಗಾರರು ಬಂದ ಭೂಭುಜರೆಲ್ಲ ತಾನೆರವಿ

ಆಹವಕೆ ನಿನ್ನೂರ ತಳವರ

ಗಾಹಿನವರನು ಕಳುಹುವುದು ಸಂ
ದೇಹವೇ ನೀನಿಲ್ಲಿ ಸುಖದಲಿ ರಾಜ್ಯ ಮಾಡೆಂದ"[೩೦]

ಭೀಷ್ಮಾಚಾರ್ಯರು ಕೌರವರ ಸೇನಾಪತಿಯಾಗುವ ಸಂದರ್ಭದಲ್ಲಿ ದುರ್ಯೋಧನ ಕರ್ಣನನ್ನು ಕುರಿತು ನಿನ್ನನ್ನು ಬಿಡಿಸಿದ್ದು ಅರ್ಜುನನೋ ಅಥವಾ ರವಿಸುತನೋ ಅವರು ಸಾಹಸಿಗಳಲ್ಲ. ಪಾಂಡವರ ಬೇಹುಗಾರರು ಬಂದರೆ ಅವರಿಗೆ ನಿಮ್ಮೂರಿನ ತಳವಾರಿಕೆ ನೀಡಿದಂತೆ ಅವರನ್ನು ಕಳುಹಿಸುವುದು ಸಂದೇಹವೇ. ನೀನು ಈ ರಾಜ್ಯದಲ್ಲಿ ಸುಖವಾಗಿ ಬಾಳು ಎಂದು ಉಪದೇಶಿಸುತ್ತಾನೆ. ವಿರೋಧಿ ಬಣದ ಬೇಹುಗಾರರು ತಮ್ಮಲ್ಲಿಗೆ ಬಂದಾಗ ಅವರಿಗೆ ಊರಿನ ಎಲ್ಲಾ ಗುಪ್ತ ಮಾಹಿತಿಗಳನ್ನು ಬಲ್ಲ ತಳವಾರನ ವೃತ್ತಿ ನೀಡಿ ನಮ್ಮ ವಿನಾಶವನ್ನು ನಾವೇ ತಂದು ಕೊಂಡಂತಾಗುವುದು ಎಂಬರ್ಥದಲ್ಲಿ ಬಳಕೆಯಾಗಿದೆ.

"ಕೇವಲ ಊರ ರಕ್ಷಣೆಯಷ್ಟೇ ಅಲ್ಲ ಮುಂಚಿನ ಕಾಲದಲ್ಲಿ ತಳವಾರರು ಕಾಳಗದಲ್ಲಿಯೂ ಭಾಗವಹಿಸುತ್ತಿದ್ದರೆಂಬುದಕ್ಕೆ ಆಧಾರಗಳಿವೆ. ಯುದ್ಧಕ್ಕಾಗಿ ರಾಜರು ಬೇರೆ ಬೇರೆ ಊರುಗಳಿಂದ ತಳವಾರರನ್ನು ಕರೆಸುತ್ತಿದ್ದರೆಂಬ ವಿಷಯ ಕುಮಾರವ್ಯಾಸ ಭಾರತದಿಂದ ತಿಳಿದು ಬರುತ್ತದೆ."[೩೧] ಗದಾಪರ್ವದ ೯ನೇ ಸಂಧಿಯಲ್ಲಿ ಬರುವ ಮತ್ತೊಂದು ಪದ್ಯದಲ್ಲಿ

"ಮುರಿದು ಕೋಟೆಯನೊಂದು ಕಡೆಯಲಿ
ತೆರಹು ಮಾಡಿ ಮಹಾರಥರು ಜನ
ವರಿಯದ ವೊಲೊಳ ಹೊಕ್ಕು ಹೆಬ್ಬಾಗಿಲಲಿ ರಥವಿಳಿದು
ತರವಳರ ತೊಳಲಿಕೆಯ ಮೇಲೆ
ಚ್ಚರಿಕೆ ಮಸುಳಿಸೆ ಮಧ್ಯರಾತ್ರಿಯೊ
ಳಿರಿತ ದಂಘವಣೆಯಲಿ ಪರುತವಿಸಿದನು ಗುರುಸೂನು"[೩೨]

ಭೀಮಕವಿಯ ಬಸವಪುರಾಣದಲ್ಲಿ ಸಹ ಅಲ್ಲಲ್ಲಿ ತಳವಾರನ ಪ್ರಸ್ತಾಪ ಬರುತ್ತದೆ. ೧೪ನೇ ಶತಮಾನದ ಕೊನೆಯ ಭಾಗದಲ್ಲಿ ಜೀವಿಸಿದ್ದ ಭೀಮಕವಿ ಬಸವಣ್ಣನ ವ್ಯಕ್ತಿತ್ವ ಚಿತ್ರಣವನ್ನು ಈ ಕೃತಿಯ ಮೂಲಕ ಪ್ರಸ್ತುತಪಡಿಸಿದ್ದಾನೆ.

"ಐಸರೋಳೀಕ್ಷಿಸುವ ತಳವಾಱರಡೆಯಿದೆ ಪೋದನೆಂದೆನುತ"[೩೩]

ಅತೀ ಸೂಕ್ಷ್ಮವಾಗಿ ವೀಕ್ಷಿಸುವ ತಳವಾರನಿಂದ ತಪ್ಪಿಸಿಕೊಂಡು ಹೋಗುವುದು ಅಷ್ಟು ಸುಲಭದ ಮಾತಲ್ಲ ಎಂಬುದನ್ನು ಈ ಸಾಲಿನಲ್ಲಿ ತಳವಾರನ ಕಡೆಯಿಂದ ತಪ್ಪಿಸಿಕೊಂಡು ಹೋದೆ ಎಂದು ಬಳಕೆಯಾಗಿದೆ.

ಸಾಂಗತ್ಯ ಕವಿಯಾದ ದೇಪರಾಜನ 'ಸೊಬಗಿನ ಸೋನೆ' ಎಂಬ ಕೃತಿಯಲ್ಲಿ ಸುರಭಾವತಿ, ಕುಂಜರೆ, ವಸಂತೆ ಮುಂತಾದ ಏಳು ಜನ ರಮಣೀಯರ ಶೃಂಗಾರ ಕಥೆಗಳನ್ನೊಳಗೊಂಡ ವರ್ಣನೆ ಇದೆ. ಇದರಲ್ಲಿ ಒಂದು ಕಡೆ.

"ತಱವಳರಾ ರನ್ನವೊಳಲ್ಗೇರಿ ಗೋರಿಯಳೊಱಿಸಿದರು ಡಂಗುರವನು"[೩೪]

ತಳವಾರನು ಊರು ಕೇರಿಗಳೆಲ್ಲಾಕಡೆಗೂ ಡಂಗುರವನ್ನು ಹೊಡೆಸಿದರು, ಊರಿನ ಮುಖಂಡರ ಆದೇಶದಂತೆ ತಳವಾರನು ತನ್ನ ಕಾರ್ಯನಿರ್ವಹಿಸಬೇಕಾಗಿತ್ತು.

ಕವಿ ಕುಮಾರ ವಾಲ್ಮೀಕಿಯ 'ತೊರವೆ ರಾಮಾಯಣವನ್ನು ಕ್ರಿ.ಶ.೧೫೦೦ರಲ್ಲಿ ರಚಿಸಿದ್ದಾನೆ. ವಾಲ್ಮೀಕಿ ರಾಮಾಯಣದ ಕಥಾ ಸರಣಿಯನ್ನೊಳಗೊಂಡ ಈ ಕೃತಿಯಲ್ಲಿ ತಳವಾರರ ಕುರಿತಾಗಿ ಉಲ್ಲೇಖಗಳಿವೆ. ಬಾಲಕಾಂಡದ ೧ನೇ ಸಂಧಿಯಲ್ಲಿ ಒಂದು ಪದ್ಯದಲ್ಲಿ ಬಾಲ ಆಂಜನೇಯನು ದುಷ್ಟ ರಾಕ್ಷಸರ ಮನೆಗಳಿಗೆ ತನ್ನ ಬಾಲದಿಂದ ಬೆಂಕಿ ಹಚ್ಚುತ್ತಾನೆ. ಅದರಿಂದ ಕಣಜ, ಟಂಕ ಸಾಲೆ, ಆಯುಧ ಶಾಲೆ, ರತ್ನ ಒಡವೆಗಳು ನಾಶವಾಗುತ್ತವೆ. ಈ ಎಲ್ಲಾ ಸ್ಥಳಗಳ ತಳವಾರಿಕೆಯನ್ನು ತಂದೆಗೆ ಒಪ್ಪಿಸಿಕೊಡುವ ಹನುಮಂತನ ಸನ್ನಿವೇಶ ತಿಳಿಸುವ ಪದ್ಯ ಈ ರೀತಿ ಇದೆ.

"ಕರಿಘಟೆಯ ಶಾಲೆಗಳ ಹಯಮಂದಿರದ ವೀಧಿಯ ಬಾಲದಲಿ ಬೋಹರಿಸಿದನು ಬಱುತೋಡೆ ಹಯಗಜ ಬೀದಿ ಬೀದಿಯಲ್ಲಿ ಮುಱಿದು ಹರದರ ಹಾರುವರ ಶೂದ್ರರ ಮಹಾಕ್ಷತ್ರಿಯರ ಕೇರಿಯ ತರವಳಿಕೆಯನು ತಂದೆಗಿತ್ತೊಡೆ ಮುಱುದನಾ ಹನುಮ"[೩೫] ಇನ್ನೊಂದು ಪದ್ಯದಲ್ಲಿ

"ತಳವಱರ ಸುಂಕಿಗರ ದಂತಾವಳ ರಥಾಶ್ವಾರೋಹಕರ ಮನೆ
ಗಳಲಮಾತ್ಯ ನಿಯೋಗಿ ಸಚಿವ ಪಾಸಾಯ್ತ ಪರಿಜನದ
ದಳಪತಿಗಳ ಸುಸಂಧಿ ವಿಗ್ರಹಗಳಲಿ ಸುಪ್ರೌಢರ ನಿವಾಸಂ
ಗಳಲಿ ವಾಸವ ಮಾಡಿಸಿದ ನೂಲಿದ ನೀಲ ಭಾಂದವನ"[೩೬]

ತಳವಾರರ, ಸುಂಕದ ಅಧಿಕಾರಿಗಳ, ಮಾವುತರ, ರಥಾರೋಹಿಗಳ, ರಾವುತರ ಮನೆಗಳಲ್ಲಿ, ಮಂತ್ರಿಗಳ, ವಿಶೇಷಾಧಿಕಾರಿಗಳ, ಸಚಿವ, ಉಡುಪು ತಯಾರಕ, ಸೇವಕರ, ದಳಪತಿ, ವಿದೇಶಾಂಗ ಸಚಿವ ಕುಶಲಿಗಳ ಮನೆಗಳಿಗೂ ಅಗ್ನಿಯನ್ನು ಬಿಡಾರ ಮಾಡಿಸಿದನು ಎಂಬುದಾಗಿದೆ. ಇಲ್ಲಿ ಒಂದು ರಾಜ್ಯದ ಆಡಳಿತ ವ್ಯವಸ್ಥೆಯಲ್ಲಿನ ವಿವಿಧ ಹುದ್ದೆಗಳನ್ನು ಕಾಣಬಹುದಾಗಿದೆ.

ತೊರವೆ ರಾಮಾಯಣದ ಭಾಗ-೨ರಲ್ಲಿ ಸಹ ತಳವಾರನ ಕುರಿತಾದ ಪ್ರಸ್ತಾಪ ಬರುತ್ತದೆ.

"ಚೋರರಂಗದ ಮಾತು ತಳವಱಗೇರಿಯಲಿ ಭೂಷಣವೇ"[೩೭]

ಕಳ್ಳನ ಜಂಬದ ಮಾತುಗಳು ತಳವಾರರ ಕೇರಿಯಲ್ಲಿ ನಡೆಯುವುದಿಲ್ಲ. ಅದಕ್ಕೆ ತಳವಾರನ ಭಯ ಮತ್ತು ಆತನ ಕರ್ತವ್ಯ ನಿಷ್ಠೆಯನ್ನು ತೋರಿಸುತ್ತದೆ. ಆದ್ದರಿಂದ ತಳವಾರ ಕೇರಿ ಎಂಬುದು ಕಳ್ಳರಿಂದ, ಸುಳ್ಳರಿಂದ ಮುಕ್ತವಾಗಿತ್ತು ಎಂಬುದು ತಿಳಿಯುತ್ತದೆ.

ಸಿಂಗಿರಾಜನ 'ಸಿಂಗಿರಾಜ ಪುರಾಣ'ದಲ್ಲಿ ಅಲ್ಲಲ್ಲಿ ತಳವಾರರ ಪ್ರಸ್ತಾಪ ಬರುತ್ತದೆ.

"ಸೊಲ್ಲಗೆ ಕವಣ ಕಡ್ಡಾಯದಂತೆ ತಳವಜೆಕೆ ಕೋರಾಯ

ಗುತ್ತಿಗೆ ಅಪುತ್ರಿಕೆ ದಂಡವುಂಡಿಗೆಗಳು"[೩೮]

ಸೋತವನು ದಂಡ ತೆರುವಂತೆ ತಳವಾರಿಕೆ, ಗುತ್ತಿಗೆ ಸುಂಕಗಳು ಕಡ್ಡಾಯವಾಗಿದ್ದವೆಂದು ಅಂದಿನ ವ್ಯವಸ್ಥೆಯ ಸ್ವರೂಪ ಈ ಮೂಲಕ ತಿಳಿಯಬಹುದು.

ಇನೇ ಮಂಗರಸನಿಂದ ರಚಿತವಾದ ಶ್ರೀಪಾಲ ಚರಿತ್ರೆಯಲ್ಲಿ ನವಕೋಟಿ ತಪಸ್ವಿಗಳನ್ನು ಸ್ತುತಿಸುವ ಈ ಕೃತಿಯಲ್ಲಿ ಒಂದು ಕಡೆ

"ಬಂದ ಬಸಂತನ ಬೀಡು ಮಂದ ಮಾರುತನ ತಳಾಜೆಕೆ

ಯೂರ್ಗಳೆಂ ಬಂದದೋಳಾವನಮಿಹುದು"[೩೯]

ರಾತ್ರಿ ಹೊತ್ತು ತಳವಾರ ಗಸ್ತು ತಿರುಗುತ್ತಿದ್ದಾಗ ಕಳ್ಳರು ಅವನನ್ನು ನೋಡಿ ಓಡಿ ಹೋಗುತ್ತಿದ್ದರು. ತಳವಾರ ಅವರನ್ನು ಬೆಂಬತ್ತಿ ಹಿಡಿಯುತ್ತಿದ್ದರು.

ಕನಕದಾಸರು ರಚಿಸಿದ ಮೋಹನ ತರಂಗಿಣಿಯಲ್ಲಿ ಜನತೆಯ ಮೌಢ್ಯ, ಕಂದಾಚಾರ, ಪೊಳ್ಳು ನಂಬಿಕೆ, ವರ್ಣವ್ಯವಸ್ಥೆಯನ್ನು ಖಂಡಿಸಿರುವ ಕೃತಿ. ಇದರಲ್ಲಿ ದೈವಭಕ್ತಿ, ಜೀವನದರ್ಶನ, ಸಮಾಜ ವಿಮರ್ಶೆ ಲೋಕಾನುಭವದಂತಹ ವಸ್ತುಗಳನ್ನು ಕಲಾತ್ಮಕವಾಗಿ ಬಿಂಬಿಸಿದ್ದಾರೆ. ತಳವಾರ ಮತ್ತು ತಳವಾರನ ವೇಷಭೂಷಣದ ಕುರಿತಾಗಿ ಪೀಠಿಕೆ ಭಾಗದಲ್ಲಿ ಬರುವ ಪದ್ಯದಲ್ಲಿ

"ಹೊಳೆವ ಕಠಾರಿ ಗೈಗತ್ತಿ ತೋಮರ ಬಿಲ್ಲು

ಬಲುದಡಿ ಪಿಡಿಚಕ್ರದಲಿ

ಕಳಬಂಟ ಕಂಠವಿಚ್ಛೇದ ವಿನೋಧದ

ತಳವಜಿರೂರ ಕಾದಿಹರು"[೪೦]

ಚಂಡ ವಿಕ್ರಮನ ವರ್ಣನೆಯೊಂದಿಗೆ, ಆತನು ದ್ವಾರಾವತಿಗೆ ಬರಲಾಗಿ ಅಲ್ಲಿ ಹೊಳೆಯುವ ಖಡ್ಗವನ್ನು ಹಿಡಿದು, ಬಿಲ್ಲು ಬಾಣಗಳನ್ನು ಏರಿಸಿಕೊಂಡು, ಬಲವಾದ ಹೆಜ್ಜೆ ಇಡುತ್ತಾ, ಜೋರಾದ ಧ್ವನಿಯಲ್ಲಿ ಕೂಗುತ್ತಾ, ಹರುಷದಿಂದಲೇ ತಳವಾರರು ಊರನ್ನು ಕಾಯುತ್ತಿದ್ದರು ಎಂಬುದನ್ನು ತಿಳಿಸುತ್ತದೆ. ಒಬ್ಬ ತಳವಾರನ ವೇಷಭೂಷಣದ ಬಗ್ಗೆ ಈ ಪದ್ಯ ತಿಳಿಸಿದರೆ

ಇನ್ನೊಂದು ಪದ್ಯದಲ್ಲಿ ಆತನು ವಿವಿಧ ವೇಷಭೂಷಣದೊಂದಿಗೆ ಹೇಗೆ ಊರನ್ನು ಕಾಯುತ್ತಿದ್ದನು ಎಂಬುದರ ಬಗೆಗೆ ಬೆಳಕು ಚೆಲ್ಲುತ್ತದೆ.

"ಮೆಟ್ಟಿದ ಕೆರ್ಪುಗಳುಡೆಯ ಬದ್ದುಗೆದಾರ
ದಟ್ಟಿಯ ಮೇಲೆ ವಂಕುಡಿಯ
ಕಟ್ಟಿದ ಹೆದೆಯೇರಿಸಿದ ಬಿಲ್ಗೋಲಿನ
ಗಟ್ಟಿವಾಳರು ತಿರುಗಿದರು"[೪೧]

ಆ ಕಾಲದ ನಿಕೃಷ್ಟವಾದ ಹುದ್ದೆ ತಳವಾರನದಾಗಿತ್ತು. ಅವನ ನಿಷ್ಠೆ ಬಗ್ಗೆ ಒಂದು ಕಡೆ "ತಳವಜಿರ್..... ದುರಾತ್ಮಂ ಸಿಲ್ಕಿದ ನೆಂದಾತನಂ"[೪೨] ಕಳ್ಳರ ದೃಷ್ಟಿಯಲ್ಲಿ ತಳವಾರ ದುರಾತ್ಮನಾಗಿ ಕಾಣುತ್ತಾನೆ ಎಂದು ಕನಕದಾಸರು ಹೇಳಿದ್ದಾರೆ. ಇದಕ್ಕೆ ತಳವಾರನ ಕಟ್ಟುನಿಟ್ಟಾದ ನಡವಳಿಕೆ ಕಾರಣವಾಗಿರಬಹುದು.

ಭಟ್ಟಾಕಳಂಕ ವಿರಚಿತ ಶಬ್ದಾನುಶಾಸನ ಎಂಬ ವ್ಯಾಕರಣ ಕೃತಿಯಲ್ಲಿ ತಳವಾರನ ಹೆಂಡತಿ 'ತಳವಾರತಿ'ಯಾಗಿದ್ದ ಬಗೆಗೆ ಮಾಹಿತಿ ನೀಡುತ್ತದೆ.

"ಅರಸನ ಹೆಂಡತಿ ಅರಸಿತಿ, ಏವಂ ಪ್ರಧಾನತಿ, ತಳವಜುತಿ ಸುಂಕಗಿತಿ, ತೋಟಗಿತಿ"[೪೩]

ಅರಸನ ಹೆಂಡತಿ ಅರಸತಿಯಾಗಿರುವುದರ ಜೊತೆಗೆ ತಳವಾರತಿ, ಸುಂಕಗಿತಿ ಮತ್ತು ತೋಟಗಿತಿಯರಿಗೆ ಪ್ರಧಾನಳಾಗಿರುತ್ತಿದ್ದಳು. ಈ ಸಾಲುಗಳಿಂದ ತಳವಾರಿಕೆ ವೃತ್ತಿ ಕೇವಲ ಪುರುಷರಿಗೆ ಮಾತ್ರ ಸೀಮಿತವಾಗಿರದೇ ಸ್ತ್ರೀಯರಲ್ಲಿಯೂ ಈ ವೃತ್ತಿ ಮಾಡಿದವರಿದ್ದರೆಂಬ ಮಾಹಿತಿ ತಿಳಿಯುತ್ತದೆ.

ತಿರುಮಲಾರ್ಯ ವಿರಚಿತ ಚಿಕ್ಕದೇವರಾಯ ವಿಜಯ(೧೬೮೦) ಎಂಬ ಚಂಪೂ ಕಾವ್ಯವು ಮೈಸೂರು ಅರಸರ ಪೂರ್ವ ಇತಿಹಾಸವನ್ನು ಸಾರುವ ಕಾವ್ಯವಾಗಿದೆ. ಇದರಲ್ಲಿ ಸಹ

"ತುಂಬಿಗಳೆಂಬ ದಿರ್ಗೋಲನಾಂತೆಲರ್ ತಳವಜನಂತೆ
ಸಾರುತನುಗೆಯ್ವುದು ದರ್ಪಕ ವೀರ ಸೇನೆಯಂ"[೪೪]

ಹಗಲು ಹೊತ್ತು ದುಂಬಿಗಳು ತಳವಾರನಂತೆ ಯಾವುದೇ ಭಯವಿಲ್ಲದೆ ಓಡಾಡುತ್ತಿದ್ದವು.

ಗೋವಿಂದ ವೈದ್ಯನು ರಚಿಸಿದ ಕಂಠೀರವ ನರಸರಾಜ ವಿಜಯ(೧೬೪೮) ಎಂಬ ಗ್ರಂಥದಲ್ಲಿ ಮೈಸೂರಿನ ಕಂಠೀರವ ನರಸರಾಜನ ದಿಗ್ವಿಜಯದ ವರ್ಣನೆಯನ್ನು ಒಳಗೊಂಡಿದೆ. ಸಾಂಗತ್ಯದಲ್ಲಿ ರಚನೆಗೊಂಡ ಈ ಗ್ರಂಥದಲ್ಲಿ ಒಂಬತ್ತನೇ ಸಂಧಿಯ ಮದನ ಮೋಹಿನಿ ಕಥೆಯಲ್ಲಿ ಹೇಮಂತನನ್ನು ಸೋಲಿಸಿದ ಮಧುರಾಜನು ಆನೆಯೇರಿ ಅರಮನೆಗೆ ಬರುವಾಗ ಆತನನ್ನು ಸ್ವಾಗತಿಸಲು ತಳಿರು, ತೋರಣಗಳಿಂದ ಶೃಂಗರಿಸಲಾಗಿತ್ತು. ಆ ಸಂದರ್ಭದಲ್ಲಿ

"ಇಂದು ನಾಳಿನೊಳು ಕಾವನು ವನಕೇಳಿಗೆ
ಬಂದಪ ಕಾದಿರೆಂದಾಗ
ಮಂದಾನಿಲಗೆ ಚೈತ್ರ ತಳವಾರಿಕೆಯನಿ
ತ್ತಂದ ದೊಳೆಸೆದನೇವೇಳ್ವ"[೪೫]

ಇಂದು–ನಾಳೆ ಎಂದು ಕಳ್ಳರು ಊರು ಪ್ರವೇಶ ಮಾಡಿದಾಗ ತಳವಾರ ಅವರನ್ನು ಬೇಹುಗಾರಿಕೆಯ ತಂತ್ರದಿಂದ ಅವರನ್ನು ಹಿಡಿಯುತ್ತಿದ್ದನು.

ಪದ್ಮನಾಭನ 'ಪದ್ಮಾವತಿ ಚರಿತೆ' ಅಥವಾ 'ಜಿನದತ್ತರಾಯ ಚರಿತೆ'ಯ ಸಾಂಗತ್ಯದಲ್ಲಿ ರಚನೆಗೊಂಡ ಕಾವ್ಯದಲ್ಲಿ ಪಾರ್ಶ್ವನಾಥನ ಶಾಸನ ದೇವಿಯಾದ ಪದ್ಮಾವತಿಯ ಚರಿತೆಯನ್ನು ಒಳಗೊಂಡಿದೆ. ಇದರಲ್ಲಿ ತಳವಾರಿಕೆ ಕುರಿತಾಗಿ ಒಂದು ಕಡೆ

"ಹರುಷದಿ ತಳವಾರಿಕೆ ನಿನಗೆಂದಾಗ ಕರದು ಕೊಟ್ಟನು ವೀಳೆಯವ"[೪೬]

ತಳವಾರಿಕೆ ಎನ್ನುವುದು ಒಂದು ಉನ್ನತ ಹುದ್ದೆಯಾಗಿತ್ತು. ಈ ಹುದ್ದೆಯನ್ನು ಪಡೆಯುವುದು ಅಂದು ಒಂದು ಹೆಚ್ಚುಗಾರಿಕೆಯಾಗಿತ್ತು. ತಳವಾರನಿಗೆ ನಾಯಕನೆಂಬ ಅಭಿದಾನವೂ ಇದ್ದುದರಿಂದ, ಸೇನಾಪತಿ, ದಂಡನಾಯಕನ ಸ್ಥಾನಮಾನ ಇರುತ್ತಿದ್ದುದರಿಂದ ತಳವಾರಿಕೆಗೆ ಗೌರವಿತ್ತು. ಈ ಹಿನ್ನೆಲೆಯಲ್ಲಿ ತಳವಾರಿಕೆ ನೀಡಿದ್ದಕ್ಕೆ ಅವನಿಗೆ ಪ್ರತಿಯಾಗಿ ತಾನು ಆ ಹುದ್ದೆಗೆ ಬದ್ಧನಾಗಿರುತ್ತೇನೆ ಎಂದು ವೀಳೆ ನೀಡಿದ್ದನ್ನು ತಿಳಿಸುತ್ತದೆ.

ಲಿಂಗಣ್ಣ ಕವಿಯ ಕೆಳದಿ ನೃಪವಿಜಯ(೧೮ನೇ ಶತಮಾನ)ದಲ್ಲಿ ಶಿವಪ್ಪನಾಯಕನ ರಾಜ್ಯಭಾರವನ್ನು ಮತ್ತು ಆತನ ಭೂ ಸುಧಾರಣೆಯನ್ನು ಕುರಿತು ಹೇಳುವ ಈ ಕೃತಿಯಲ್ಲಿ ತಳವಾರರ ಕುರಿತಾದ ಪ್ರಸಂಗಗಳು ಬರುತ್ತವೆ. ಚೌಡಪ್ಪ ನಾಯಕನು ಇಕ್ಕೇರಿಯಲ್ಲಿ ಒಂದು ಅರಮನೆಯನ್ನು ನಿರ್ಮಿಸುತ್ತಾನೆ. ಅದಕ್ಕೆ ಬೇಕಾದ ಬೊಕ್ಕಸ, ಭಂಡಾರ, ಆನೆ, ಕುದುರೆ, ಉಗ್ರಾಣಗಳನ್ನು ನಿರ್ಮಿಸಿ, ಪಟ್ಟಣಕ್ಕೆ ಬೇಕಾದ ಪುರ, ಪೇಟೆ, ತಳವಾರ ಕಟ್ಟೆ, ಸುಂಕದ ಕಟ್ಟೆ, ಸೇನಾ ರಕ್ಷಣೆ ಮುಂತಾದ ಅಭಿವೃದ್ಧಿ ಕಾರ್ಯವನ್ನು ಕೈಗೊಂಡನು ಎಂಬುದನ್ನು ತಿಳಿಸುವ ಪದ್ಯದಲ್ಲಿ ತಳವಾರ ಕುಳಿತುಕೊಳ್ಳುತ್ತಿದ್ದ ತಳವಾರ ಕಟ್ಟೆಯ ಉಲ್ಲೇಖ ಬರುತ್ತದೆ.

"ಇಂತರ ಮನೆಯಂ ರಚನೆಗೈಸಿ ತದುಪಯುಕ್ತಮಾದ ಬೊಕ್ಕಸ ಭಂಡಾರ
ಲಾಯ ಗಜಾಶ್ವಶಾಲೆ ಯುಗ್ರಾಣ ಪಣತ ಮುಂತಾದ ಮಹಲ್ಗಳಂ
ನಿರ್ಮಾಣಂಗೈಸಿ
ಪುರ ಪೇಟೆ ತಳವಾರಗಟ್ಟೆ ಮುಂತಾದವುವಂ ರಚನೆಗೈಸಿ
ಪೂರಗುಕ್ಕಡ ಮನೊಡ್ಡುಮಂ"[೪೭] ಎಂದು ಉಲ್ಲೇಖ ಬರುತ್ತದೆ.

ಮುಮ್ಮಡಿ ಕೃಷ್ಣರಾಜ ವಿರಚಿತ 'ಸೌಂಗಂಧಿಕಾ ಪರಿಣಯ'(೧೮೦೦ ಕ್ರಿ.ಶ)ದಲ್ಲಿ ದೇವೇಂದ್ರನು ಭೂಮಿಗೆ ಬಂದು ಇಲ್ಲಿನ ಜನರಲ್ಲಿ ಬೆರತು ತನ್ನ ಕಷ್ಟ ಕಾರ್ಪಣ್ಯಗಳು ತೀರಿದ ಮೇಲೆ ದೇವ ಲೋಕಕ್ಕೆ ವಾಪಸ್ಸಾಗುತ್ತಾನೆ. ಇಲ್ಲಿ ಮುಮ್ಮಡಿಯವರ ಕಾಲದ ಸಾಂಸ್ಕೃತಿಕ ವಿಶ್ಲೇಷಣೆಯಿಂದ ಕೂಡಿದ ಈ ಗ್ರಂಥದಲ್ಲಿ ಒಂದು ಕಡೆ

"ನಲಿಯುತ ಕಾಲಚಕ್ರನು ತಾನೆಂಬುದು ತಳವಾರನಿರುವನಾ ನೃಪಗೆ"[೪೮]

ರಾಜನಿಗೆ ಮಂತ್ರಿ ಪರಿವಾರ ಇರುವಂತೆ ತಳವಾರರ ಸಹಾಯ ಸಹಕಾರವೂ ಅಗತ್ಯ ವಾಗಿರುತ್ತದೆ.

ಹೀಗೆ ಪ್ರಾಚೀನ ಕಾಲದಿಂದಲೂ ತಳವಾರ ಗ್ರಾಮ ರಕ್ಷಣೆ, ಸಂಪತ್ತಿನ ರಕ್ಷಣೆ ಹಾಗೂ ಒಂದು ಸುಸಂಸ್ಕೃತ ನಾಗರಿಕ ಸಮಾಜದ ನಿರ್ಮಾಣದಲ್ಲಿ ಪ್ರಮುಖವಾಗಿ ಕಾಣುತ್ತಾನೆ. ಈ ಕಾರಣದಿಂದಲೇ ನಾಗರಿಕರಿಗೆ ಜೀವಾಳವಾಗಿದ್ದ ಈತನು ನಿಷ್ಠೆ, ಪ್ರಾಮಾಣಿಕತೆಯ ದ್ಯೂತಕನಾಗಿದ್ದನು. ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಬರುವ ತಳವಾರನ ಪಾತ್ರಗಳು ಒಂದು ನಾಗರಿಕತೆಯನ್ನು ಹಾಗೂ ಒಂದು ಸಮಾಜದ ಪರಿವರ್ತನೆಯೊಂದಿಗೆ ಪರಂಪರಾನುಗತವಾಗಿ ಇದೇ ವೃತ್ತಿಯಲ್ಲಿ ಮುಂದುವರೆದುಕೊಂಡು ಬಂದಿರುವುದರ ಬಗೆಗೆ ಸಾಕ್ಷಿಯನ್ನು ಒದಗಿಸುತ್ತವೆ. ಜೊತೆಗೆ ಸಾಹಿತ್ಯದಲ್ಲಿ ನಿರಂತರವಾಗಿ ತಳವಾರ ಮತ್ತು ತಳವಾರಿಕೆ ಕುರಿತಾಗಿ ಉಲ್ಲೇಖಗಳು ಬಂದಿವೆ. ಇದು ತಳವಾರರ ಮತ್ತು ಅವರ ವೃತ್ತಿಯ ಜನಪ್ರಿಯತೆಗೆ ಹಿಡಿದ ಕನ್ನಡಿಯಾಗಿದೆ.

### ೩.೨. ವಚನಗಳಲ್ಲಿ ತಳವಾರರು

ಹನ್ನೆರಡನೇ ಶತಮಾನದಲ್ಲಿ ಪಂಪ, ರನ್ನ, ಪೊನ್ನನ ತರುವಾಯ ಬಂದ ಬಸವಣ್ಣ, ಅಕ್ಕಮಹಾದೇವಿ, ಪ್ರಭುದೇವ ಮುಂತಾದವರ ವಚನಗಳು ಮುಂದಿನ ಪೀಳಿಗೆಯ ವಚನಕಾರರಿಗೆ ಹಾಗೂ ಸಾಹಿತ್ಯದ ಮೇಲೆ ಪ್ರಭಾವ ಬೀರಿರುವುದನ್ನು ಕಾಣುತ್ತೇವೆ. ಹನ್ನೆರಡನೇ ಶತಮಾನದ ಶಿವಶರಣರು ಗೈದ, ಸಮಾಜೋ-ಧಾರ್ಮಿಕ ಆಂದೋಲನದ ಉಪಸೃಷ್ಟಿಯಾಗಿ ವಚನ ಸಾಹಿತ್ಯ ಪ್ರಕಾರ ಹುಟ್ಟಿಕೊಂಡಿತು. 'ವಚನ' ಅಂದರೆ 'ಪ್ರಮಾಣ' ಎಂದರ್ಥ. ಇದು ಸಾಹಿತ್ಯ ಪರಿಭಾಷೆಯಾಗಿ ಒಂದು ಪ್ರಕಾರದ ಕಾವ್ಯ. ಹಾಡಿದರೆ ಹಾಡಾಗುವ, ಓದಿದರೆ ಗದ್ಯವಾಗುವ ಕನ್ನಡದ ವಿಶಿಷ್ಟ ಕಾವ್ಯ ಪ್ರಕಾರವಾಗಿದೆ. ಇದು ಶರಣರ ಆಂದೋಲನ ಮತ್ತು ಅಭಿವ್ಯಕ್ತಿಗೆ ಸಂಗಾತಿಯಾಯಿತು. ಕನ್ನಡ ಸಾಹಿತ್ಯದ ಇತಿಹಾಸದಲ್ಲಿ ೧೨ನೇ ಶತಮಾನ ಒಂದು ಪ್ರಮುಖ ಘಟ್ಟ. ಈ ಶತಮಾನದಲ್ಲಿ 'ವಚನ' ಎಂಬ ಹೊಸ ಸಾಹಿತ್ಯ ಉದಯವಾಯಿತು. ವಚನ ಸಾಹಿತ್ಯ ಕನ್ನಡ ಸಾಹಿತ್ಯದಲ್ಲಿ ಪ್ರಭಾವಶಾಲಿ ಆತ್ಮ ವಿಮರ್ಶೆಯ ಮಾಧ್ಯಮವಾಗಿ ಸ್ವತಂತ್ರವಾಗಿ ಬೆಳೆದುಬಂದಿದೆ. ಕನ್ನಡ ಸಾಹಿತ್ಯ ಮಾತ್ರವಲ್ಲದೆ ವಿಶ್ವಸಾಹಿತ್ಯದಲ್ಲಿ ಪ್ರಭಾವ ಬೀರಿರುವ ವಚನ ಸಾಹಿತ್ಯ ಸ್ವಂತಿಕೆಯ ಅಭಿವ್ಯಕ್ತಿಯಾಗಿದೆ.

ವಚನ ಸಾಹಿತ್ಯದಲ್ಲಿ ಬರುವ ದೇವರ ದಾಸಿಮಯ್ಯ, ಬಸವಣ್ಣ, ಅಲ್ಲಮಪ್ರಭು, ಅಕ್ಕಮಹಾದೇವಿ, ಅಂಬಿಗರ ಚೌಡಯ್ಯ, ಮಾದರ ಚನ್ನಯ್ಯ, ಡೋಹರಕಕ್ಕಯ್ಯ, ನುಲಿಯಚಂದಯ್ಯ, ಸೂಳೆ ಸಂಕವ್ವ, ಹಡಪದ ಅಪ್ಪಣ್ಣ, ಒಕ್ಕಲು ಮುದ್ದಯ್ಯ, ಏಖಾಂತ ರಾಮಯ್ಯ, ಮಡಿವಾಳ ಮಾಚಯ್ಯ, ತಳವಾರ ಕಾಮಿದೇವ, ಹೆಂಡದ ಮಾರಯ್ಯ ಮುಂತಾದ ೧೧೫ಕ್ಕೂ ಹೆಚ್ಚು ಶರಣರು ವಿವಿಧ ವೃತ್ತಿ, ಕಸುಬುಗಳಲ್ಲಿ ತೊಡಗಿದವರಾಗಿದ್ದರು. ಇವರು ತಮ್ಮ ಅಭಿವ್ಯಕ್ತಿ ಮಾಧ್ಯಮವಾಗಿ ವಚನಗಳನ್ನು ಬಳಸಿಕೊಂಡರು. ತಮ್ಮ ಅನುಭವ, ವಿಚಾರಗಳ ಮೂಲಕ ಸಮಾಜದ ಓರೆಕೋರೆಗಳನ್ನು ತಿದ್ದುವ, ಸನ್ನಡತೆ ಮಾರ್ಗದಲ್ಲಿ ನಡೆಯುವ ರೀತಿಯಲ್ಲಿ ನೀತಿ ಮತ್ತು ವಾಸ್ತವ ಸತ್ಯದ ಮಾರ್ಗಗಳನ್ನು ವಚನಗಳ ಮೂಲಕ ಪ್ರಸ್ತುತಪಡಿಸಿದ್ದಾರೆ.

ಈ ಭಾಗದಲ್ಲಿ ವಚನ ಸಾಹಿತ್ಯದಲ್ಲಿ ತಳವಾರ ಮತ್ತು ತಳವಾರಿಕೆ ವೃತ್ತಿಯ ಉಲ್ಲೇಖ ಗೊಂಡಿದ್ದರ ಬಗ್ಗೆ ಚರ್ಚಿಸಲಾಗಿದೆ. ಒಂದು ವೃತ್ತಿ ಸಮುದಾಯದವರು ನಿರಂತರವಾದ ಕಾಯಕ ಮತ್ತು ಸಮಾಜ ಜೀವನ ಕ್ರಮದಲ್ಲಿ ತಮ್ಮನ್ನು ತಾವು ತೊಡಗಿಸಿಕೊಳ್ಳುವುದರ ಮೂಲಕ ನಿಕಟ ಸಂಬಂಧವನ್ನು ಹೊಂದಿರುತ್ತಾರೆ. ಹೀಗೆ ಸಮಾಜದೊಂದಿಗೆ ನಿಕಟವಾದ ಸಂಬಂಧ ಹೊಂದಿದ್ದ ತಳವಾರರು ವಚನಕಾರರ ಮೇಲೆ ಪ್ರಭಾವ ಬೀರಿದ್ದಾರೆ. ಲಭ್ಯವಿರುವ ಕನ್ನಡ ವಚನಗಳಲ್ಲಿ ಅಲ್ಲಲ್ಲಿ ತಳವಾರ ಉಲ್ಲೇಖ ಇರುವುದನ್ನು ಕಾಣಬಹುದಾಗಿದೆ.

ಸ್ವಾತಂತ್ರ್ಯಪೂರ್ವದಲ್ಲಿದ್ದ ಕೋಟೆ, ಕೊತ್ತಲಗಳು ಹಾಳಾದ ನಂತರ ತಳವಾರಿಕೆಗೆ ಮುಂಚೆ ಇದ್ದ ಮಹತ್ವ ಕಡಿಮೆಯಾಯಿತು. ಈ ವೃತ್ತಿ ಅಂದಿನ ಸಮಾಜದಲ್ಲಿ ಅಗತ್ಯಕ್ಕೆ ಅನುಸಾರವಾಗಿ ವಿವಿಧ ರೂಪಗಳನ್ನು ಪಡೆಯುತ್ತಾ ಬಂದಿತು. ಅದರಲ್ಲಿ ಓಲೆಕಾರ, ಕೋಲುಕಾರ ಮೂಲತಃ ತಳವಾರರೇ ಆಗಿರುತ್ತಿದ್ದರು. ಈ ಓಲೆಕಾರರು ಒಂದು ಕಾಲಕ್ಕೆ ಕಾಳಗದಲ್ಲಿ ಹೋರಾಡುವವರೂ ಆಗಿದ್ದರು ಎಂಬುದನ್ನು ಬಸವಣ್ಣನವರ ಒಂದು ವಚನದಿಂದ ತಿಳಿದುಬರುತ್ತದೆ.

“ಚೇಳೆಂಬ ಬಸುರಾಯಿತ್ತೆ ಕಡೆ।
ಬಾಳಿಗೆ ಫಲವಾಯಿತ್ತೆ ಕಡೆ ನೋಡಾ।
ರಣರಂಗದಲ್ಲಿ ಕಾದುವ ಓಲೆಕಾರಂಗೆ ಓಸರಿಸಿತ್ತೆ ಕಡೆ।
ಮಾಡುವ ಭಕ್ತರಿಗೆ ಮನಹೀನವಾದಡೆ ಅದೇ ಕಡೆ
ಕೂಡಲಸಂಗಮದೇವಾ”[೪೯]

ಓಲೆಕಾರನ ಕೆಲಸ ಕಾಗದ ಪತ್ರಗಳನ್ನು ಹಾಗೂ ಸುದ್ದಿಗಳನ್ನು ಒಂದು ಕಡೆಯಿಂದ ಮತ್ತೊಂದು ಕಡೆಗೆ ಮುಟ್ಟಿಸುವುದಾಗಿತ್ತು. ಇಂತಹ ಒಬ್ಬ ಓಲೆಕಾರ ಕಾಳಗದಲ್ಲಿಯೂ ಭಾಗವಹಿಸುತ್ತಿದ್ದನೆಂಬುದು ಮೇಲಿನ ವಚನದಿಂದ ಸ್ಪಷ್ಟವಾಗುತ್ತದೆ. ಭಾರತದಲ್ಲಿ ಬ್ರಿಟೀಷರ ಅಧಿಪತ್ಯ ನೆಲೆಗೊಂಡ ಮೇಲೆ ತಳವಾರನ ವೃತ್ತಿ ಓಲೆಕಾರಿಕೆಗೆ ಬಂದಿತು. ಕಾಗದ ಪತ್ರಗಳ

ಸಾಗಾಣಿಕೆ ಮಾಡುವುದು, ಅದಿಲ್ಲದಾಗ ಗಸ್ತು ತಿರುಗುವುದು, ಖಜಾನೆಗೆ ಹಣ ತುಂಬಲು ಹೋಗುವುದು. ಇತರೆ ಕೆಲಸಗಳನ್ನು ಮಾಡುವವನು ತಳವಾರನಾಗಿದ್ದ ಎಂಬುದು ಇದರಿಂದ ಸ್ಪಷ್ಟವಾಗುತ್ತದೆ.

ವಚನಕಾರ ಮೋಳಿಗೆ ಮಾರಯ್ಯನು ತನ್ನ ವಚನದಲ್ಲಿ 'ನೆಲ ತಳವಾರನಾದಡೆ ಕಳ್ಳರಿಗೆ ಹೊಗಲೆಡೆಯುಂಟೇ' ಎಂದಿದ್ದಾನೆ. ತಳವಾರ ಪ್ರಮುಖ ಕರ್ತವ್ಯಗಳಲ್ಲಿ ಒಂದು ಸ್ಥಳದ ರಕ್ಷಣಾ ಉಸ್ತುವಾರಿಯನ್ನು ನೋಡಿಕೊಳ್ಳುವುದಾಗಿತ್ತು. ಅದಕ್ಕಾಗಿ ಆತನು ಎಲ್ಲರ ಮೇಲೂ ಕಣ್ಣಿಟ್ಟಿರುತ್ತಿದ್ದ. ಇಲ್ಲಿ ತಳವಾರನ ಸುಪರ್ದಿಯಲ್ಲಿರುವ ಸ್ಥಳದಿಂದ ಕಳ್ಳನು ತಪ್ಪಿಸಿಕೊಳ್ಳಲು ಅಷ್ಟು ಸುಲಭವಾಗಿರಲಿಲ್ಲ. ತಳವಾರನ ಕಾವಲು ಆ ರೀತಿಯಾಗಿತ್ತು ಎಂಬುದು ಈ ವಚನದ ಮೂಲಕ ತಿಳಿಯುತ್ತದೆ.

ಮೋಳಿಗೆ ಮಾರಯ್ಯನ ವಚನಗಳಲ್ಲಿ ನೀತಿ ಪ್ರಧಾನವಾದ ವಚನಗಳೇ ಅಧಿಕವಾಗಿವೆ. ಅದರಲ್ಲಿ ಒಂದು ವಚನದಲ್ಲಿ ತಳವಾರನ ಉಲ್ಲೇಖವಿದೆ. ಈ ಭೂಲೋಕದಲ್ಲಿ ಲಕ್ಷ-ಅಲಕ್ಷ ಭೇದ-ಅಭೇದ, ಜರ-ನಿರ್ಜರ, ಚಿಂತೆ-ಸಂತೋಷ, ಆಕಾಂಕ್ಷೆ-ನಿರಾಕಾಂಕ್ಷೆಗಳೆಂಬ ದ್ವಂದ್ವಗಳಿವೆ. ಇದರಿಂದ ಭೂಲೋಕ ಕೆಟ್ಟಿದೆ ಎಂದು ಹೇಳುತ್ತಾ

"ಕೋಟೆ ಕೋಳು ಹೋಯಿತ್ತು; ಹಿರಿಯರಸು ಸಿಕ್ಕಿದ;
ಪ್ರಧಾನನ ತಲೆ ಹೋಯಿತು. ತಳವಾರನ ಕಣ್ಣು ಕಳೆಯಿತು;
ಎಕ್ಕಟಿಗನ ಮಕ್ಕಳೆಲ್ಲರೂ ನಷ್ಟ ಸಂತಾನವಾದರು.
ಸೃಷ್ಟಿಯೊಳಗೆಲ್ಲ ರಣಮಯವಾಯಿತ್ತು
ರಣ ಮಧ್ಯದಲ್ಲೊಂದು ವೃಕ್ಷವ ಕಂಡೆ
ಸತ್ತವನಿರ್ದ, ಇರ್ದವ ಸತ್ತ
ಇವರಿಬ್ಬರ ಮಧ್ಯದಲ್ಲೊಂದು ವೃಕ್ಷವ ಕಂಡೆ ನಿಃಕಳಂಕ
ಮಲ್ಲಿಕಾರ್ಜುನ"[೫೦]

ಲೋಕದ ದ್ವಂದ್ವ ನಿಲುವುಗಳಿಂದಾಗಿ ಕೋಟೆಗಳು ಹಾಳಾದವು. ಅರಸರು, ಪ್ರಧಾನರು, ಅಳಿಸಿ ಹೋದರು. ಕಾವಲಿದ್ದ ತಳವಾರನ ಕಣ್ಣಿಗೆ ಕೆಲಸವಿಲ್ಲದಂತಾಯಿತು. ಎಕ್ಕಟಿಗನಿಗೂ ಕೆಲಸವಿಲ್ಲದಂತಾಗಿ ನಾಡೆಲ್ಲಾ ರಣಮಯವಾಯಿತು. ಇದರಿಂದ ಸತ್ತವನು ಇದ್ದ, ಇದ್ದವನು ಸತ್ತ ಎಂಬಂತಾಯಿತು ಎಂದು ಮಾರ್ಮಿಕವಾಗಿ ಹೇಳಿದ್ದಾನೆ.

೧೨ನೆ ಶತಮಾನದಲ್ಲಿದ್ದ ಸಿದ್ದರಾಮೇಶ್ವರ ವಚನಗಳಲ್ಲಿ ಸಹ ಅಲ್ಲಲ್ಲಿ ತಳವಾರ ಮತ್ತು ಕಾಯಕ ವ್ಯಕ್ತಿಗಳ ಬಗೆಗೆ ಪ್ರಸ್ತಾಪ ಬರುತ್ತದೆ. ಅದರಲ್ಲಿ ಒಂದು ವಚನದಲ್ಲಿ

'ಏರಿಯನೇಜು ಬರುವಲ್ಲಿ
ಮೂವತ್ತಾಜು ಮಂಟಪದ ಮಣಿಯ ತುಂಬಿ
ಕೇರಿ ಕೇರಿಯ ತುದಿಯಲ್ಲಿ ತಿರುಗಲು

ಸುಂಕಿಗರಿನ್ನೂಱ ಹದಿನಾಱು ಮಂದಿ
ಮೂವತ್ತಾಱು ಮಂಟಪದಲ್ಲಿ ಅಡಗಿದರಯ್ಯಾ
ಏರಿಯನೇಜಿ ಬರುವ ಪುರುಷ ಮೂವರು
ತಳವಾಱರ ಕೂಡಿಕೊಂಡು ಮೂವತ್ತಾಱು ಮಂಟಪದಲ್ಲಿ
ಅಡಗಿದ ಇನ್ನಾಱಹದಿನಾಱು ಸುಂಕಿಗರನಱಸಲು
ಮೂವರು ತಳವಾಱರು ತನ್ನ ನುಂಗಿದರಯ್ಯಾ
ಕಪಿಲ ಸಿದ್ಧ ಮಲ್ಲಿಕಾರ್ಜುನಯ್ಯ"[೫೧]

ಸುಂಕ ಕಟ್ಟದೆ ಅಡಗಿ ಕುಳಿತ ೨೧೬ ಜನರನ್ನ ಮೂರು ಜನ ತಳವಾರರು ಹುಡುಕಿದರು ಎಂದು ಹೇಳುವ ಈ ವಚನದಲ್ಲಿ ಅಂದಿನ ಗ್ರಾಮ, ನಗರ, ಪಟ್ಟಣಕ್ಕೆ ಸಂಬಂಧಿಸಿದ ಸುಂಕವನ್ನು ವಸೂಲಿ ಮಾಡಲು ಜನಸಂಖ್ಯೆಗನುಗುಣವಾಗಿ ಮೂರು ನಾಲ್ಕು ಜನ ತಳವಾರ ಇರುತ್ತಿದ್ದರೆಂಬ ಮಾಹಿತಿ ತಿಳಿಯುತ್ತದೆ.

೧೨ನೇ ಶತಮಾನದಲ್ಲಿದ್ದ ಮತ್ತೊಬ್ಬ ವಚನಕಾರ ಅಂಬಿಗರ ಚೌಡಯ್ಯನ ವಚನಗಳಲ್ಲೂ ಸಹ ತಳವಾರನ ಉಲ್ಲೇಖವಿದೆ.

"ಕಳ್ಳ, ಹಾದರಿಗ, ಸೂಳೆಗಾಱ, ತಳವಾಱನಲ್ಲಿ ಮಿಥ್ಯವಿಲ್ಲದಿರಬೇಕು
ಸತ್ಯ ಸದಾಚಾರಿಗಳಲ್ಲಿ ಸದ್ಭಕ್ತ ಮಿಥ್ಯ ತಥ್ಯವಿಲ್ಲದಿರಬೇಕು
ಈ ಗುಣ ನಿತ್ಯ ನಿಜೈಕ್ಯನ ಯುಕ್ತಿಯೆಂದ ನಂಬಿಗ ಚವುಡಯ್ಯ"[೫೨]

ಕಳ್ಳ, ಹಾದರತನ ಮಾಡುವವರು ಹಾಗೂ ಸೂಳೆಗಾರರು, ತಳವಾರ ಇವರೆಲ್ಲಾ ಒಂದೊಂದು ವೃತ್ತಿಯವರಾಗಿದ್ದಾರೆ. ಇವರಲ್ಲಿ ಎಂದಿಗೂ ಸುಳ್ಳು ಹೇಳುವ ಚಾಳಿ ಇರಬಾರದು. ಅಂದಾಗ ಮಾತ್ರ ಅವರ ವೃತ್ತಿಯಲ್ಲಿ ನಿಷ್ಠೆ ಉಳಿಯಲು ಸಾಧ್ಯ ಎಂಬುದನ್ನು ಈ ವಚನದ ಮೂಲಕ ಚೌಡಯ್ಯನು ಪ್ರಸ್ತುತಪಡಿಸಿದ್ದಾನೆ.

೧೨ನೇ ಶತಮಾನದಲ್ಲಿ ತಳವಾರ ಕಾಮಿದೇವ ಎಂಬ ವಚನಕಾರ ಇದ್ದ ಎಂಬ ಸಂಗತಿ ತಿಳಿಯುತ್ತದೆ. ಈತನ ಬಗ್ಗೆ ಹಾಗೂ ವಚನಗಳ ಬಗ್ಗ ಹೆಚ್ಚಿನ ಮಾಹಿತಿ ಸಿಕ್ಕಿಲ್ಲ. ವಿರೂಪಾಕ್ಷ ಪಂಡಿತನು ತನ್ನ ಕೃತಿ ಚೆನ್ನಬಸವ ಪುರಾಣದಲ್ಲಿ ಈತನನ್ನು ತಳವಾರ(ಕಾಮಿದೇವ) ರಾಮಯ್ಯ ಎಂದು ಉಲ್ಲೇಖಿಸಲಾಗಿದೆ. ಹಾಗೂ ಎಲ್ಲಾ ಪುರಾತನರ ವಚನ ಕಟ್ಟುಗಳಲ್ಲಿ ಬಸವಣ್ಣನವರ ವಚನಗಳಿಂದ ಆರಂಭವಾಗುವ ಕಟ್ಟಿನಲ್ಲಿ ೮೭ ಜನ ವಚನಕಾರರಿದ್ದಾರೆ. ಅದರಲ್ಲಿ ತಳವಾರ ಕಾಮಿದೇವನ ವಚನಗಳು ಸೇರಿವೆ. ಅದೇ ರೀತಿ 'ಗೊಗ್ಗವ್ವೆಯ ವಚನಗಳಿಂದ ಆರಂಭವಾಗುವ ಮತ್ತೊಂದು ಕಟ್ಟಿನಲ್ಲಿ ೧೨೫ ಜನ ವಚನಕಾರರ ವಚನಗಳನ್ನು ಸಂಗ್ರಹಿಸಲಾಗಿದೆ. ಇಲ್ಲಿ ಸಹ ತಳವಾರ ಕಾಮಿದೇವನ ವಚನಗಳು ಕಂಡುಬರುತ್ತವೆ. ಈತನ ಹೆಸರಿನ ಜೊತೆಯೇ ಕಾಯಕವೂ

ಸೇರಿಕೊಂಡಿರುವುದರಿಂದ ತಳವಾರ ವೃತ್ತಿ ಮಾಡಿಕೊಂಡಿದ್ದ ಎಂದು ತಿಳಿಯಬಹುದಾಗಿದೆ. ಈ ಮೂಲಕವಾಗಿ ತಳವಾರರು ಕೇವಲ ರಕ್ಷಣೆಯ ಜವಾಬ್ದಾರಿಯನ್ನು ಮಾತ್ರ ಹೊಂದಿರಲಿಲ್ಲ. ಅದರ ಜೊತೆ ಜೊತೆಗೆ ಸೈನಿಕರಾಗಿ, ಕವಿಗಳಾಗಿ, ವಚನಕಾರರಾಗಿಯೂ ಇದ್ದರೆಂಬ ಬಗ್ಗೆ ಮಾಹಿತಿ ತಿಳಿಯುತ್ತದೆ.

ಸುಂಕದ ಬಂಕಣ್ಣನ ಒಂದು ವಚನದಲ್ಲಿ ತಳವಾರನ ಕುರಿತಾದ ಉಲ್ಲೇಖವಿದೆ.

“ಕ್ಷಯ ಕಾರಣವೆಂಬ ಪಟ್ಟಣಕ್ಕೆ ಲಯ ಕಾರಣವೆಂಬ ಅರಸು
ಪೋಲಿಕಾಱ ಪ್ರಧಾನ, ಮದೋನ್ಮತ್ತ ತಳವಾರ,
ಇಂತೀ ಪಟ್ಟಣದರಸು ಮರವೆಯ ಮಹಾರಾಜ್ಯವನು
ಆಳುತ್ತಿರಲಾಗಿ, ಆತನ ಅಡಿಗೆಱಗಿ ಅಂಜುವರಿಲ್ಲ,
ಬಂಕೇಶ್ವರಲಿಂಗವ ಕಂಡಱಿಯದ ಕಾರಣ”[೫೨]

ಸುಂಕದ ಬಂಕಣ್ಣನ ಈ ನೀತಿ ವಚನದಲ್ಲಿ ಕ್ಷಯ ರೋಗ ಬಂದ ಪಟ್ಟಣದಲ್ಲಿ ಅರಸು ಸೋಮಾರಿಯಾಗಿದ್ದರೆ, ಆತನ ಮಂತ್ರಿಯೂ ಹಾಗೂ ಊರ ಕಾಯುವ ತಳವಾರನೂ ಪೋಲಿಯಾಗಿ, ಮದವೇರಿ ಮೆರೆಯುತ್ತಾರೆ. ಅದಕ್ಕೆ ಅರಸನಾದವನು ಮೈಮರೆತು ಕುಳಿತರೆ ಈತನಿಗೆ ಯಾರು ಹೆದರುವುದಿಲ್ಲವೆಂದು ಈ ವಚನದ ಮೂಲಕ ತಿಳಿಸಿದ್ದಾನೆ. ಇಲ್ಲಿ ಅರಸನ ಆಜ್ಞಾನುಧಾರಕರಾದ ಮಂತ್ರಿ ತಳವಾರರು ಆತನ ಮೇಲೆಚ್ಚರಿಕೆ ಇಲ್ಲದಿದ್ದರೆ ಸೊಕ್ಕುತ್ತಿದ್ದರು. ಇದರಿಂದ ರಾಜ್ಯದ ಜನರ ಪಾಡು ಹದಗೆಡುತ್ತಿತ್ತು. ಅದಕ್ಕಾಗಿ ರಾಜನು ತನ್ನ ಅಧೀನ ಅಧಿಕಾರಿಗಳನ್ನು ನಿಯಂತ್ರಿಸುವ ಮತ್ತು ಅವರಿಂದ ಜನರ ಸ್ವಾಸ್ಥವನ್ನು ಕಾಪಾಡುವ ಜವಾಬ್ದಾರಿ ಅರಸನದಾಗಿತ್ತು ಎಂಬುದನ್ನು ಈ ವಚನದ ಮೂಲಕ ತಿಳಿಸಿದ್ದಾನೆ.

ಮರುಳ ಶಂಕರ ದೇವರ ವಚನದಲ್ಲಿಯೂ ಸಹ ತಳವಾರನ ಕುರಿತಾದ ಒಂದು ವಚನದಲ್ಲಿ ತ್ರಿಭುವನ ಗಿರಿಯರಸರು ತ್ರೈಲೋಕ ಪಟ್ಟಣಕ್ಕೆ ದಾಳಿಯನ್ನು ಮಾಡಿ, ಆ ಪಟ್ಟಣವನ್ನು ಸುತ್ತಿ ಮುತ್ತಿಕೊಂಡರು. ಏಳು ದುರ್ಗಗಳನ್ನು, ಅರಮನೆಯನ್ನು ಹೊಕ್ಕು, ಅಲ್ಲಿದ್ದ ಅರಸು, ರಾಣಿಯರನ್ನು ಸೆರೆ ಹಿಡಿದು ಉಳಿದವರನ್ನು ಶಿಕ್ಷಿಸಿದ ಪರಿಯನ್ನು ಸಾರುವ ವಚನ ಇಂತಿದೆ.

“ಹನ್ನೆರಡು ಸಾವಿರ ರಾಣಿ ವಾಸದ ಸೆಜ಼ೆಯ ಹಿಡಿದರು
ಆನೆಯ ಸಾಲೆಗೆ ಕಿಚ್ಚನಿಕ್ಕಿದರು
ಕುದುರೆಗಳ ಕಾಲ ಹಱಿಯ ಹೋಯ್ದರು
ನಾಯಿಗಳ ಕಣ್ಣ ಕೆಡಿಸಿದರು
ಹಿರಿಯರಸನ ಹಿಡಿದುಕೊಂಡರು
ಇಪ್ಪತ್ತೈದು ತಳವಾಱರ ನಿರ್ಮೂಲಿಸಿ ಬಿಟ್ಟರು

ಮೂವರ ಮೂಗ ಕೊಯ್ದರು, ಒಬ್ಬನ ಶೂಲಕ್ಕೆ ಹಾಕಿದರು
ಆ ಪಟ್ಟಣದ ಪ್ರಜೆಗಳಿಗೆ ರಣಮಧ್ಯೆ ಮರಣವಾಯಿತ್ತು

.........................

ಶುದ್ಧ, ಸಿದ್ಧ, ಪ್ರಸಿದ್ಧ ಪ್ರಸನ್ನ ಪ್ರಭುವೇ ಶಾಂತ ಚೆನ್ನ
ಮಲ್ಲಿಕಾರ್ಜುನ ನಿಮ್ಮ ಧರ್ಮ, ನಿಮ್ಮ ಧರ್ಮ"[೫೪]

ಈ ವಚನದಲ್ಲಿ ಒಂದು ಪಟ್ಟಣದ ಆಡಳಿತ ವರ್ಗದಲ್ಲಿ ಅರಸ, ರಾಣಿ, ಕುದುರೆ, ಆನೆ, ಸೇವಕ, ತಳವಾರ, ಸೈನಿಕರಿರುವುದು ಸಹಜವಾಗಿತ್ತು. ಈ ವಚನದಲ್ಲಿ ತ್ರಿಭುವನ ಗಿರಿಯ ಅರಸನು ತ್ರೈಲೋಕ ಪಟ್ಟಣಕ್ಕೆ ಮುತ್ತಿಗೆ ಹಾಕಿದಾಗ ಅಲ್ಲಿನ ಅರಮನೆ, ರಾಣಿವಾಸದ ಸೈನಿಕರನ್ನು ಸೆರೆಹಿಡಿದರು. ಆನೆ, ಕುದುರೆ ಲಾಯಕ್ಕೆ ಬೆಂಕಿ ಹಚ್ಚಿದರು. ಕಾವಲಿದ್ದ ನಾಯಿಯ ಕಣ್ಣು ಕೀಳಿಸಿ ಪಟ್ಟಣದ ತಳವಾರರನ್ನು ಸೆರೆಹಿಡಿದು ಮೂವರ ಮೂಗನ್ನು ಕೊಯ್ದು, ಒಬ್ಬನನ್ನು ಶೂಲಕ್ಕೆ ಹಾಕಿದರು. ಇದರಿಂದಾಗಿ ಆ ಪಟ್ಟಣ ಪ್ರಜೆಗಳ ಜೀವನ ರಣಮಯವಾಯಿತು ಎಂದು ಅಂದಿನ ಪಟ್ಟಣ ಜೀವನದ ಸ್ಥಿತಿಗತಿ ಮತ್ತು ವೈರಿ ರಾಜ್ಯದವರ ದಾಳಿಗೆ ಸಿಕ್ಕು ಅನುಭವಿಸುವ ಹಿಂಸೆಗಳನ್ನು ಈ ವಚನಗಳ ಮೂಲಕ ತಿಳಿಯಬಹುದಾಗಿದೆ.

ಕಲ್ಯಾಣದ ವಚನ ಭಂಡಾರಿ ಶಾಂತರಸರ ಒಂದು ವಚನದಲ್ಲಿ ತಳವಾರರ ಕುರಿತಾಗಿ ಹೀಗೆ ಹೇಳಿದ್ದಾನೆ.

"ಪೃಥ್ವಿ ಆಕಾಶದ ಮಧ್ಯದಲ್ಲಿ ಖೇಚರ ಮಂಡಲ
ಆ ಮಂಡಲದರಸು ವಿಹಂಗರಾಜ
ಮರೀಚಿಕ ಪ್ರಧಾನ, ಮಹೀತಳ ತಳವಾಜಿ
ಇಂತೀ ಮಂಡಲ ಸುರಕ್ಷದಲ್ಲಿ ಇರುತಿರಲಾಗಿ"[೫೫]

ಎಂದು ಅಂದಿನ ಕಾಲದಲ್ಲಿ ಖೇಚರ ಮಂಡಲ ಎಂಬಲ್ಲಿ ವಿಹಂಗರಾಜ ಎಂಬ ಅರಸು ಮತ್ತು ಆತನ ಪ್ರಧಾನಿ ಮರೀಚಿಕ ಹಾಗೂ ಮಹೀತಳನೆಂಬ ತಳವಾರರಿಂದ ಆ ಮಂಡಲವು ಯಾವ ತೊಂದರೆಗಳಿಲ್ಲದೆ ಸುರಕ್ಷತೆಯಿಂದ ಕೂಡಿತ್ತು ಎಂಬುದನ್ನು ತನ್ನ ವಚನದ ಮೂಲಕ ಹೇಳಿದ್ದಾನೆ.

ಪಟ್ಟಣದ ತಳವಾರನ ಕಾರ್ಯ ತುಂಬಾ ಕಷ್ಟವಾಗಿತ್ತು. ಆಯಾ ಅರಸನ ಆಜ್ಞಾನುಧಾರಕನಾಗಿರುತ್ತಿದ್ದ ತಳವಾರನು ರಕ್ಷಣೆಯ ವಿಷಯದಲ್ಲಿ ತುಂಬಾ ಜಾಗರೂಕನಾಗಿರುತ್ತಿದ್ದ. ಅದಕ್ಕಾಗಿ ವೈರಿಗಳ ನಡವಳಿಕೆಗಳ ಬಗೆಗೆ ಗಮನ ಹರಿಸುತ್ತಿದ್ದ ತಳವಾರ, ಕೆಲವು ಸಂದರ್ಭಗಳಲ್ಲಿ ಹೋರಾಟಕ್ಕೆ ಧುಮುಕಿ ವೈರಿಗಳಿಂದ ಹತನಾಗುತ್ತಿದ್ದ ಎಂಬುದು ಇಂತಹ ವಚನ ಮತ್ತು ಶಾಸನ, ವೀರಗಲ್ಲುಗಳಿಂದ ತಿಳಿದುಬರುತ್ತದೆ.

ಕೋಲಶಾಂತಯ್ಯನ ವಚನಗಳಲ್ಲಿ ತಳವಾರನ ಕುರಿತಾಗಿ ಕೆಲವು ವಿವರಗಳು ದೊರೆಯುತ್ತವೆ.

“ಅಕಾಯದ ಕಣ್ಣಿನಲ್ಲಿ ನೋಡಿ ವಿಕಾರವಳಿದ ಸುಖಪಟ್ಟಣವ ಕಂಡೆ
ಆ ಪಟ್ಟಣದರಸಿಂಗೆ ಭಾವ ಕಾಲಿಲ್ಲ
ಪ್ರಧಾನಂಗೆ ಪಾರು ಪತ್ಯಕ್ಕೆ ನುಡಿವಡೆ ಬಾಯಿಲ್ಲ ತಳವಾಜಿ
ತಿರುಗುವುದಕ್ಕೆ ಕಣ್ಣಿಲ್ಲ”[೫೬]

ಈ ವಚನದಲ್ಲಿ ಒಂದು ಸುಖವಾದ ಪಟ್ಟಣದಲ್ಲಿ ಅದನ್ನಾಳುವ ಅರಸನಿಗೆ ತಿರುಗಾಡಿ ನೋಡಲು ಕಾಲಿಲ್ಲ. ಅಧಿಕಾರ ನಡೆಸುವ ಮುಖ್ಯಸ್ಥನಿಗೆ ಅಧಿಕಾರ ಚಲಾಯಿಸಲು ಬಾಯಿಲ್ಲ, ಅದರಂತೆ ತಳವಾರ ತಿರುಗುವುದಕ್ಕೆ ಕಣ್ಣಿಲ್ಲ ಎಂದು ಅರ್ಥೈಸುವ ಈ ವಚನದಲ್ಲಿ ಒಂದು ಪಟ್ಟಣದ ಆಡಳಿತವನ್ನು ವಿಡಂಬನಾತ್ಮಕವಾಗಿ ಚಿತ್ರಿಸಿದ್ದಾನೆ. ಅರಸನಾದವನು ಕಾಲಕಾಲಕ್ಕೆ ಪಟ್ಟಣವನ್ನು ತಿರುಗಾಡಿ ನೋಡಬೇಕು. ಮುಖ್ಯಧಿಕಾರಿಯಾದವನು ತಾನು ಹೊರಡಿಸುವ ಆದೇಶ, ಆಜ್ಞೆಗಳನ್ನು ಯುಕ್ತವಾಗಿ ಹೊರಡಿಸಬೇಕು. ಅದರಂತೆ ತಳವಾರನು ರಕ್ಷಣೆಗಾಗಿ ಕೇವಲ ತಿರುವುದುದಲ್ಲ, ಅಲ್ಲಿ ನಡೆಯುವ ನ್ಯಾಯ, ಅನ್ಯಾಯ, ಸತ್ಯ, ಅಸತ್ಯತೆಗಳನ್ನು ಕಣ್ಣಾರೆ ಕಂಡು ತಿಳಿಯಬೇಕು ಎನ್ನುವುದು ಈ ವಚನದ ಅರ್ಥವಾಗಿದೆ.

ಹಾವಿನ ಕಲ್ಲಯ್ಯಗಳ ವಚನದಲ್ಲಿ ಒಂದು ಕಡೆ ತಳವಾರನ ಕುರಿತಾದ ಪ್ರಸ್ತಾಪವಿದೆ.

“ಹೊಟ್ಟು ಜಾಲಿಯ ಮುಳ್ಳ ಕೊನೆಯ ಮೇಲೊಂದು
ಇಪ್ಪತ್ತೈದು ಅಗ್ರಹಾರ
ಅವ ಕಾವವ ಬಂಜೆಯ ಮಗ, ತಳವಾರ
ಅಷ್ಟದಳ ಕಮಲದ ವಿವೇಕದ ಕೂಟವ
ಮಹಾಲಿಂಗ ಕಲ್ಲೇಶ್ವರ ಬಲ್ಲ ಪಂಚ ಮಹಾಜ್ಯೋತಿಯ ಮಹಾ ಬೆಳಗನು”[೫೭]

ವಚನಕಾರರಲ್ಲಿ ಕ್ರಿ.ಶ.೧೬ನೇ ಶತಮಾನದಲ್ಲಿ ಜೀವಿಸಿದ್ದ ಎನ್ನಲಾದ ಸರ್ವಜ್ಞನ ವಚನಗಳಲ್ಲಿ ತಳವಾರ ಮತ್ತು ಆತನ ವೃತ್ತಿಯ ಕುರಿತಾಗಿ ಹೇಳಿದ್ದಾನೆ.

“ಎಳ್ಳುಗಾಣಿಗ ಬಲ್ಲ। ಸುಳ್ಳು ಸಿಂಪಿಗೆ ಬಲ್ಲ।
ಕಳ್ಳರನ್ನು ಬಲ್ಲ ತಳವಾರ, ಬಣಜಿಗನು।
ಎಲ್ಲಾವನು ಬಲ್ಲ ಸರ್ವಜ್ಞ”[೫೮]

ತಳವಾರನ ಬುದ್ದಿ ಪಾಂಡಿತ್ಯವನ್ನು ಹೇಳುವ ಈ ವಚನದಲ್ಲಿ ಗಾಣಿಗನು ಎಳ್ಳಿನ ಗುಣಮಟ್ಟವನ್ನು ಹೇಳಬಲ್ಲ, ಸಿಂಪಿಗನು ಸುಳ್ಳು ಹೇಳುವವರನ್ನು ಬಲ್ಲವನಾಗಿದ್ದ. ಅದೇ ರೀತಿ ತಳವಾರನು ಕಳ್ಳರನ್ನು ಮತ್ತು ಅವರ ಕಳ್ಳತನದ ಮಾರ್ಗವನ್ನು ಬಲ್ಲವನಾಗಿದ್ದನೆಂಬುದನ್ನು ಅಂದಿನ ತಳವಾರನ ಕುರಿತಾಗಿ ಪ್ರಸ್ತಾಪಿಸುತ್ತಾರೆ. ಮತ್ತೊಂದು ವಚನದಲ್ಲಿ

“ಅಳಿಯೂರ ತಳವಾರ। ಕಳೆಯುಳ್ಳ ಸೂಳೆಯೂ।
ಹೊಳಲ ಸುಂಕಿಗನು, ಹಳೆನಾಯಿ, ಯಾಚಕನು।
ತೊಲಗುವವರಲ್ಲಿ ಸರ್ವಜ್ಞ॥”[೫೯]

ಅಳಿಯೂರಿನ ತಳವಾರ, ಮುಖದ ಮೇಲೆ ಕಳೆ, ಕಾಂತಿಯುಳ್ಳ ಸೂಳೆಯು, ಸುಂಕದವನು, ಹಳೆಯ ನಾಯಿ, ಭಿಕ್ಷುಕರು ಇವರು ಒಮ್ಮೆ ಬೆಂಬತ್ತಿದರೆ ಬಿಡುವುದಿಲ್ಲ ಎಂಬರ್ಥವಾಗುವ ಈ ವಚನದಲ್ಲಿ ತಳವಾರನ ಕರ್ತವ್ಯ ಹಾಗೂ ಆತನು ಕೈಗೊಂಡ ಕೆಲಸವನ್ನು ಬೆಂಬಿಡದೇ ಮಾಡುವವನಾಗಿದ್ದನೆಂಬುದು ತಿಳಿದುಬರುತ್ತದೆ.

“ಬಳ್ಳಿ ತೋಟಿಗಬಲ್ಲ। ಎಳ್ಳು ಗಾಣಿಗಬಲ್ಲ।
ಕಳ್ಳರನು ಬಲ್ಲ ತಳವಾರ, ಸೂಳೆ ಹಣ।
ನುಳ್ಳನಂಬಿಹಳು ಸರ್ವಜ್ಞ”[೬೦]

ಬಳ್ಳಿಗಳ ಬಗ್ಗೆ ತೋಟದ ರೈತನು ಬಲ್ಲವನಾಗಿರುತ್ತಾನೆ. ಅದೇ ರೀತಿ ಎಳ್ಳುಗಳ ಗುಣಮಟ್ಟವನ್ನು ಗಾಣಿಗನು ಬಲ್ಲವವನಾಗಿರುತ್ತಾನೆ. ಹಾಗೆಯೇ ತಳವಾರನು ಸಹ ಕಳ್ಳರನ್ನು ಬಲ್ಲವನಾಗಿದ್ದ. ಸೂಳೆಯೂ ಹಣವುಳ್ಳವರನ್ನು ಬಲ್ಲವಳಾಗಿದ್ದಳು. ಇಲ್ಲಿ ಇವರ ವೃತ್ತಿಯ ಬಗೆಗಿನ ತಜ್ಞತೆ ಹಾಗೂ ಅನುಭವ ಹಾಗೂ ಅವರನ್ನು ಚತುರರಂತೆ ಮಾಡಿದ್ದವು ಎಂಬುದನ್ನು ಈ ವಚನದಲ್ಲಿ ಸರ್ವಜ್ಞನು ಹೇಳಿದ್ದಾನೆ.

ಈತನ ಮತ್ತೊಂದು ವಚನದಲ್ಲಿ ತಳವಾರನಾದವನು ಖಡ್ಗಧರಿಸಿ ಮೆರೆಯುವಂತಿಲ್ಲ, ಅದರಂತೆ ಸಂಸಾರದಲ್ಲಿ, ಸಮಾಜದಲ್ಲಿ ಯುಕ್ತಿಯಿಂದ ಬಾಳಬೇಕು ಎಂದು ಒಂದು ವಚನದಲ್ಲಿ ಈ ರೀತಿಯಾಗಿ ಹೇಳಿದ್ದಾನೆ.

“ಕತ್ತಿಯನು ಧರಿಸಿದಗೆ। ಯುಕ್ತಿಯೊಂದಿರಬೇಕು।
ಕುತ್ತಗಳು ಬಿಡದೆ ಬರುತಿರಲು, ಕತ್ತಿಯ।
ನ್ನೆತ್ತಿ ಹೊಯ್ಯೆಂದ ಸರ್ವಜ್ಞ॥[೬೧]

ಕತ್ತಿಯನು ಹಿಡಿದು ಯುಕ್ತಿಯಿಂದ ನಡೆದು, ಕುತ್ತುಗಳು ಬಂದಾಗ ಅವುಗಳನ್ನು ಕತ್ತಿಯಿಂದಲೇ ಹರಸು ಎಂದು ತಳವಾರನ ಕರ್ತವ್ಯವನ್ನು ತಿಳಿಹೇಳಿದಂತಿದೆ. ಇದೇ ರೀತಿ ಮತ್ತೊಂದು ವಚನದಲ್ಲಿ ತಳವಾರನಿಗೆ ತಿಳಿಹೇಳಿದಂತೆ

“ಅರಸು ಕೊಲುವರೆ, ಮಂತ್ರಿ ಕರೆಸಿ ಕಷ್ಟವ ಕೊಡಲು
ಬೆರೆಸಿ ತಳವಾರ ಬೀಳಲ್ಕೆ ಪರಿಹರಿಪ।
ರಾರಿನ್ನು ಹೇಳು। ಸರ್ವಜ್ಞ॥[೬೨]

ಜನರನ್ನು ಕಾಯುವ ಸ್ವತಃ ಅರಸನೇ ಕೊಲ್ಲಲು ನಿಂತರೆ, ಮಂತ್ರಿಯು ಉಪಾಯ ಹೇಳಿ ಉಳಿಸುವ ಬದಲು ಸ್ವತಃ ಕಷ್ಟಕೊಡಲು ಪ್ರಾರಂಭಿಸಿದರೆ, ಒಮ್ಮಲೇ ಕಾರಣವಿಲ್ಲದೆ ತಳವಾರನು ಮೈಮೇಲೆ ಬಂದರೆ ಪ್ರಜರನ್ನು ಪಾರು ಮಾಡುವವರು ಯಾರು? ಎಂದು ಕಾಯುವ ಅರಸ, ಉಪಾಯ ತಿಳಿಸುವ ಮಂತ್ರಿ, ಊರ ಕಾಯುವ ತಳವಾರರು ತಾಳ್ಮೆ ಮತ್ತು ಸಜ್ಜನ ನಡವಳಿಕೆಯಿಂದ ಜನರನ್ನು ರಕ್ಷಿಸಬೇಕೆಂದು ತಿಳಿ ಹೇಳಿದ್ದಾನೆ.

ತಳವಾರನು ಒಂದು ಜನ ಸಮೂಹ, ಸಮಾಜದ ನಡುವೆ ಜೀವಿಸುತ್ತಿದ್ದ ವ್ಯಕ್ತಿ. ಈತನು ಸಜ್ಜನರಿಗೆ ಸಜ್ಜನ, ದುರ್ಜನರಿಗೆ ದುಷ್ಟನಾಗಿದ್ದ. ಈತನ ಹಗೆ ಕಟ್ಟಿಕೊಂಡಿರೆ ಅವರಿಗೆ ನೆಮ್ಮದಿ ಇಲ್ಲ ಎಂಬುದನ್ನು ತನ್ನ ಒಂದು ವಚನದಲ್ಲಿ ಹೀಗೆ ಹೇಳಿದ್ದಾನೆ.

"ದಾರಿಯ ಮನೆ ಹೊಲ್ಲ। ಜಾರೆಯ ನೆರೆ ಹೊಲ್ಲ।
ಊರ ಕಾಯುವವನ ಹಗೆ ಹೊಲ್ಲ, ಮನೆಯೊಳಗೆ
ಹೋರಾಟ ಹೊಲ್ಲ ಸರ್ವಜ್ಞ॥"[೬೩]

ಜನರು ಹೋಗಿಬರುವ ದಾರಿಯಲ್ಲಿ ಮನೆ ಮಾಡಿಕೊಂಡಿರಬಾರದು. ಅದರಿಂದ ಅತಿಥಿಗಳ ತೊಂದರೆ, ವೇಶ್ಯೆ ಅಕ್ಕಪಕ್ಕದಲ್ಲಿ ವಾಸಿಸಬಾರದು, ಅದರಂತೆ ತಳವಾರನ ಜೊತೆ ವೈರತ್ವವನ್ನು ಕಟ್ಟಿಕೊಳ್ಳಬಾರದು ಎಂದು ಆತನ ಗುಣವನ್ನು ಈ ವಚನದ ಮೂಲಕ ಸಾರಿದ್ದಾನೆ.

ಹೀಗೆ ಸಮಾಜವನ್ನು ತಿದ್ದುವ ಕೆಲಸವನ್ನು ವಚನಕಾರರು ತಮ್ಮ ವಚನದಲ್ಲಿ ಮಾಡಿದ್ದಾರೆ. ಹಾಗೇನೇ ಇವರ ವಚನಗಳಲ್ಲಿ ಅಂದಿನ ವಿವಿಧ ವೃತ್ತಿ ಬಾಂಧವರನ್ನು ಹಾಗೂ ಆಯಾ ವೃತ್ತಿಯನ್ನು ವಸ್ತುನಿಷ್ಠ ಸಮಾಜ ಪರಿಕಲ್ಪನೆಯಲ್ಲಿ ಅವರ ಕರ್ತವ್ಯನಿಷ್ಠೆ ಮತ್ತು ಸಮುದಾಯದೊಂದಿಗಿನ ಸಹಭಾಗಿತ್ವದ ಕುರಿತಾದ ವಿಷಯಗಳನ್ನು ವಚನಗಳಲ್ಲಿ ಕಾಣಬಹುದಾಗಿದೆ. ಅದೇ ರೀತಿ ತಳವಾರನ ಕಾರ್ಯ ಕರ್ತವ್ಯ ಮತ್ತು ನಿಷ್ಠೆಯ ಕುರಿತಾಗಿ ಹಲವಾರು ವಚನಕಾರರು ತಮ್ಮ ವಚನದ ಮೂಲಕ ಪ್ರಸ್ತುತಪಡಿಸಿದ್ದಾರೆ. ತಳವಾರ ಒಂದು ಸಾಮಾಜಿಕ ಜೀವನದ ಅವಿಭಾಜ್ಯ ಅಂಗವಾಗಿ ಅಂದಿನ ಗ್ರಾಮಾಡಳಿತದಲ್ಲಿ ಒಂದು ಜವಾಬ್ದಾರಿಯುತ ಕಾರ್ಯವನ್ನು ನಿರ್ವಹಿಸುತ್ತಿದ್ದ. ಈತನ ಕಾರ್ಯಬಾಹುಳ್ಯತೆ, ಅಂದಿನ ಸಮಾಜದಲ್ಲಿ ಪ್ರೇರಣೆಯಾಗಿತ್ತು. ಅದಕ್ಕಾಗಿ ವಚನಕಾರರು ತಮ್ಮ ವಚನಗಳಲ್ಲಿ ಸಮಕಾಲೀನ ಸಮಾಜದ ಅಂಕು ಡೊಂಕುಗಳನ್ನು ತಿದ್ದುವುದರ ಜೊತೆಯಲ್ಲಿ ಒಂದು ಸ್ವಾಸ್ಥ ಸಮಾಜ ನಿರ್ಮಾಣ ಮಾಡುವ ದೃಷ್ಟಿಕೋನವನ್ನು ಹೊಂದಿದ್ದರು. ಅದಕ್ಕಾಗಿ ಊರಲ್ಲಿ ಬರುವ ಗೌಡ, ಶಾನುಭೋಗ, ತಳವಾರ, ತೋಟಿಗಳನ್ನು ಸಂದರ್ಭಕ್ಕೆ ತಕ್ಕಂತೆ ಇವರನ್ನು ಬಳಸಿಕೊಂಡು ವಚನಗಳನ್ನು ರಚಿಸಿದ್ದಾರೆ. ಗ್ರಾಮಾಧಿಕಾರಿಗಳಿಂದಾಗುವ ಸರಿ ತಪ್ಪುಗಳನ್ನು ತಿಳಿ ಹೇಳುವ ಕಾರ್ಯವನ್ನು ವಚನಗಳಲ್ಲಿ ಮಾಡಿರುವುದನ್ನು ಕಾಣಬಹುದು. ಈ ಮೂಲಕವಾಗಿ ತಳವಾರರು ಸಮಾಜದಲ್ಲಿ ಬೀರಿದ್ದ ಪ್ರಭಾವ, ಪ್ರೇರಣೆ ಹಾಗೂ ಅವರು ಜನರನ್ನು ಒಳಗೊಳ್ಳುವ ರೀತಿಯನ್ನು ಅರಿಯಬಹುದು

## ೩.೩. ಜಾನಪದಲ್ಲಿ ತಳವಾರರು

ಜನಪದರ ಜೀವನ ಕ್ರಮವೇ 'ಜಾನಪದ'. ಜಾನಪದದ ಬಹು ಮುಖ್ಯ ಪ್ರಕಾರವೆಂದರೆ ಜಾನಪದ ಸಾಹಿತ್ಯ, ಸಮಾಜದ ಜನವರ್ಗದಿಂದ ಮತ್ತು ಹಲವಾರು ಜನಾಂಗಗಳಲ್ಲಿ ಮೌಖಿಕ ಸಂಪ್ರದಾಯಗಳಲ್ಲಿಯೇ ಉಳಿದುಕೊಂಡು ಬರುತ್ತಿರುವ ಸಾಹಿತ್ಯ ಇದು. ನಿತ್ಯ ಜೀವನದ ಕಷ್ಟ, ನಷ್ಟ, ಸುಖ ದುಃಖ, ಆನಂದ ಕ್ಷಣಗಳ ಸ್ಥಿತಿಯನ್ನು ಸಾಹಿತ್ಯ ರೂಪ ಪಡೆದಿದೆ. ಬದುಕಿನ ನೋವು ನಲಿವುಗಳನ್ನೇ ಮೈಗೂಡಿಸಿಕೊಂಡು ಬೆಳೆದು ಬಂದ ಪ್ರಕಾರವಿದು. ಸಾಮಾನ್ಯ ಜನರ ಸಂಸ್ಕೃತಿಯೇ ಇಲ್ಲಿ ಪ್ರತಿಬಿಂಬಿತವಾಗಿರುತ್ತದೆ. "ಗ್ರಾಮೀಣ ಜನ ಜೀವನದ ಸಾಮಾಜಿಕ ವಿವರಗಳು ಹಾಗೂ ಸಾಮಾಜಿಕವಾಗಿ ರೂಢಿಗೊಂಡ ಹಬ್ಬ-ಹರಿದಿನಗಳು, ರೂಢಿ-ಸಂಪ್ರದಾಯಗಳು ಮೊದಲಾದ ವಿವಿಧ ಆಯಾಮಗಳು ಈ ಸಾಹಿತ್ಯದಲ್ಲಿ ಉಸಿರಿನಂತೆ ಬೆಸೆದಿವೆ."[೬೪] ಹೀಗೆ ನಿತ್ಯ ಜೀವನದ ಅನುಭವಗಳನ್ನು ಮಾತಿನಿಂದ ಸಾಹಿತ್ಯಕ್ಕೇರಿಸಿ ಪೀಳಿಗೆಯಿಂದ ಪೀಳಿಗೆಗೆ ಅದನ್ನು ವರ್ಗಾಹಿಸುತ್ತಾ ಬಂದಿದೆ.

ಪ್ರತಿಯೊಬ್ಬ ವ್ಯಕ್ತಿಯೂ ಒಂದು ಸಾಮಾಜಿಕ ಜೀವನವನ್ನು ಜಾನಪದದಲ್ಲಿ ಕಳೆದಿರುತ್ತಾನೆ. ಆ ಮೂಲಕ ತನ್ನ ವ್ಯಕ್ತಿತ್ವವನ್ನು ರೂಪಿಸಿಕೊಳ್ಳುತ್ತಾನೆ. ಹೀಗೆ ಜಾನಪದದಿಂದ ಕ್ರಿಯಾಶೀಲ ಗುಣ ಹಾಗೂ ನಡವಳಿಕೆಗಳು, ಆಚಾರ-ವಿಚಾರಗಳನ್ನು ಕಲಿಯುತ್ತಾನೆ. ಆ ಮೂಲಕ ಒಂದು ಸಂಸ್ಕೃತಿಯ ಜ್ಞಾನ, ಕಲ್ಪನೆಗಳು ಒಡಮೂಡಿ ಮಾನವನ ವರ್ತನೆಗಳನ್ನು ನಿಯಂತ್ರಿಸುತ್ತದೆ. ಜಾನಪದವು ಭಿನ್ನ ದೃಷ್ಟಿಗಳಿಂದ ಸಮಾಜದಲ್ಲಿ ಆರೋಗ್ಯಕರ ವಾತಾವರಣವನ್ನು ರೂಪಿಸಿ, ಜನರಲ್ಲಿರುವ ಅಂತರ್ಗತ ಮೌಲ್ಯವನ್ನು ರುಜುವಾತುಪಡಿಸುತ್ತದೆ. ಇದರ ವ್ಯಾಪ್ತಿ ಹೆಚ್ಚಿದಂತೆ ಜ್ಞಾನ-ವಿಜ್ಞಾನಗಳು ಹೆಚ್ಚಾಗಿದ್ದ ಕಾಲ ಒಂದಿತ್ತು. ಇಂದಿನ ಆಧುನೀಕತೆಯ ಭರಾಟೆಗೆ ಸಿಕ್ಕ ಜನ ಸಮುದಾಯ ಇಂತಹ ಜಾನಪದ ಸಂಸ್ಕೃತಿಯಿಂದ ದೂರ ಸರಿಯುತ್ತಿದ್ದಾರೆ.

ಜಾನಪದವು ಸಂಸ್ಕೃತಿಯ ಒಂದು ಭಾಗವಾಗಿ ಮಾನವನ ಸೈದ್ಧಾಂತಿಕ ನಿಲುವುಗಳಿಗೆ ಆಶಯವಾಗಿತ್ತು. ಸಮಾಜದಲ್ಲಿನ ವಿವಿಧ ಜನ ಸಮೂಹ ಮತ್ತು ಅವುಗಳ ವೃತ್ತಿ ಆಧಾರಿತ ಬಂಧುತ್ವ ವ್ಯವಸ್ಥೆ ಸಾಮಾಜಿಕ ರಚನೆ, ರಾಜಕೀಯ, ಆರ್ಥಿಕ, ಧರ್ಮ, ಜಾತಿ, ಭಾಷೆ ಮುಂತಾದ ವಿಷಯಗಳ ಮೇಲೆ ಬೆಳಕು ಚೆಲ್ಲುವ ಕಾರ್ಯ ಜಾನಪದ ಸಾಹಿತ್ಯ ಒಳಗೊಂಡಿತ್ತು. "ಜಾನಪದ ಸಾಹಿತ್ಯ ಉತ್ತರ ಕರ್ನಾಟಕದ ಆಡುಭಾಷೆಯ ಸತ್ವ ಹೊಂದಿದ್ದರೂ ಕಾವ್ಯಕ್ಕೆ ಒಂದು ಪರಿಮಿತವಾದ ನಾದಮಯತೆ ಛಂದೋಬದ್ಧತೆಗಳಿಂದ ಅದಕ್ಕೆ ಒಂದು ವಿಶಿಷ್ಟ ಬಣ್ಣ ಬಂದಿದೆ. ಅಂದರೆ ಇಲ್ಲಿ ಭಾಷೆ ತನ್ನ ಮೂಲ ವ್ಯವಹಾರಿಕತೆಯನ್ನು ನೀಗಿಸಿಕೊಂಡು, ಒಂದು ಅನುಭವ ಗಾಢವಾಗಿ ಮೈತಳೆದುಕೊಳ್ಳುವ ಸಂವೇದನಾಶೀಲ ಕಲಾತ್ಮಕ ಭಾಷೆಯಾಗಿ ಪರಿಣಮಿಸುತ್ತದೆ"[೬೫] ಎನ್ನುವ ರಾ.ಗೌ.ಅವರ ಮಾತು ನಿಜವೆನಿಸುತ್ತಾರೆ.

ಸಂಸ್ಕೃತಿಯ ಅಧ್ಯಯನದಲ್ಲಿ ಜಾನಪದದ ಪಾತ್ರವನ್ನು ಕುರಿತು ವಿವರಿಸುವಾಗ ಸಂಸ್ಕೃತಿಯ ಕಲ್ಪನೆ ಮತ್ತು ಸಂಬಂಧಪಡುವ ಜ್ಞಾನ ವಿಷಯಗಳನ್ನು ಮೊದಲು ಗಮನಿಸಬೇಕಾಗುತ್ತದೆ. ಮಾನವನ ವರ್ತನೆಗಳ ಮೊತ್ತವನ್ನೇ ಸಂಸ್ಕೃತಿ ಎಂದು ಕರೆಯುವುದು ವಾಡಿಕೆ. ಈ ಸಾಂಸ್ಕೃತಿಕ ನಡವಳಿಕೆಗಳ ಅಭಿವ್ಯಕ್ತಿಯಾದ ಜಾನಪದವನ್ನು ಮಾನವಿಕ ದೃಷ್ಟಿಯಿಂದ ಒಂದು ಕಡೆ ನೋಡಿದರೆ ಇನ್ನೊಂದು ಕಡೆ ಸಮಾಜ ವಿಜ್ಞಾನಗಳ ದೃಷ್ಟಿಯಿಂದ ನೋಡುವುದು ಪ್ರಸ್ತುತ ದಿನಮಾನಗಳಲ್ಲಿ ಕಾಣಬಹುದಾಗಿದೆ. ಇಂತಹ ಒಂದು ಜಾನಪದೀಯ ವಿಷಯವನ್ನು ಭಾಷಾ ಪರಂಪರೆಯ ವಸ್ತುವಾಗಿ ತೆಗೆದುಕೊಂಡರೆ ಅದು ಸಾಹಿತ್ಯದ ಅಧ್ಯಯನಕ್ಕೆ ಅಧೀನವಾಗಿ ಪರಿಣಮಿಸುತ್ತದೆ. ಹಾಗೆಯೇ ಮಾನವ ಶಾಸ್ತ್ರದ ಭಾಗವಾಗಿ ತೆಗೆದುಕೊಂಡರೆ ಸಾಂಸ್ಕೃತಿಕ ಸಮಾಜದ ಒಂದು ಭಾಗವಾಗಿ ಉಳಿದುಕೊಳ್ಳುತ್ತದೆ. ಹೀಗೆ ಜಾನಪದವನ್ನು ಭಿನ್ನ ದೃಷ್ಟಿಗಳಿಂದ ಬೆಲೆ ಕಟ್ಟುವುದು ಆರೋಗ್ಯಕರ ವಿಧಾನವಾಗಿದ್ದು ಜಾನಪದದ ವಿಷಯಗಳಲ್ಲಿ ಅಂತರ್ಗತವಾಗಿರುವ ಮೌಲ್ಯವನ್ನು ರುಜುವಾತುಪಡಿಸಿದಂತಾಗುತ್ತದೆ.

"ಸಂಸ್ಕೃತಿಯಲ್ಲಿ ಜಾನಪದ ಒಂದು ಭಾಗವೆಂದಾಗ ಜಾನಪದಕ್ಕೂ ಸಂಸ್ಕೃತಿಯ ಇತರ ವಿಷಯಗಳಿಗೂ ಇರುವ ವ್ಯತ್ಯಾಸವನ್ನು ಗುರುತಿಸುವುದು ಸೈದ್ಧಾಂತಿಕವಾಗಿ ಮುಖ್ಯವೆನಿಸುತ್ತದೆ. ಇದು ಜಾನಪದಕ್ಕೂ ಮಾನವ ಕುಲಶಾಸ್ತ್ರಕ್ಕೂ ಇರುವ ವ್ಯತ್ಯಾಸವೆಂದೂ ಮತ್ತು ಮಾನವಶಾಸ್ತ್ರದ ದೃಷ್ಟಿಯಿಂದ ಜಾನಪದದ ಪರಿಮಿತಿಗೆ ಆಧಾರವೆಂದೂ ತಿಳಿಯಲಾಗಿದೆ."[೬೬] ನಿರ್ದಿಷ್ಟ ಜನಸಮೂಹದ ವೃತ್ತಿ ಮತ್ತು ಕುಲ ಕಸುಬುಗಳ ಆಚಾರ–ವಿಚಾರ, ರೀತಿ–ನೀತಿಗಳು ಹಾಗೂ ಸಂಪ್ರದಾಯ ಬಂಧುತ್ವ, ವಿಚಾರ, ವಿವಾಹ ಮತ್ತು ಕುಟುಂಬ ವ್ಯವಸ್ಥೆಯಂತಹ ಸಾಮಾಜಿಕ ರಚನೆ, ರಾಜಕೀಯ ಮತ್ತು ಆರ್ಥಿಕ ವ್ಯವಸ್ಥೆ, ಧರ್ಮ, ಭಾಷೆ ಮುಂತಾದವು ಸಂಸ್ಕೃತಿಯ ವಿವಿಧ ಮುಖಗಳಾಗಿ ಗೋಚರಿಸುತ್ತವೆ. ಅದಕ್ಕಾಗಿ ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಜಾನಪದ ಕಥೆ, ಗಾದೆ, ತ್ರಿಪದಿ, ಲಾವಣಿಗಳಂತಹ ಶಾಬ್ದಿಕ ಅಭಿವ್ಯಕ್ತಿಗಳನ್ನು ಹಾಗೂ ಕೆಲವು ನಂಬಿಕೆ, ಆಚರಣೆ, ಸಂಗೀತ–ನೃತ್ಯಗಳಂತಹ ಶಾಬ್ದಿಕವಲ್ಲದ ರೂಪಗಳನ್ನು ಒಳಗೊಂಡಂತೆ ಅಧ್ಯಯನ ಕೈಗೊಳ್ಳುವುದು ಸೂಕ್ತವೆನಿಸುತ್ತದೆ.

ಒಂದು ಜನಾಂಗದ ವೃತ್ತಿಯನ್ನರಿಯಲು ಅವರ ಜಾನಪದ ಸಂಪತ್ತನ್ನು ಕೂಲಂಕಷವಾಗಿ ಅಭ್ಯಾಸಿಸಬೇಕಾದುದು ಅವಶ್ಯಕವಾಗಿದೆ. ಆಯಾ ಜನವರ್ಗವು ರೂಢಿಸಿಕೊಂಡು ಬಂದ ಸಂಸ್ಕೃತಿ ಅಂಶಗಳನ್ನು ಸಾಹಿತ್ಯ ರೂಪದಲ್ಲಿ ಉಳಿಸಿ, ಬೆಳೆಸಿಕೊಂಡು ಬಂದಿರುವ ಜಾನಪದ ಸಾಹಿತ್ಯವನ್ನು ಅಧ್ಯಯನ ಮಾಡಿದರೆ, ತಳವಾರರ ಕುರಿತಾದ ಸಂಸ್ಕೃತಿ, ಆಚಾರ–ವಿಚಾರ ಹಾಗೂ ಜನರೊಂದಿಗಿನ ಅವರ ಸಂಬಂಧ ತಿಳಿಯುತ್ತದೆ. ಈ ಜನರ ಮೇಲೆ ಸೃಷ್ಟಿಯಾದ ಹಾಗೂ ಬಳಕೆಯಾದ ತ್ರಿಪದಿ

ಗಾದೆ, ಒಗಟು, ನುಡಿಗಟ್ಟು, ಲಾವಣಿ, ಹಂತಿಪದ, ಜಾನಪದ ಆಚರಣೆ ಮುಂತಾದವುಗಳನ್ನು ಚರ್ಚೆಗೆ ಒಳಪಡಿಸುವುದರ ಮೂಲಕ ಅಧ್ಯಯನ ಕೈಗೊಳ್ಳುವುದು ಉಚಿತವೆನಿಸುತ್ತದೆ.

**ಗಾದೆ**

ಜನಪದ ಸಾಹಿತ್ಯದಲ್ಲಿ ಗೀತೆ, ಕಥೆ, ಒಗಟುಗಳಂತೆ ಗಾದೆಗಳೂ ಒಂದು ವಿಶಿಷ್ಟವಾದ ಪ್ರಕಾರವಾಗಿದೆ. ಜನಸಾಮಾನ್ಯರ ಜೀವನಾನುಭವದ ಮೂಸೆಯಲ್ಲಿ ಹದಗೊಂಡು ಇವು ರೂಪಿತಗೊಂಡಿವೆ. ಸಾಮಾನ್ಯ ಜನರ ಚಿಂತನೆಗಳು ಬಹಳ ಪರಿಣಾಮಕಾರಿಯಾಗಿ ಗಾದೆಗಳ ಮೂಲಕ ಅಭಿವ್ಯಕ್ತಗೊಂಡಿವೆ. ಅದಕ್ಕಾಗಿ ಗಾದೆಯು ಮಾನವ ಸಮಾಜದಷ್ಟೇ ಪುರಾತನವಾದು ದಾಗಿದೆ. 'ಗಾದೆ ಇರದ ಭಾಷೆ ಇಲ್ಲ, ಗಾದೆ ಬರದ ಮನುಷ್ಯನಿಲ್ಲ' ಎಂಬ ಮಾತಿನಂತೆ ಗಾದೆ ಇಲ್ಲದ ಜನಾಂಗವಿಲ್ಲ ಎಂದರೆ ತಪ್ಪಾಗಲಾರದು. ಜನರು ತಾವೇ ನಿರ್ಮಿಸಿ, ರೂಪಿಸಿ, ಪಾಲಿಸಿ ಕೊಂಡು ಬಂದ ಸಂವಿಧಾನದಂತೆ ಗಾದೆಗಳು ಇಂದು ನಮ್ಮಲ್ಲಿ ಪ್ರಚಲಿತದಲ್ಲಿವೆ. ಹತ್ತಾರು ಮಾತುಗಳಲ್ಲಿ ತಿಳಿಸಬೇಕಾದನ್ನು ಒಂದೇ ಮಾತಿನಲ್ಲಿ ಸೂಚಿಸುವ ಪದವೇ ಗಾದೆ. ಅದಕ್ಕಾಗಿ ಇದನ್ನು ಸಾವಿರ ಮಾತಿನ ಸರದಾರ ಎಂದು ಕರೆಯುತ್ತಾರೆ.

ಗಾದೆಗಳು ಸಂಕ್ಷಿಪ್ತವಾಗಿರುತ್ತವೆ. ಇವುಗಳು ಸಂಪ್ರದಾಯ, ಆಚಾರ-ವಿಚಾರ, ನಂಬಿಕೆ, ಕಸುಬು, ಪ್ರಾಣಿ, ವಸ್ತು, ಘಟನೆ, ಸನ್ನಿವೇಶ, ಸಂಗತಿಗಳನ್ನು ಪ್ರತಿಮೆಗಳನ್ನಾಗಿಸಿಕೊಂಡು ಗಾದೆ ಗಳು ಬಳಕೆಯಲ್ಲಿವೆ. ಪಟ್ಟಣಗಳಿಗಿಂತ ಗ್ರಾಮೀಣ ಬದುಕಿನ ಚಿತ್ರಣ ಹಾಗೂ ಅಲ್ಲಿನ ಸಂಸ್ಕೃತಿಯನ್ನು ಅನಾವರಣಗೊಳಿಸುವ ಕೆಲಸ ಗಾದೆಗಳಿಂದಾಗಿದೆ. ಸಮಾಜದಲ್ಲಿನ ಆಚಾರ-ಅನಾಚಾರ, ವಂಚನೆ, ಮೇಲು-ಕೀಳುಗಳ ಭಾವನೆಗಳನ್ನು ಪ್ರತಿಭಟಿಸುವ ರೀತಿಯಲ್ಲಿ ಗಾದೆಗಳು ಹುಟ್ಟಿಕೊಂಡಿವೆ.

ಗಾದೆಗಳು ಒಂದು ಜನಾಂಗದ ಸಾಂಸ್ಕೃತಿಕ ಬದುಕನ್ನು ಸ್ಪಷ್ಟವಾಗಿ ಚಿತ್ರಿಸುವ ಅಲಿಖಿತ ಸಾಹಿತ್ಯವಾಗಿದೆ. "ಇಡೀ ಜನ ಸಮೂಹದ ಆಶೋತ್ತರಗಳನ್ನು ಮತ್ತು ಆ ಜನರ ಬದುಕಿನ ವಿಧಾನವನ್ನು ಭಾಷೆಯ ಕುಶಲತೆಯನ್ನು ಕಲಾತ್ಮಕವಾಗಿ ಸಂಗ್ರಹಿಸುವ ಪ್ರಕಾರವೇ ಗಾದೆ"[೬೨] ಎಂದು ರಾಮಚಂದ್ರಗೌಡರು ಅಭಿಪ್ರಾಯಪಡುತ್ತಾರೆ. ಇವರ ಈ ಮಾತಿನಂತೆ ಗಾದೆ ಜನರೊಳಗೆ ಅರಿಯದೇ ಬೆಸೆದುಕೊಂಡ ಭಾಷೆಯ ಆಸ್ತಿಯಾಗಿದೆ. 'ವೇದ ಸುಳ್ಳಾದರೂ ಗಾದೆ ಸುಳ್ಳಾಗುವುದಿಲ್ಲ' ಎಂಬ ಮಾತಿನಂತೆ ವೇದಗಳು ನೀತಿ ಪ್ರಧಾನ, ಧರ್ಮಪ್ರಧಾನವಾದಂತೆ, ಗಾದೆಗಳು ಅನುಭವ ನೀತಿ ಕಥನಗಳಾಗಿವೆ. ಒಂದೊಂದು ವೃತ್ತಿ ಜನಾಂಗದ ಗುಂಪಿನಲ್ಲಿ ಆಯಾ ಪರಿಸರಕ್ಕೆ ತಕ್ಕಂತೆ ಅವರ ಸಂಸ್ಕೃತಿ, ಆಚಾರ-ವಿಚಾರಗಳನ್ನು ತಿಳಿಸುತ್ತವೆ.

ಸಾಮಾನ್ಯವಾಗಿ ಸಮಾಜದಲ್ಲಿ ಪ್ರಚಲಿತದಲ್ಲಿರುವ ಹಲವಾರು ಗಾದೆಗಳಲ್ಲಿ ತಳವಾರರ ಕುರಿತಾಗಿ ಗಾದೆಗಳು ಸೃಷ್ಟಿಯಾಗಿವೆ. ಗ್ರಾಮದ ರಕ್ಷಣೆಯ ಜವಾಬ್ದಾರಿ ಹೊತ್ತಿದ್ದ ತಳವಾರ

ಯಾವ ಕಾರ್ಯ ಕೆಲಸಕ್ಕೂ ಸಿದ್ಧನಿದ್ದನೆಂಬ ಮಾತಿಗೆ "ಗ್ರಾಮ ಶಾಂತಿಗೆ ತಳವಾರ ತಲೆ ಬೋಳಿಸಿಕೊಂಡಂತೆ" ಎಂಬ ಮಾತಿನಲ್ಲಿ ವಿಡಂಬಣೆ ವ್ಯಕ್ತವಾದರೂ, ತಳವಾರನ ಕರ್ತವ್ಯ ಪ್ರಜ್ಞೆ ಹಾಗೂ ಜವಾಬ್ದಾರಿಗಳು ಆತನನ್ನು ಯಾವ ಕಾರ್ಯಕ್ಕಾದರೂ ಬಳಸುವ ಪದ್ಧತಿಗೆ ಹೊಂದಿಕೊಂಡಂತೆ, ತಾನೇ ಶಾಂತಿ ಕಾಪಾಡಲು ತಲೆ ಬೋಳಿಸಿಕೊಂಡಂತೆ ಎಂಬ ಅರ್ಥದಲ್ಲಿ ಗಾದೆ ಬಳಕೆಯಾಗಿದೆ.

"ಅಡಿವ್ಯಾಗ ಜಾಲಿ ಸೊಕ್ಕಬಾರದು ಊರಾಗ ಕಬ್ಬಿಲಗ್ಯಾ ಸೊಕ್ಕ ಬಾರದು"[೬೮]

ಈ ಗಾದೆಯಲ್ಲಿ ಬಳಕೆಯಾದ ಕಬ್ಬಿಲಗ್ಯಾ ಎಂಬುದು ತಳವಾರಿಕೆ ವೃತ್ತಿ ಮಾಡುವ ಇನ್ನೊಂದು ವರ್ಗದ ಜನರನ್ನು ಸೂಚಿಸುತ್ತದೆ. ಅಡವಿಯಲ್ಲಿ ಜಾಲಿ ಬೆಳೆಯಲು ಬಿಟ್ಟರೆ ಅದು ದಿನೇ ದಿನೇ ತನ್ನ ವಿಸ್ತರತೆಯನ್ನು ಹೆಚ್ಚಿಸಿಕೊಳ್ಳುತ್ತಾ ಹೋಗುತ್ತದೆ. ಅದನ್ನು ಮುಂದೊಂದು ದಿನ ಅಳಿಯಬೇಕೆಂದರೂ ಕಷ್ಟಸಾಧ್ಯ. ಅದರಂತೆ ಊರಲ್ಲಿ ತಳವಾರನಾದವನು ಜವಾಬ್ದಾರಿಯನ್ನು ಹೊತ್ತವನು, ಈತನ ಅಧಿಕಾರ ಮತ್ತು ಕರ್ತವ್ಯಗಳಿಂದ ಜನರ ಹಿಡಿತವನ್ನು ಸಾಧಿಸಿರುತ್ತಾನೆ. ಇಂತಹ ತಳವಾರನನ್ನು ಹಿತಮಿತವಾಗಿ ನೋಡಿಕೊಳ್ಳಬೇಕು. ಹಾಗೂ ನಿಯಂತ್ರಿಸಬೇಕು, ಅತಿಯಾದ ಅಧಿಕಾರ ಹಾಗೂ ಸಂಪತ್ತಿನಿಂದ ತಳವಾರ ಸೊಕ್ಕಿದರೆ ಊರಿಗೆ ಆಪತ್ತು ಎಂಬ ಹಿನ್ನೆಲೆಯಲ್ಲಿ ಈ ಗಾದೆ ಹೇಳಿದಂತಿದೆ.

ತಳವಾರ ಒಂದು ಊರಿನ ಅನಭಿಷಿಕ್ತ ಪಟ್ಟದಾಳು. ಈತನಿಗೆ ಪಟ್ಟಕಟ್ಟದಿದ್ದರೂ ಜನರ ದೃಷ್ಟಿಯಲ್ಲಿ ನಾಡ ರಕ್ಷಕನಾಗಿ ಕಂಡುಬರುತ್ತಾನೆ. ಅದಕ್ಕಾಗಿ ಒಂದು ಗಾದೆಯಲ್ಲಿ "ತಳವಾರನಿಗೆ ಪಟ್ಟಗಟ್ಟಿದರೆ ಕುಳವಾರು ಹೋದಿತೇ?" ಎಂದು ಪ್ರಶ್ನಿಸುವ ಜನಪರರು ತಳವಾರನಿಗೆ ಅಧಿಕಾರ ನೀಡುವುದರಿಂದ ಯಾವ ತೊಂದರೆಯೂ ಬರುವುದಿಲ್ಲ. ಒಂದು ಊರಿಗೆ ತಳವಾರನನ್ನು ನೇಮಿಸುವಾಗ ಆತನಿಗೆ ಕೆಲವು ಜವಾಬ್ದಾರಿ ಹಾಗೂ ಕರ್ತವ್ಯಗಳನ್ನು ಅನುಸರಿಸಿ ಅಧಿಕಾರ ನೀಡುತ್ತಿದ್ದರು. ಆಯಾ ಊರಿನ ಜನರ ಸುಖ-ದುಃಖಗಳಲ್ಲಿ ಭಾಗಿಯಾಗುತ್ತಿದ್ದ ತಳವಾರ ರಕ್ಷಣೆಯಲ್ಲೇ ತನ್ನ ಜೀವನವನ್ನು ಕಳೆಯುತ್ತಿದ್ದ. ಇಂತಹ ವ್ಯಕ್ತಿಗೆ ಪಟ್ಟಕಟ್ಟುವುದರಿಂದ ಕಳೆದುಕೊಳ್ಳುವುದು ಏನೂ ಇಲ್ಲ ಎಂಬ ಅರ್ಥದಲ್ಲಿ ಈ ಗಾದೆ ಬಳಕೆಯಾಗಿದೆ.

"ಕುಳವಾರು ಇಲ್ಲದ ಊರಿಗೆ ತಳವಾರ ಏನು ಮಾಡ್ಯಾನು?"[೬೯]

ಗ್ರಾಮ ರಕ್ಷಣೆಯ ಹೊಣೆ ಹೊತ್ತ ತಳವಾರ ಪ್ರಾಚೀನ ಕಾಲದಲ್ಲಿ ಒಬ್ಬ ಗೌರವಯುತ ಅಧಿಕಾರಿಯಾಗಿದ್ದ. ಬರಬರುತ್ತಾ ರಾಜ, ಮಹಾರಾಜ, ಅರಸು, ಪಾಳೆಯಗಾರರು ನಾಶವಾಗುತ್ತಾ ಬಂದ ಮೇಲೆ, ಇವರ ಅಸ್ತಿತ್ವವೂ ಕಡಿಮೆಯಾಯಿತು. ಕೋಟೆ ಕೊತ್ತಲಗಳನ್ನು ಕಾಯ್ದುಕೊಂಡಿದ್ದ ತಳವಾರ ಬ್ರಿಟೀಷರ ಕಾಲಕ್ಕೆ ಒಬ್ಬ ಸೇವಕನಾದ. ಆ ಸಂದರ್ಭಕ್ಕೆ ಬ್ರಿಟೀಷರ ದಬ್ಬಾಳಿಕೆಗೆ ತಳವಾರನೂ ಒಳಗಾಗಬೇಕಾಯಿತು. ಅವರ ವಿಲಾಸಿ, ವ್ಯಭಿಚಾರಿ ಜೀವನಕ್ಕೆ ಇವರು

ನೆರವಾಗುತ್ತಿದ್ದರು. ಕೊನೆ ಕೊನೆಗೆ ಅವರ ವಿಶ್ವಾಸಗಳಿಸಲು ತಮ್ಮ ಮನೆಯ ಹೆಣ್ಣು ಮಕ್ಕಳನ್ನು ವ್ಯಭಿಚಾರಕ್ಕೆ ತಳ್ಳುವ ಮಟ್ಟಕ್ಕೆ ತಳವಾರನನ್ನು ಇಳಿಸಲಾಯಿತು. ಇಂತಹ ಒಂದು ಸಂದರ್ಭವನ್ನು ಅನುಲಕ್ಷಿಸಿಯೇ ಜನಪದರು "ಅಪ್ಪನ ತಳವಾರಿಕೆಯಲ್ಲಿ ಮಗಳ ಸೂಳೆಗಾರಿಕೆ ಚೆಂದ"[೨೦] ಎಂಬ ಗಾದೆಯನ್ನು ಬಳಸಿದಂತಿದೆ. ಗೌಡ, ಕುಲಕರ್ಣಿಯರ ಅಡಿ ಆಳಾದ ತಳವಾರ ಅವರ ಆಸೆ-ಆಕಾಂಕ್ಷೆಗಳನ್ನು ಈಡೇರಿಸಬೇಕಾಗಿತ್ತು. ಅದಕ್ಕಾಗಿ ತಳವಾರನಿಗೆ ಅಗತ್ಯ ಇನಾಮುಗಳನ್ನು ನೀಡಿ, ಆತನನ್ನು ತಮ್ಮಂತೆ ನಡೆಸಿಕೊಳ್ಳುತ್ತಿದ್ದರು. ಅದಕ್ಕಾಗಿ ತಳವಾರನ ಮೂಲಕ ಊರಲ್ಲಿ ದೇವರ ಹೆಸರಿನಲ್ಲಿ ದೇವದಾಸಿಯರನ್ನು ಬಿಡಿಸಿ ಅವರನ್ನು ಗೌಡ, ಕುಲಕರ್ಣಿಯರಿಗೆ ಪೂರೈಸುವ ಕಾರ್ಯ ನಡೆಯುತ್ತಿತ್ತು. ಇಂತಹ ದೇವದಾಸಿಯರಿಗೆ ಅಗತ್ಯ ವಸ್ತುಗಳನ್ನು ಹಾಗೂ ಅವರ ಭೋಗ ಜೀವನಕ್ಕೆ ಅನೇಕ ದಾನದತ್ತಿಗಳನ್ನು ನೀಡುತ್ತಿದ್ದುದರಿಂದ ತಳವಾರನು ಇದರಿಂದ ಪ್ರೇರಣೆಗೊಂಡು ತನ್ನ ಮಗಳನ್ನು ದೇವದಾಸಿಯನ್ನಾಗಿ ಮಾಡಿ ಸೂಳೆಗಾರಿಕೆಗೆ ಬಿಟ್ಟಿರಬಹುದು. ಆ ಕಾರಣದಿಂದ ಈ ಗಾದೆ ಜನಪದರಲ್ಲಿ ಹುಟ್ಟಿಕೊಂಡಿರಬಹುದು.

ಒಂದು ಕಾಲಕ್ಕೆ ಊರಲ್ಲಿ, ನಾಡಲ್ಲಿ, ಕಳ್ಳತನ, ಹಾದರಕ್ಕೆ ಎಡೆಗೊಡದಂತೆ ಕಾವಲಿರುತ್ತಿದ್ದ ತಳವಾರ ವೇಶ್ಯೆಯರನ್ನು ಹದ್ದುಬಸ್ತಿನಲ್ಲಿಟ್ಟಿದ್ದ ಇವನ ಕಣ್ಣು ತಪ್ಪಿಸಿ ಸೂಳೆಗಾರಿಕೆ ಮಾಡುವುದು ಕಷ್ಟಸಾಧ್ಯವಾಗಿತ್ತು. ಅದಕ್ಕೆ ಹಲವಾರು ಪ್ರಾಚೀನ ಕಾವ್ಯ, ಕಥೆಗಳು ಸಾಕ್ಷೀಕರಿಸುತ್ತವೆ. ಕಟ್ಟುನಿಟ್ಟಿನ ನಿಕೃಷ್ಟ ವ್ಯಕ್ತಿಯಾಗಿದ್ದ ತಳವಾರನ ಮಗಳೇ ಸೂಳೆಯಾಗುವುದು ಚೆಂದ ಎನ್ನುವುದು ವಿಡಂಬನೆಯಾಗಿದೆ. ಕಾವಲಿದ್ದ ತಳವಾರನ ಮಗಳೇ ಸೂಳೆಯಾದರೆ ಅವಳ ಶ್ವೇಚ್ಛಾಚಾರಕ್ಕೆ ಯಾರ ಅಡೆತಡೆಯೂ ಇರುವುದಿಲ್ಲ. ಅದಕ್ಕಾಗಿ ತಳವಾರನ ಮಗಳೇ ಸೂಳೆಯಾದರೆ ಚೆಂದ ಎಂದು ಜನ ಸಾಮಾನ್ಯರು ಬಯಸಿದಂತಿದೆ.

"ಸುಭೇದಾರ ಸುದ್ದಿಲ್ಲ ತಳವಾರನಿಗೆ ನಿದ್ದಿಲ್ಲ"[೨೧]

ಕರ್ನಾಟದಲ್ಲಿ ಟಿಪ್ಪು, ಹೈದರಾಲಿಯ ನಂತರ ಬಂದ ಬ್ರಿಟೀಷರು ತಮ್ಮ ಆಡಳಿತದ ಅನುಕೂಲಕ್ಕಾಗಿ ಹೊಸ ಹೊಸ ಹುದ್ದೆಗಳನ್ನು ಸೃಷ್ಟಿಸಿದರು. ಸಣ್ಣ ಪುಟ್ಟ ಸಂಸ್ಥಾನ, ದೇಸಗತಿ, ದೇಸಾಯಿ, ನವಾಬ, ಪಾಳೆಪಟ್ಟುಗಳಲ್ಲಿ ಇರುತ್ತಿದ್ದ ಕೆಲವು ಮೂಲ ಅಧಿಕಾರಿಗಳು ಮತ್ತು ಅವರ ವೃತ್ತಿಗಳಲ್ಲಿ ಹಲವಾರು ಮಾರ್ಪಾಟುಗಳನ್ನು ಮಾಡಿದರು. ಮೇಲಾಧಿಕಾರಿಯಾಗಿ ಗವರ್ನರ್ ಜನರಲ್, ಪ್ರಿನ್ಸಿಪಲ್ ಕಲೆಕ್ಟರ್, ಅಸಿಸ್ಟೆಂಟ್ ಕಲೇಕ್ಟರ್, ರೆವೆನ್ಯೂ ಇನ್ಸ್‌ಪೆಕ್ಟರ್, ವಿಲೇಜ್ ಮುನ್ಸಿಪ್ ನಂತರದಲ್ಲಿ ಸುಭೇದಾರ ಸಿರಸ್ತಾರ, ಮುನಸಿ, ಸರಾಫ, ದಫೆದಾರ ಎಂಬಂತಹ ಕೆಲವು ಆರಕ್ಷಕ(ಪೊಲೀಸ್) ಅಧಿಕಾರಿಗಳನ್ನು ನೇಮಿಸುತ್ತಿದ್ದರು. ಇಲ್ಲಿ ಸುಭೇದಾರ ಒಬ್ಬ ರಕ್ಷಣಾ ಅಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದ. ಈತನಿಗೆ ಸಹಾಯಕನಾಗಿ ತಳವಾರನಿದ್ದ. ಸ್ಥಳೀಯ ವ್ಯಕ್ತಿಯಾಗಿದ್ದ ತಳವಾರನಿಗೆ ಜವಾಬ್ದಾರಿ ಅಧಿಕವಾಗಿತ್ತು. ಈ ನಿಟ್ಟಿನಲ್ಲಿ ಸರ್ಕಾರಿ ಅಧಿಕಾರಿಯಾಗಿದ್ದ

ಸುಭೇದಾರ ತಳವಾರನಿಗೆ ಎಲ್ಲಾ ಜವಾಬ್ದಾರಿಯನ್ನು ನೀಡಿ ತಾನು ಕಣ್ಮರೆಯಾಗುತ್ತಿದ್ದ. ನಿಷ್ಠನಾದ ತಳವಾರ ಸುಭೇದಾರನ ಅನುಪಸ್ಥಿತಿಯಲ್ಲಿ ಹಗಲು ರಾತ್ರಿಯನ್ನದೇ ತನ್ನ ಕರ್ತವ್ಯ ನಿರ್ವಹಿಸಿರಬೇಕು ಅದಕ್ಕಾಗಿ ಜನಪದರಲ್ಲಿ ಈ ಗಾದೆ ಬಳಕೆಯಲ್ಲಿದೆ.

"ಒಂದು ಊರಿಗೆ ಗೌಡ ಆದರೆ ಇನ್ನೊಂದು ಊರಿಗೆ ತಳವಾರ"[೭೨]

ಗೌಡನೇ ಊರಿಗೆ ಮುಖಂಡನಾಗಿದ್ದ ಕಾಲವೊಂದಿತ್ತು. ಅಲ್ಲಿ ಆತನೇ ನೇರ ಸಾರ್ವಜನಿಕಾಧಿಕಾರಿಯಾಗಿದ್ದ. ಇಂತಹ ಗೌಡನ ಸಹಾಯಕನಾಗಿದ್ದ ತಳವಾರ, ಒಬ್ಬ ಕಾರ್ಯಾಧಿಕಾರಿಯಾಗಿರುತ್ತಿದ್ದ. ಗೌಡನ ಯಾವುದೇ ಆದೇಶಗಳಿದ್ದರೂ ಅವುಗಳನ್ನು ಕಾರ್ಯರೂಪಕ್ಕೆ ತರುವ ಮತ್ತು ಜನರಿಗೆ ಮುಟ್ಟಿಸುವ ಕೆಲಸವನ್ನು ತಳವಾರ ಮಾಡುತ್ತಿದ್ದ. ಅದರಂತೆ ಗೌಡ, ತಳವಾರರು ಗ್ರಾಮಾಡಳಿತದಲ್ಲಿ ಪರಸ್ಪರ ಪೂರಕ ಮತ್ತ ಪ್ರೇರಕರಾಗಿದ್ದರು. ಅದಕ್ಕಾಗಿಯೇ ಜನಪದರು ಗೌಡ ಮತ್ತು ತಳವಾರರು ಒಂದೇ ಎಂಬಂತೆ ಒಂದು ಊರಿಗೆ ಗೌಡ ನಾಯಕನಾದರೆ, ಇನ್ನೊಂದೂರಿಗೆ ತಳವಾರ ನಾಯಕನಾಗಿರುತ್ತಿದ್ದ. ಇದರಿಂದ ಗೌಡನಂತೆ ತಳವಾರನಿಗೂ ಮಾನ್ಯತೆ ಇತ್ತು ಎಂಬುದು ಇದರಿಂದ ತಿಳಿದುಬರುತ್ತದೆ.

"ಸುಂಕದವ ಸುಳ್ಳ ಬಣಜಿಗ ಕಳ್ಳ"[೭೩]

ತಳವಾರನು ಗ್ರಾಮ ರಕ್ಷಣೆಯ ಜೊತೆ ಜೊತೆಗೆ ಊರಲ್ಲಿನ ಜನರ ತಲೆಗಂದಾಯ, ಕೃಷಿ ಕಂದಾಯ ಮತ್ತು ಮನೆ ಕಂದಾಯವನ್ನು ವಸೂಲಿ ಮಾಡುವ ಸುಂಕದಾಳಾಗಿ ಸಹ ಕಾರ್ಯ ನಿರ್ವಹಿಸುತ್ತಿದ್ದ. ಊರ ಕುಲಕರ್ಣಿ ತನಗೆ ಬರಬೇಕಾದ ಕಂದಾಯ, ಸುಂಕವನ್ನು ತಳವಾರನಿಗೆ ವಸೂಲು ಮಾಡಲು ಹೇಳುತ್ತಿದ್ದ. ಆದ್ದರಿಂದ ತಳವಾರನನ್ನು ಸುಂಕದವನಾಗಿ ಜನರು ಬಿಂಬಿಸಿದ್ದಾರೆ. ಇಲ್ಲಿ ಸುಂಕದವ ಸುಳ್ಳ ಎಂಬುದು ತಳವಾರಿಕೆಯಲ್ಲಿ ಜನಸಾಮಾನ್ಯರ ಒಳಿತಿಗಾಗಿ ನಡೆದುಕೊಂಡಿರಬಹುದು. ಇಲ್ಲವೇ ಅಧಿಕ ಹಣ ವಸೂಲಿ ಮಾಡಿ ಸುಳ್ಳು ಹೇಳಿರಬಹುದು, ಅದರಂತೆ ಬಣಜಿಗನಾದವನು ತನ್ನ ವ್ಯಾಪಾರದ ಲಾಭಕ್ಕಾಗಿ ಪ್ರಮಾಣ ಮತ್ತು ಗುಣಮಟ್ಟದಲ್ಲಿ ಕಡಿತಗೊಳಿಸಿ ಕಳ್ಳನಾಗುತ್ತಾನೆ.

"ಜಾತಿಗೆ ಜಾತಿ ವೈರಿ, ಆಯಗಾರರಿಗೆ ಆಯಗಾರ ವೈರಿ"[೭೪]

ತಳವಾರ ಆಯಗಾರರಲ್ಲಿ ಒಬ್ಬನಾಗಿದ್ದಾನೆ. ಅವರು ಇತರ ಆಯಗಾರರಿಗಿಂತ ಅಧಿಕಾರ ಮತ್ತು ಸೌಲಭ್ಯಗಳಿಂದಾಗಿ ಮೇಲ್ಮಟ್ಟದಲ್ಲಿದ್ದ ಗೌಡ ಮತ್ತು ಕುಲಕರ್ಣಿಯರ ಒಡನಾಟವೂ ಕಾರಣವಾಗಿರಬಹುದು. ಇದರಿಂದಾಗಿ ಉಳಿದ ಆಯಗಾರರಿಗಿಂತ ತಳವಾರನ ಆಯಗಾರಿಕೆ ಮೇಲೆಂಬ ಭಾವನೆಯಿಂದ ತಳವಾರನನ್ನು ಹೀಗಳೆಯುವ ಕೆಲಸವನ್ನು ಊರಲ್ಲಿ ಮಾಡುತ್ತಿದ್ದರು. ಅದಕ್ಕಾಗಿಯೇ ಈ ಗಾದೆ ಹುಟ್ಟಿಕೊಂಡಿದೆ ಎನ್ನಬಹುದು. ಪ್ರತಿಯೊಂದು ಜಾತಿ, ಜಾತಿಯಲ್ಲಿ

ಅವರವರ ಆಚಾರ-ವಿಚಾರ, ಸಂಸ್ಕೃತಿಯಿಂದಾಗಿ ಕೆಲವು ಭಿನ್ನಾಭಿಪ್ರಾಯಗಳಿರುವುದು ಸಹಜ. ಅದರಂತೆಯೇ ತಳವಾರಿಕೆಗೆ ಆಯ ಪಡೆಯುವ ಜನರು ಸರಕಾರಿ ಇನಾಂ ಜಮೀನುಗಳನ್ನು ಪಡೆದು ಸಹ ರೈತರಲ್ಲಿ ಆಯಾ ಪಡೆಯುವುದು ಉಳಿದ ಆಯಾಗಾರರಲ್ಲಿ ವಿರಸ ಮೂಡಿಸಿರಬಹುದು. ಅದಕ್ಕಾಗಿ ಜಾತಿಗೆ ಜಾತಿ ವೈರಿ, ಆಯಗಾರರಿಗೆ ಆಯಗಾರ ವೈರಿ ಎಂಬ ಗಾದೆ ಜನಪದರಲ್ಲಿ ಪ್ರಚಲಿತದಲ್ಲಿದೆ.

"ಆಯಗಾರನ ಮನೆಯ ಎತ್ತು, ಅರ್ಚಕನ ಮನೆಯ ಹೆಣ್ಣು ತರಬೇಡ"[೭೫]

ಆಯಗಾರನು ಎಂದರೆ ಊರಲ್ಲಿ ತಾನು ನಿಡುವ ಸೇವೆಗೆ ಪ್ರತಿಫಲವಾಗಿ ತಮ್ಮ ಕೆಲಸದ ಅವಧಿಯಲ್ಲಿ ಸಂಭಾವನೆ ಪಡೆಯದೇ ಸುಗ್ಗಿಯ ಕಾಲದವರೆಗೂ ಕಾದು ಆಯಾ ಕುಟುಂಬದ ಕಣಗಳಿಗೆ ಹೋಗಿ ಅಲ್ಲಿ ಬೆಳೆದ ಧವಸಧಾನ್ಯದಲ್ಲಿ ಇಂತಿಷ್ಟು ಪಾಲು ಎಂಬಂತೆ ಪಡೆಯುವ ಪದ್ಧತಿಯಾಗಿದೆ. ಆಯಾಗಾರರಲ್ಲಿ ಮುಖ್ಯವಾಗಿ ಕಂಡುಬರುವವರು ರೈತರಿಗೆ ಪೂರಕವಾಗಿ ಹಾಗೂ ಅವರ ಕೆಲಸ ಕಾರ್ಯಗಳನ್ನು ಮಾಡುವ ವಿವಿಧ ವೃತ್ತಿಯವರಾಗಿದ್ದಾರೆ. ಅದರಲ್ಲಿ ಕುಂಬಾರ, ಕಂಬಾರ, ತಳವಾರ, ಅಕ್ಕಸಾಲಿಗ, ಅಗಸ, ಕಬ್ಬಿಗ, ಅಂಬಿಗ, ಕೋಲುಕಾರ ಮುಂತಾದವರು. ಇವರು ಶ್ರಮ ಜೀವಿಗಳು ಹಾಗೂ ಸದಾ ವೃತ್ತಿ ನಿರತರಾಗಿರುತ್ತಾರೆ. ಅದಕ್ಕಾಗಿ ಈ ಗಾದೆಯಲ್ಲಿ ಆಯಗಾರರ ಎತ್ತು ಅಂದರೆ ಅದು ಸದಾ ದುಡಿದು ದುಡಿದು ದಣಿದು ಬೇಸತ್ತು ಶಕ್ತಿಹೀನವಾಗಿರುತ್ತದೆ. ಆದ್ದರಿಂದ ಅವರ ಮನೆಯ ಎತ್ತು ತರಬೇಡ ಎಂದಿದ್ದಾರೆ. ಇನ್ನು ಅರ್ಚಕನ ಮನೆಯ ಹೆಣ್ಣು ಸಹ ಸದಾ ಕಾರ್ಯಪ್ರವೃತ್ತಿ ಹೊಂದಿರುವವಳು, ಅರ್ಚಕನಿಗೆ ಬೇಕಾದ ಎಲ್ಲ ಸಲಕರಣೆಗಳನ್ನು ಜೋಡಿಸಿಕೊಡುವ, ವಿಧಿ-ವಿಧಾನಗಳನ್ನು ಪಾಲಿಸಲು ಮಡಿ, ಮೈಲಿಗೆ ಭಾವನೆ ಹೊಂದಿರುವವಳಾಗಿರುತ್ತಾಳೆ. ವೈದಿಕ ಸಂಪ್ರದಾಯ, ನಿಯಮಗಳಿಗೆ ಹೊಂದಿ ಕೊಂಡಿರುವ ಇಂತಹ ಹೆಣ್ಣು ಜನಸಾಮಾನ್ಯರಲ್ಲಿ ಹೊಂದಿಕೊಳ್ಳಲಾರಳು ಎಂಬ ಭಾವನೆ ಇರಬಹುದು.

ಹೀಗೆ, ಸಮಾಜ ಮತ್ತು ಸಂಸ್ಕೃತಿ, ನಾಗರಿಕತೆಗಳ ಬಗೆಗೆ ಜಾನಪದ ಸಾಹಿತ್ಯವು ನಾನಾ ಮುಖ ಹಾಗೂ ದರ್ಶನದ ಮೂಲಕ ಪ್ರಸ್ತುತಪಡಿಸುತ್ತದೆ. ಈ ಮೂಲಕವಾಗಿ ಅಂದಿನ ಜನ ಜೀವನ, ಅವರ ಸಂಸ್ಕೃತಿ, ಆಚಾರ-ವಿಚಾರ, ಧರ್ಮ-ಅಧರ್ಮ, ರೀತಿ-ನೀತಿಗಳ ಕುರಿತಾಗಿ ಒಂದು ತಾತ್ವಿಕ ನೆಲೆಗಟ್ಟಿನ ಮೇಲೆ ಜನಸಾಮಾನ್ಯರು ಗಾದೆಗಳ ಮೂಲಕ ವ್ಯಕ್ತಪಡಿಸಿದ್ದಾರೆ. ಇಲ್ಲಿ ವಿಶೇಷವಾಗಿ ತಳವಾರರಿಗೆ ಸಂಬಂಧಿಸಿದ ಕೆಲವು ಗಾದೆಗಳನ್ನು ಆಯ್ದುಕೊಳ್ಳಲಾಗಿದೆ. ಗ್ರಾಮಾಡಳಿತದ ಭಾಗವಾಗಿ ತಳವಾರನನ್ನು ವಾಸ್ತವತೆಯ ಪರಿಣಾಮದಿಂದ ಕನ್ನಡ ಗಾದೆಗಳಲ್ಲಿ ಅಲ್ಲಲ್ಲಿ ಬಿಂಬಿಸಿದ್ದಾರೆ. ಈತನ ಕಟ್ಟುನಿಟ್ಟಾದ ನಡವಳಿಕೆ ಕಾರ್ಯಚಟುವಟಿಕೆಗಳಿಂದ ಜನರು ಈತನನ್ನು ಹೀಯಾಳಿಸುವ ರೀತಿ, ತಪ್ಪಿ ನಡೆದರೆ ತಿದ್ದುವ ಪರಿ ಹಾಗೂ ಜನರಲ್ಲಿ ಈತನನ್ನು

ಒಳಗೊಳ್ಳಿಸುವಿಕೆಗೆ ಬೇಕಾದ ಕೆಲವು ನೀತಿ ಮಾರ್ಗಗಳನ್ನು ಈ ಗಾದೆಗಳ ಮೂಲಕ ಸೂಚಿಸಲಾಗಿದೆ. ಒಟ್ಟಿನಲ್ಲಿ ಜನರ ಜೀವನಾಡಿಯಾಗಿದ್ದ ತಳವಾರ ತನ್ನ ವ್ಯಕ್ತಿತ್ವ ಮತ್ತು ವೃತ್ತಿ-ಪ್ರವೃತ್ತಿಗಳಿಂದ ಜನಾಕರ್ಷಣೆ ಹೊಂದಿ ಅವರ ಬಾಯಲ್ಲಿ ಇಂತಹ ಗಾದೆಗಳ ಮೂಲಕ ನಲಿದಾಡುವ ವ್ಯಕ್ತಿಯಾಗಿದ್ದ ಎಂದು ಹೇಳಬಹುದು.

**ಜನಪದ ಗೀತೆ**

ಜನಪದ ಸಾಹಿತ್ಯದ ಒಂದು ಪ್ರಕಾರವಾದ ಜನಪದ ಗೀತೆಗಳು ಕನ್ನಡದಲ್ಲಿ ಹಳ್ಳಿಯ ಹಾಡುಗಳು ಎಂದು ಕರೆಯಲ್ಪಡುತ್ತವೆ. ಜಾನಪದ ಗೀತೆಗಳು ಹೇಗೆ? ಯಾವಾಗ? ಎಲ್ಲಿ ಹುಟ್ಟಿದವು? ಎಂಬ ಪ್ರಶ್ನೆಗಳಿಗೆ ಖಚಿತವಾಗಿ ಉತ್ತರಿಸಲು ಸಾಧ್ಯವಿಲ್ಲ. ಇವುಗಳು ಒಬ್ಬರಿಂದ ಒಬ್ಬರಿಗೆ ಬಾಯ್ದೆರೆಯಾಗಿ, ವಾಕ್ ಪರಂಪರೆಯಿಂದ ಹುಟ್ಟಿ ಬಂದವುಗಳಾಗಿವೆ. ಜನಸಾಮಾನ್ಯರ ಅಡು ಮಾತಿನಲ್ಲಿಯೇ ಬಳಕೆಯಾದ ಈ ಗೀತೆಗಳು ಭಾವಪೂರಿತವಾಗಿ ಹಾಡುವ ಜೊತೆಗೆ ನೃತ್ಯ ಮಾಡುವ ರೀತಿಯಲ್ಲಿ ರಚನಗೊಂಡಿರುತ್ತವೆ.

"ಜನಪದ ಗೀತೆಗಳನ್ನು ಹಲವು ಬಗೆಗಳಾಗಿ ವರ್ಗೀಕರಿಸಬಹುದು. ಅವುಗಳಲ್ಲಿ ಗೀತೆಗಳು ಹಾಗೂ ಕಥನ ಗೀತೆಗಳು, ತ್ರಿಪದಿಗಳು, ಲಾವಣಿಗಳು ಹೀಗೆ ಇನ್ನು ಅನೇಕ ರೀತಿಗಳಲ್ಲಿ ವಿಂಗಡಿಸಬಹುದು. ಗೀತೆಗಳಲ್ಲಿ ಭಾವಗೀತೆಗಳು, ಧಾರ್ಮಿಕ ಗೀತೆಗಳು, ಮಾಂತ್ರಿಕ ಗೀತೆ, ಕಾಯಕ ಗೀತೆ, ಕ್ರೀಡಾಗೀತೆ, ನಾಟ್ಯಗೀತೆ, ಶಿಶುಗೀತೆ ಇತ್ಯಾದಿಯಾಗಿ ಭೇದ ಕಲ್ಪಿಸಬಹುದು. ಕಥನ ಗೀತೆಗಳಲ್ಲಿ ಲಾವಣಿಯೂ ಸಮಾವೇಶಗೊಳ್ಳುತ್ತದೆ."[೬೬] ಜಾನಪದ ಗೀತೆಗಳು ಪ್ರಾಚೀನವಾದವು ಗಳಾಗಿವೆ. ಇವುಗಳು ಕೃಷಿಕರ ಗೀತೆಗಳೆಂದು, ಇತರ ವೃತ್ತಿ ಕಾಯಕದವರು ಹಾಡುವ ಗೀತೆಗಳೆಂದು ಕರೆಯುತ್ತಾರೆ. ಕೃಷಿಕರಲ್ಲಿ ನಾಟಿ ಮಾಡುವಾಗ, ಕೊಯ್ಯುವಾಗ, ನೇಯುವಾಗ, ದೋಣಿ ನಡೆಸುವಾಗ, ಬಿತ್ತುವಾಗ, ಎಳೆಯುವಾಗ, ಕುಟ್ಟುವಾಗ, ಬೀಸುವಾಗ ಇತರ ಸಂದರ್ಭಗಳಲ್ಲಿ ಈ ಹಾಡುಗಳನ್ನು ಕಟ್ಟಿ ಹಾಡುತ್ತಾರೆ. ಈ ಗೀತೆಗಳಲ್ಲಿ ಗ್ರಾಮೀಣ ಸೊಗಡಿನ ಆಚಾರ-ವಿಚಾರ-ಸಂಸ್ಕೃತಿ, ನಡೆ-ನುಡಿ, ಕಾಯಕ, ಪರಿಸರ ಮುಂತಾದ ಸಮಾಜದ ಸಂಸ್ಕೃತಿಯನ್ನು ಈ ಗೀತೆಗಳ ಮೂಲಕ ಹಾಡುತ್ತಾರೆ. ಇಂತಹ ಜಾನಪದ ಗೀತೆಗಳಲ್ಲಿ ತಳವಾರರಿಗೆ ಸಂಬಂಧಿಸಿದ ಅಥವಾ ಅವರ ವೃತ್ತಿಗೆ ಸಂಬಂಧಿಸಿದ ಹಲವಾರು ಅಂಶಗಳನ್ನು ಜನಪದರು ಅಭಿವ್ಯಕ್ತಿಸಿದ್ದಾರೆ. ತಳವಾರರ ಕಾಯಕವನ್ನು ಹಾಗೂ ವೃತ್ತಿ ಜೀವನವನ್ನು ಮತ್ತು ನಡೆ-ನುಡಿಗಳನ್ನು ತಮ್ಮದೇ ಆದ ಪರಿಜ್ಞಾನದಲ್ಲಿ ಗೀತೆ, ತ್ರಿಪದಿ ಹಾಗೂ ಲಾವಣಿಗಳ ಮೂಲಕ ಪ್ರಸ್ತುತಪಡಿಸಿದ್ದಾರೆ.

ಜಾನಪದ ಗೀತೆಗಳಲ್ಲಿ ಗೃಹ ಸಂಬಂಧವಾದ ಕೆಲಸ ಹಾಗೂ ಗೃಹಜೀವನದ ಹಾಡುಗಳು, ಕುಟುಂಬದ ಸುಖದುಃಖಗಳಾದ ಬಾಳಲ್ಲಿನ ಆಸರಿಕೆ, ಬೇಸರಿಕೆ, ತೌರಿನ ಬಯಕೆ, ಬಂಜೆತನ, ದಾಂಪತ್ಯ ಜೀವನ, ಅತ್ತೆಮನೆಯ ಕಾಟ, ಮಕ್ಕಳ ಆಟ-ಪಾಠ ವಿನೋದ ಇತ್ಯಾದಿ ವಿಷಯಗಳೇ

ಈ ಹಾಡುಗಳಲ್ಲಿ ಹಾಸುಹೊಕ್ಕಾಗಿರುತ್ತದೆ. ಇವುಗಳನ್ನು ಸಾಮಾನ್ಯವಾಗಿ ಬೀಸುವಾಗ, ಕುಟ್ಟುವಾಗ ಹಾಡುತ್ತಾರೆ. ಇಂತಹ ಒಂದು ಹಾಡಿನಲ್ಲಿ

"ಊದಸ್ತ ಬಾರಸ್ತ। ಸೋಬಾನ ಹಾಡುsತ
ಬಂದಾನ ಮದುಮಗ ಅಗಸಿsಗಿ। ಕೋ
ಅಗಸಿsಯ ತೆರಿsನನ್ನ। ಬಗಸುಳ್ಳ ತಳsವಾರಾ।
ಬೊಗಸಿ ತುಂಬಡಕಿ ಬಿಳಿ ಎಲಿಯ। ಕೋ"[೨೭]

ತಾಯಿ ಮತ್ತು ಮಗಳಿಬ್ಬರ ಸಂವಾದದಲ್ಲಿ ತಾಯಿಯ ತವರವರು ಜೈನರು. ಕೊಟ್ಟ ಮನೆ ಲಿಂಗವಂತರದು ತಾಯಿ ತನ್ನ ಸಹೋದರನಿಗೆ ಮಗಳನ್ನು ಕೊಡುವ ಪ್ರಯತ್ನದಲ್ಲಿ ಮಗಳ ಒಪ್ಪಿಗೆ ಇಲ್ಲದಿದ್ದರೂ ಮನೆಯಲ್ಲಿ ಲಗ್ನದ ಕಾರ್ಯ ಆರಂಭವಾಗುತ್ತದೆ. ಊರಿನಿಂದ ದಿಬ್ಬಣ ಹೊರಟು ಮದುಮಗ ಊದುಸ್ತಾ ಬಾರಿಸುತ್ತಾ ಊರ ಅಗಸಿಯ ಬಾಗಿಲಿಗೆ ಬರುತ್ತಾನೆ. ಅಗಸಿಯ ಬಾಗಿಲಲ್ಲಿ ಬಲಶಾಲಿಯಾದ ತಳವಾರ ನಿಂತಿರುತ್ತಾನೆ. ಆತನಿಗೆ ತಾನು ಇಂತವರ ಮಗಳಿಗೆ ಮದುವೆಯಾಗುತ್ತೇನೆ ಎಂದು ಹೇಳಿ ಬೋಗಸಿ ಅಡಕಿ ಮತ್ತು ಎಲೆಗಳನ್ನು ನೀಡಿ ಒಳಬರುತ್ತಾನೆ. ಪ್ರತಿಯೊಂದು ಊರಲ್ಲಿಯೂ ಸಹ ಯಾವುದೇ ಒಂದು ಮದುವೆ ನಿಶ್ಚಯವಾದರೂ ಅಲ್ಲಿ ತಳವಾರನ ಉಪಸ್ಥಿತಿ ಇರುತ್ತದೆ. ಮದುವೆಯ ಮಾತುಕತೆಯಿಂದ ಮೆರವಣಿಗೆಯವರೆಗೂ ತಳವಾರ ಉಪಸ್ಥಿತಿ ಇರುತ್ತದೆ. ಇದನ್ನು ಈ ಪದ್ಯದ ಸಾಲು ಸಹ ಸಾಕ್ಷೀಕರಿಸುತ್ತದೆ.

ವ್ಯಾಪಾರಕ್ಕೆಂದು ಪರದೇಶಕ್ಕೆ ಹೋದ ಗಂಡನು ಒಂದು ಸಲ ಬಹಳ ದಿವಸ ಊರಿಗೆ ಬರಲಿಲ್ಲ. ಇಂತಹ ಸಂದರ್ಭದಲ್ಲಿ ಸಾಂಸಾರಿಕ ಜೀವನ ಹದಗೆಡುವುದೂ ಉಂಟೂ... ಹಾಗಾಗ ಬಾರದೆಂದೇ ಗರತಿ ಎಚ್ಚರಿಕೆ ಕೊಡುತ್ತಾಳೆ. ಅದು ಅಪ್ರಾಸಂಗಿಕವಾದರೂ ಪ್ರಯೋಜಕವಾಗಿದೆ.

"ವಾಲೀಕಾರಾ ನಿನಗೆ ಒಳ್ಳೆ ಹೆಂಡತಿಯಾಕೊ?
ನೀ ಹೋದಿ ದೇಶ ತಿರುಗೂತ। ಮನಿಯಾನ ಬಾಲಿ।
ಒಣಗ್ಯಾಳೊ ಬಾಳಿ ಸುಲಿಯಾಂಗ"[೨೮]

ತಳವಾರನಿಗೆ ವಾಲಿಕಾರ ಎಂದು ಪರ್ಯಾಯವಾಗಿ ಬಳಸುವುದಿದೆ. ಆದ್ದರಿಂದ ಇಲ್ಲಿ ತಳವಾರ ತನ್ನ ಕಾರ್ಯದ ನಿಮಿತ್ತವಾಗಿ ಬೇರೆ ಬೇರೆ ಊರುಗಳಿಗೆ ತೆರಳಿ, ಬರುವುದು ತಡವಾದರೆ ನಿನ್ನ ಹೆಂಡತಿ ಮನೆಯಲ್ಲಿ ಒಬ್ಬಳೇ ನೊಂದು ಕೊರಗುತ್ತಾಳೆ ಎಂದು ಗರತಿ ವಾಲಿಕಾರಾನಿಗೆ ಪ್ರಶ್ನಿಸುತ್ತಾಳೆ. ತಳವಾರನ ಕಾರ್ಯ ಬಾಹುಳ್ಯದಿಂದ ತನ್ನ ಸಾಂಸರಿಕ ಜೀವನದಲ್ಲಿ ಸುಖ ನೆಮ್ಮದಿಗಳು ಅಲ್ಪವಾಗಿದ್ದ ಬಗೆಗೆ ತಿಳಿಸುತ್ತದೆ.

"ವಾಲೀಕಾರನ ಸೋಗು ಊರಾಗ ಕೇರ್ಯಾಗ
ಸೂಳಿ ನಿನ್ನ ಸೋಗು ಸೀರ್ಯಾಗ। ಗಂಡುಳ್ಳ
ಬಾಲಿ ನಿನ ಸೋಗು ಒಲಿಯಾಗ"[೨೯]

ತಳವಾರನ ಕಾರ್ಯವ್ಯಾಪ್ತಿ ಒಂದು ದೇಶದ, ನಾಡಿನ ಪ್ರಾಂತ, ಗಡಿ ಹಾಗೂ ಪಟ್ಟಣ, ಗ್ರಾಮಗಳಿಗೆ ಸಂಬಂಧಿಸಿದಂತೆ ಸೀಮಿತವಾಗಿತ್ತು. ಅದರಂತೆ ಒಂದು ಊರಿನ ಆಗುಹೋಗುಗಳನ್ನು ಬಲ್ಲ ತಳವಾರನ ದರ್ಪ ಆ ಊರಲ್ಲಿರುತ್ತದೆ. ಅರಿಯದ ಊರಲ್ಲಿ ತಳವಾರನ ಆಟ ನಡೆಯುವುದಿಲ್ಲ. ಅದರಂತೆ ಸೂಳಿಯಾದವಳ ಸೋಗು, ವೈಯಾರಗಳೆಲ್ಲ ಅವಳ ಅಲಂಕಾರಗಳಲ್ಲಿ ಅಡಗಿರುತ್ತದೆ. ಅದೇ ರೀತಿ ಗಂಡನಿರುವ ಗರತಿಯ ಯಾವ ಸೋಗು ನಡೆಯುವುದಿಲ್ಲ. ಅವಳದೇನಿದ್ದರೂ ಅದು ಅಡುಗೆ ಮನೆಯಲ್ಲಿ ಸೀಮಿತ ಎಂಬ ಅರ್ಥದಲ್ಲಿ ಈ ತ್ರಿಪದಿ ಬಳಕೆಯಾಗಿದೆ.

ತರೀಕೆರೆ ಪಾಳೆಯಗಾರ ಸರ್ಜಪ್ಪನಾಯಕನ ಕಥನ ಕಾವ್ಯದಲ್ಲಿ ತಳವಾರನ ಪ್ರಸಂಗವಿದೆ. ಸೂಳೆ ನಿಂಗಮ್ಮ ಮತ್ತು ಅವಳ ಸಹೋದರರಾದ ವೆಂಕಪ್ಪರಾಯ, ಗೋವಿಂದರಾಯ ಸೇರಿ ಸರ್ಜಪ್ಪನನ್ನು ಮೋಸದಿಂದ ಕೊಲ್ಲಿಸಲು ಪ್ರಯತ್ನಿಸುತ್ತಾರೆ. ಆಯಗಾರರಾದ ಬಡಿಗೇರ, ಕಮ್ಮಾರ, ನೆವ್ವರ, ಮಾದಿಗ, ಒಡ್ಡರನ್ನು ಕರೆಸಿ ವಿವಿಧ ಕೆಲಸ ಮಾಡಿಸುತ್ತಾರೆ. ಹಾಗೆಯೇ ಈ ಕಥನ ಕಾವ್ಯದಲ್ಲಿ

"ತಳವಾರನು ಕರಸಯ್ಯ
ಶಾವುಲ್ಲು ತರಿಸಯ್ಯ
ಕೋಟೆಸುತ್ತಲು ಒದುಸಯ್ಯ
ಗೋವಿಂದರಾಯ ವೆಂಕಪರಾಯ
ಹನುಮನ ದಿಕ್ಕಿಗೆ ಹೊದುಸಯ್ಯೊ"[೮೦]

ಊರ ತಳವಾರನನ್ನು ಕೆಟ್ಟ ಕೆಲಸಕ್ಕೆ ಉಪಯೋಗಿಸಿಕೊಳ್ಳುವುದನ್ನು ಈ ಸಾಲುಗಳಲ್ಲಿ ನೋಡಬಹುದಾಗಿದೆ. ಕೋಟೆ ಸುತ್ತಲೂ ಕಂದಕ ತೋಡಿ ಅದರಲ್ಲಿ ಶೂಲಗಳನಿಟ್ಟು ಅವು ಕಾಣದಂತೆ ಶಾವುಲ್ಲು ಹಾಕುತ್ತಾರೆ. ಇವರ ಕುತಂತ್ರ, ಮೋಸ ಅರಿಯದ ಸರ್ಜಪ್ಪ, ಸೂಳೆ ನಿಂಗಿ, ವೆಂಕಪ್ಪರಾಯ, ಗೋವಿಂದರಾಯರ ಕುತಂತ್ರಕ್ಕೆ ಒಳಗಾಗುತ್ತಾನೆ. ಈ ಎಲ್ಲಾ ಕಾರ್ಯಕ್ಕೂ ತಳವಾರ ಸಾಕ್ಷಿಯಾಗುತ್ತಾನೆ.

"ತಳವಾರ ತಿಪ್ಪಯ್ಯ
ಕುದುರೆನೆ ಹಿಡಿಯಯ್ಯ
ಕುದುರೆ ಜೀನಾದರೆ ಬಿಗಿಸಯ್ಯ
ಅನ್ನುತಲಾಗ
ತಳವಾರ ತಿಪ್ಪಯ್ಯಗೆ ಹೆಳನಲ್ಲೊ
ತಂದೆನೇ ಪಾದಕ್ಕೆ

ನಡೆದಾನೊ ಆವಾಗ

ತಂದೆ ಪಾದವ ಕೊಡಲಿಲ್ಲೊ”[೮೧]

ಎಂದು ಸರ್ಜಪ್ಪನ ಅವಸಾನದ ಕಾಲದಲ್ಲಿ ನೆರವಾದ ತಳವಾರ ತಿಪ್ಪಯ್ಯನ ಕುರಿತು ಈ ಸಾಲುಗಳು ಬೆಳಕು ಚೆಲ್ಲುತ್ತದೆ.

ಆರ್.ಸಿ.ಮುದ್ದೇಬಿಹಾಳ ಅವರ ‘ಬೇಡ ನಾಯಕರ ಪಾಡು’(೧೯೯೪) ಎಂಬ ಕಥನ ಕಾವ್ಯದಲ್ಲಿ ಬೇಡರ ಪರಂಪರೆ, ಚರಿತ್ರೆ, ಪುರಾಣ ಜನಪದ ವಿವರಗಳಿವೆ. ಇದರಲ್ಲಿ ತಳವಾರರ ಬಗೆಗೂ ಒಂದು ಪದ್ಯ ಹೀಗಿದೆ.

“ತಲವಾರ ಹಿಡಕೊಂಡು ತಳದಲ್ಲಿ ತಿರುಗ್ಯಾಡಿ

ಬೆಳತನ ಗಸ್ತಿ ತಿರುಗ್ಯಾನ ಅದಕಾಗಿ

ತಳವಾರರೆಂದು ಎನಿಸ್ಯಾರ”[೮೨]

ತಳವಾರ ತನ್ನ ಆಯುಧ ಖಡ್ಗವನ್ನು ಹಿಡಿದು ಊರಲ್ಲಿ ರಾತ್ರಿಯಿಡಿ ಕಾವಲು ಕಾಯುತ್ತಿದ್ದರು. ಅದಕ್ಕಾಗಿ ಅವರು ತಳವಾರರೆಂದು ಎನಿಸಿಕೊಂಡಿದ್ದಾರೆ ಎಂಬುದು ಇವರ ವಾದವಾಗಿದೆ.

ಹೀಗೆ, ತಳವಾರರ ಕುರಿತಾಗಿ ಜನಪದ ಗೀತೆಗಳಲ್ಲಿ ತ್ರಿಪದಿಗಳಂತಹ ಮೌಖಿಕ ಸಾಹಿತ್ಯ, ಕಾವ್ಯಗಳಲ್ಲಿ ಪ್ರಾಸಂಗಿಕವಾಗಿ ಮೂಡಿ ಬಂದಿರುವುದನ್ನು ಕಾಣಬಹುದಾಗಿದೆ.

**ಲಾವಣಿಗಳು**

ಲಾವಣಿಗಳು ಜನಪದ ಸಾಹಿತ್ಯದ ಒಂದು ಪ್ರಮುಖ ಪ್ರಕಾರ. ಇದು ಕಥನಾತ್ಮಕವಾದದ್ದು. ಹಾಡುವ ರೂಪದಲ್ಲಿರುತ್ತದೆ. ವಸ್ತುನಿಷ್ಠವಾದ ಏಕ ಘಟನೆಯನ್ನು ಆಧರಿಸಿರುತ್ತದೆ. ಇದೊಂದು ಪದ್ಯ ರೂಪದ ಸಣ್ಣ ಕಥೆ ಎಂದು ಹೇಳಬಹುದು.

ಆಂಗ್ಲ ಭಾಷೆಯಲ್ಲಿ ‘ಲಾವಣಿ ಸಾಹಿತ್ಯ’ಕ್ಕೆ ‘ಬ್ಯಾಲೆಡ್’ ಎಂದು ಕರೆಯಲಾಗುತ್ತದೆ. ‘ಬ್ಯಾಲೆಡ್’ ಎಂಬ ಪದಕ್ಕೆ ಇಟಾಲಿಯನ್ ಮೂಲದಲ್ಲಿ ‘ಬ್ಯಾಲೆಟಾ’ ಎಂದಿದೆ. ಒಟ್ಟಿನಲ್ಲಿ ‘ಜಾನಪದ ಕಥನ ಗೀತೆ’ ಅಥವಾ ಹಾಡಿಗೆ ಅಳವಡಿಸಲ್ಪಟ್ಟ ಸಂಕ್ಷೇಪ ಕಥನ ಸಾಹಿತ್ಯವನ್ನು ‘ಲಾವಣಿ’ ಎಂದು ಕರೆಯಬಹುದು. ಹಾಗೂ ಪದ್ಯರೂಪದ ಸಣ್ಣ ಕಥೆ ಎಂದು ಕರೆಯಬಹುದು.

“ಲಾವಣಿಗಳು ಲಯಗಳ ಏಕ ಮುಖತೆ, ನಾಟಕೀಯತೆಯ ಸನ್ನಿವೇಶಗಳು ಹಾಗೂ ಪಲ್ಲವಿಯ ಪುನಾರಾವರ್ತನೆ ಲಕ್ಷಣಗಳನ್ನು ಒಳಗೊಂಡಿರುತ್ತದೆ. ಪಾತ್ರ, ಕ್ರಿಯೆ ಮತ್ತು ವಸ್ತು ಸಂವಿಧಾನದಲ್ಲಿ ಒಂದು ಸುಸಂಬದ್ಧತೆ ಇರುತ್ತದೆ.”[೮೩] ಸ್ಥಳೀಯ ಐತಿಹ್ಯ ಮತ್ತು ಚರಿತ್ರೆ ಹಾಗೂ ಜನಪದ ಕಥೆ ಸಾಮಾಗ್ರಿಯನ್ನು ಬಳಸಿಕೊಂಡು ಲಾವಣಿಗಳು ಸೃಷ್ಟಿಯಾಗುತ್ತವೆ. ಕಾಲದ ಬಗೆ ಬಗೆಯ ಯಾತ್ರೆಗಳಲ್ಲಿ ಇದು ಜನತೆಯ ಬಾಯಲ್ಲಿ ವಿವಿಧ ರೂಪಗಳನ್ನು ಪಡೆಯುತ್ತಾ

ಸಾಗುತ್ತದೆ. ಇದು ಜನಪದ ಮೂಲಕ್ಕೆ ಸಂಬಂಧಿಸಿದ ಕಥನ ಗೀತೆಯಾದುದರಿಂದ ಅದು ಜನಸಾಮಾನ್ಯರ ಸ್ವತ್ತು. ಹಾಡುವವರು, ಕೇಳುವವರು, ರಚಿಸಿದವರು ಎಲ್ಲರೂ ಜನಪದ ಮೂಲದವರೇ ಆದುದರಿಂದ ಅದನ್ನು ಜನ ಸಾಮಾನ್ಯರ ಕಾವ್ಯವೆಂದು ಕರೆದುದು ಉಚಿತವೇ ಆಗಿದೆ. ಲಾವಣಿ ಕಥನಾತ್ಮಕವಾದುದು, ಹಾಡಬೇಕಾದುದು. ವಸ್ತು, ಶೈಲಿ, ರೂಪಗಳಲ್ಲಿ ಅದು ಜಾನಪದ ಮೂಲಕ್ಕೆ ಸಂಬಂಧ ಪಡುತ್ತದೆ.

ಹಾಡಿನ ರೂಪದ ಕತೆ, ಹಾಡಲೇ ಬೇಕಾದಂತಹ ಕಥನ ಕಾವ್ಯ, ಹಾಡುಗಾರಿಕೆ ಗತ್ತಿನಲ್ಲಿ, ವಾದ್ಯಗಳ ಹಿನ್ನಲೆಯಲ್ಲಿ, ಹಿಮ್ಮೇಳದ ಸೋಗಿನಲ್ಲಿ ಲಾವಣಿಗಳನ್ನು ಹಾಡಲಾಗುತ್ತದೆ. ಇಂತಹ ಲಾವಣಿಗಳಲ್ಲಿ ಬರುವ ಹಲವಾರು ಕಥನ ಗೀತೆಗಳಲ್ಲಿ ತಳವಾರರ ಕುರಿತಾದ ಪ್ರಸಂಗಗಳು ಬರುತ್ತವೆ. ಅವುಗಳಲ್ಲಿ ಫ್ಲೀಟರು ಸಂಗ್ರಹಿಸಿದ ಲಾವಣಿಗಳಲ್ಲಿ 'ಸಂಗೊಳ್ಳಿ ರಾಯಣ್ಣನ ದಂಗೆ' ಲಾವಣಿಯಲ್ಲಿ ರಾಯಣ್ಣ ಒಬ್ಬ ತೆರಿಗೆ ಅಧಿಕಾರಿ(ತಳವಾರ)ನಾಗಿ ಕಿತ್ತೂರ ದೇಸಾಯಿ ಅವರ ಚಾಕರಿದಾರನಾಗಿದ್ದ. ಪ್ರಾಂತ್ಯದ ಎಲ್ಲಾ ಜನರಲ್ಲಿಯೂ ಪ್ರೀತಿ ವಿಶ್ವಾಸವನ್ನು ಹೊಂದಿದ್ದ. ದೇಸಾಯಿ ಅವರ ಸಂಸ್ಥಾನದಲ್ಲಿ ಬಾಳಪ್ಪನೆಂಬ ಕುಲಕರ್ಣಿ ಸೊಕ್ಕಿನಿಂದ ಕೂಡಿದ್ದ. ಇವನು ಒಂದು ದಿನ ರಾಯಣ್ಣನಿಗೆ ತನ್ನ ವಸ್ತ್ರವನ್ನು ತೊಳೆಯಲು ನೀಡಿದಾಗ ಅದನ್ನು ನಿರಾಕರಿಸುವ ರಾಯಣ್ಣ ಮುಟ್ಟುವುದಿಲ್ಲ. ಆಗ

"ಯಾಕಲೇ ಹಳಬಾ ಜೋಕ್ಯಾಗಿದ್ದಿ
ಸೊಕ್ಕ ಬಂತೀಗೇನೂ ನಿನಗ
ದಿಗರಾಡ್ತಿ ನಿಂತ ಇದರಿಗೆ"[೮೪]

ಎಂದು ಬಾಳಣ್ಣ ಗದರಿಸುತ್ತಾನೆ. ಇದರಿಂದ ಕುಪಿತನಾದ ರಾಯಣ್ಣ ಬಾಳಣ್ಣನ ರುಂಡ ಚಂಡಾಡುತ್ತೇನೆಂದು ಖಡ್ಗ ಹಿಡಿದು ಹೊರಟು ಸುರಪುರದ ನಾಯಕರಲ್ಲಿಗೆ ಬಂದು ದಂಡು(ಸೈನ್ಯದ) ನೆರವನ್ನು ಬೇಡುತ್ತಾನೆ. ಬೇಡಿಕೆಯನ್ನು ಮನ್ನಿಸಿದ ನಾಯಕರು ಸೈನ್ಯದೊಂದಿಗೆ ಬೀಳ್ಕೊಡುತ್ತಾರೆ. ಅಪಾರ ದಂಡಿನೊಂದಿಗೆ ಬಂದ ರಾಯಣ್ಣ ಶಮಸರಗಡವನ್ನು ಮುತ್ತಿ ಅಲ್ಲಿದ್ದ ಬ್ರಿಟೀಷ್ ಸೈನಿಕರನ್ನು, ಅಧಿಕಾರಿಗಳನ್ನು ಹತ್ಯೆಗೈಯುತ್ತಾನೆ. ಇದರಿಂದ ಕುಪಿತಗೊಂಡ ಬ್ರಿಟೀಷ್ ಸಾಹೇಬ ರಾಯಣ್ಣನನ್ನು ಕೊಲ್ಲಿಸಲು ಅಪಾರ ಸೈನ್ಯವನ್ನು ಕರೆಸಿ ಹುಡುಕಿಸಿ, ಗುಂಡು ಹಾರಿಸಿದರೂ ಸಿಗದೇ ಅವರನ್ನೇ ನಾಶಪಡಿಸುತ್ತಾನೆ. ಆಗ ಸಾಹೇಬ ಬ್ರಿಟೀಷ್ ರಾಣಿ ವಿಕ್ಟೋರಿಯಾಗೆ ಪತ್ರ ಬರೆಯುತ್ತಾನೆ.

"ಬರದ ಪತ್ತರ ವತ್ತರದಿಂದ
ವಾಲಿಕಾರು ವೋದರಣ್ಣ
ದಾರಿ ಕೂಡಿಕೊಂಡ ಧಾರವಾಡಕ"[೮೫]

ಬರೆದ ಪತ್ರವನ್ನು ಹೊತ್ತು ಸಾಗಿದ ವಾಲೀಕಾರ ಅಂದರೆ ತಳವಾರನು ಅದನ್ನು ಧಾರವಾಡದ ಆಫೀಸ್‌ಗೆ ಮುಟ್ಟಿಸುತ್ತಾನೆ.

ರಾಯಣ್ಣನನ್ನು ಹಿಡಿದು ಕೊಟ್ಟವರಿಗೆ ಇನಾಮು ಕೊಡುತ್ತೇವೆಂದು ಡಂಗುರ ಹೊಡೆಸಿದ ಸಾಹೇಬನ ಮಾತು ನಂಬಿ ಊರಲ್ಲಿನ ಮೂರು ಜನ ರಾಯಣ್ಣನನ್ನು ಮೋಸದಿಂದ ಆತನ ಗುಂಪು ಸೇರಿ ಹಿಡಿದುಕೊಡುತ್ತಾರೆ. ರಾಯಣ್ಣನ ಶೌರ, ಪರಾಕ್ರಮಗಳನ್ನು ನೋಡಿದ್ದ ಸರದಾರ ಕನಿಕರ ತೋರಿಸಿ ಬಿಡುಗಡೆ ಮಾಡಬೇಕೆಂದರೂ ಈ ಮೂರು ಜನರು 'ಮೊದಲು ನಮ್ಮನ್ನು ನೀವೇ ಕೊಂದು ಆ ನಂತರ ಅವನನ್ನು ಬಿಡಿ' ಎಂದು ಹೇಳುತ್ತಾರೆ. ರಾಯಣ್ಣನಿಂದ ಭಯಗೊಂಡಿದ್ದ ಇವರಿಂದ ಕೊನೆಗೆ ಗಲ್ಲಿಗೆ ಹಾಕಲಾಗುತ್ತದೆ. ಈ ಸಂದರ್ಭದಲ್ಲಿ ಅಲ್ಲಿನ ಪರಿಸ್ಥಿತಿಯ ಕುರಿತಾಗಿ ಒಂದು ಪದ್ಯದಲ್ಲಿ,

"ಕೂಡಿ ಕುಂತರಣ್ಣಾ ಸಾವಕಾರಾ
ಕುಂತಂಗ ಕುಂತ್ರೋ ಕೂಲಿ ತಳವಾರಾ
ತಮ್ಮ ತಮ್ಮೊಳಗ ಹಾಕತಾರ ಉಸರಾ
ತೆಳಕ ಮಾರಿ ಮಾಡಿ"[೮೬]

ರಾಯಣ್ಣನನ್ನು ಗಲ್ಲಿಗೆ ಹಾಕಲು ಅಪ್ಪಣೆ ಕೊಟ್ಟ ಅಧಿಕಾರಿಯೇ ಇಂತಹ ಬಂಟನನ್ನು ಕೊಲ್ಲಬಾರದಿತ್ತು ಎಂದು ಮರುಗಿದರೆ ಉಳಿದಂತೆ ಸಂಸ್ಥಾನಿಕರೂ, ತಳವಾರರೂ ಎಲ್ಲರೂಒಂದೇ ಕಡೆ ನಿಂತು ಮೂಕ ವಿಸ್ಮಿತರಾಗಿ, ಅಸಹಾಯಕತೆಯಿಂದ ತೊಳಲಾಡುತ್ತಾ ತಮ್ಮ ತಮ್ಮೊಳಗೆ ದುಃಖಿಸಿ ಅವನನ್ನು ನೋಡಲಾಗದೇ ಮುಖ ಕೆಳಗೆ ಮಾಡಿ ನಿಂತಿದ್ದರು. ರಾಯಣ್ಣನ ಸಮಾಧಿ ಮಾಡಿದ ಇವರು ಅವನ ಸಮಾಧಿಯ ಮೇಲೆ ಆಲದ ಸಸಿ ನೆಟ್ಟು ಮುಂದೆ ಇಂತಹ ಧೀರ, ಶೂರನಾದ ಮಕ್ಕಳು ಹುಟ್ಟಲಿ ಎಂದು ಸಂತಾನವಿಲ್ಲದವರಿಗೆ ಸಂತಾನ ಕರುಣಿಸುವ ದೇವರಾಗಿ ಇಂದಿಗೂ ಸಂಗೊಳ್ಳಿರಾಯಣ್ಣ ಜನಮಾನಸದಲ್ಲಿ, ಲಾವಣಿಗಳ ಮೂಲಕ ಉಳಿದಿದ್ದಾನೆ.

ಫ್ಲೀಟ್‌ರು ಸಂಗ್ರಹಿಸಿದ ಲಾವಣಿಗಳಲ್ಲಿ ಬೆಳಗಾಂ ಜಿಲ್ಲೆಯ ಬಹಳ ಅಚ್ಚು ಮೆಚ್ಚಿನ ಲಾವಣಿ ಎಂದರೆ ಅದು 'ಸಂಗ್ಯಾನ ಅಪರಾಧ ಮತ್ತು ಸಾವು', ಬೈಲ ಹೊಂಗಲದಲ್ಲಿ ಕ್ರಿ.ಶ.೧೮೬೩ರ ಅಕ್ಟೋಬರ್ ೧೨ರಂದು ಒಂದು ಕೊಲೆಯ ಆಧಾರದ ಮೇಲೆ ಈ ಹಾಡಿನ ಕ್ರಿಯೆ ಸಾಗುತ್ತದೆ. ಕೊಲೆಗೆ ಆಹುತಿಯಾದವನು ಬಸವಲಿಂಗಣ್ಣ ಎಂಬ ಲೇವಾದೇವಿ ವ್ಯವಹಾರದವನು. ಇವನ ಸಾಲಗಾರರಲ್ಲಿ ಸಂಗ್ಯಾನೂ ಒಬ್ಬನಾಗಿದ್ದ. ಸಾಲದ ಭದ್ರತೆಗಾಗಿ ತನ್ನ ಜಮೀನು ಅಡ ಇಟ್ಟಿದ್ದ. ಸಾಲ ಅಧಿಕವಾದಾಗ ಅದನ್ನು ಕೋರ್ಟಿನ ಮೂಲಕ ತನ್ನಂತೆ ಮಾಡಿಕೊಂಡ ಬಸವಲಿಂಗಪ್ಪನನ್ನು ಕೊಲೆಗೈಯಲು ಸಿದ್ಧನಾದ ಸಂಗ್ಯಾ ತನ್ನ ಜೊತೆ ಸಹೋದರ ಪರ್ಸ್ಯನೊಂದಿಗೆ ಬಸಲಿಂಗಣ್ಣನ ಸಹೋದರರನ್ನು ಕೊಲ್ಲಲು ಪ್ರಯತ್ನಿಸಿ ವಿಫಲರಾಗುತ್ತಾರೆ.

ಅಲ್ಲಿಂದ ಬಸಲಿಂಗಣ್ಣನ ಮನೆಗೆ ಬಂದ ಸಂಗ್ಯಾ ಅವನ ಕತ್ತನ್ನು ಕತ್ತರಿಸಿ ಪರಾರಿಯಾಗಲು ಪ್ರಯತ್ನಿಸುತ್ತಾನೆ. ಈ ಸಂದರ್ಭವನ್ನು ಅರಿತ ಊರಿನ ಜನ ಭಯಗೊಂಡು ಓಡಿದರೆ ತಳವಾರರು ಮಾತ್ರ ಈತನನ್ನು ಹಿಡಿಯುವಲ್ಲಿ ಯಶಸ್ವಿಯಾಗುತ್ತಾರೆ. ಆ ಒಂದು ಸನ್ನಿವೇಶ ಈ ರೀತಿ ಇದೆ.

"ಬರುಹಂತ ಮಂದಿ ಇದಿರಿಗಿ ಬದಿಗಾಗಿ
ಅವನ ಹಿಡಿಯಲಿಲ್ಲ ಯಾರ್ ಯಾರಾ
ಬಂದರ ಹಳಬರಾ ಆಗ ಸುದ್ಧಿ ಆಗಿ
ಊರಾಗ ಆದಿತ ಬಬ್ಬಾಟ
ದಾಟಲಿಲ್ಲ ಹೊಂಗಲ ಗೇಟ"[೮೭]

ಇಲ್ಲಿ ಬಳಕೆಯಾದ ಹಳಬ ಎಂಬ ಪದ ತಳವಾರರಿಗೆ ಪರ್ಯಾಯವಾಗಿ ಬಳಸಲಾಗುತ್ತದೆ. ಊರಿನ ಜನರಿಂದಾಗದ ಕೆಲಸವನ್ನು ತಳವಾರ ತನ್ನ ಚಾಣಕ್ಷತೆಯಿಂದ ಅವನನ್ನು ಹಿಡಿಯುವಲ್ಲಿ ಯಶಸ್ವಿಯಾಗುತ್ತಾರೆ.

"ಬಿಕ್ಕಟ್ಟ ಹಾದಿ ವೋಣಿಯ ಸಂದಾ
ಹಳಬರ ಹಿಡಿದರ ಮಾಡಿ ಜಲದಾ
ಹೊಡಕೊಂತ ಚಾವಡಿಗೋದರ ಮರ್ಯಾದೆ ಉಳಿಯಲಿಲ್ಲ ಸಂಗ್ಯಾಂದಾ"[೮೮]

ಊರಿನ ಇಕ್ಕಟ್ಟಾದ ಓಣಿಯಲ್ಲಿ ಉಪಾಯದಿಂದ ಹಿಡಿದ ತಳವಾರ ಅವನನ್ನು ಹೊಡೆಯುತ್ತ ಚಾವಡಿಗೆ ಕರೆದುಕೊಂಡು ಬರುತ್ತಾರೆ. ಅಲ್ಲಿ ಕುಲಕರ್ಣಿ ಸಂಪಗಾವಿಯ ಮಾಮ್ಲೇದಾರನಿಗೆ ಕಾಗದ ಬರೆದು ಊರ ತಳವಾರನ ಕೈಯಲ್ಲಿ ಕಳುಹಿಸಿಕೊಡುತ್ತಾನೆ.

"ರಪೋರ್ಟ ಮಾಡೆರ ಕಾಗದ ಬರದ
ಹಳಬ ತೊಗೊಂಡ ಸಂಪಗಾಂವಿಗೆ ಹೋದ"[೮೯]

ಈ ಸಾಲಿನಿಂದ ಹಳಬರಲ್ಲಿ ಒಬ್ಬನಾದ ತಳವಾರ ಕಾಗದ ಪತ್ರರವಾನಿಸುವ ಓಲೆಕಾರಿಕೆ ಕೆಲಸವನ್ನು ಒಟ್ಟೊಟ್ಟಿಗೆ ನಿಭಾಯಿಸುತ್ತಿದ್ದ ಎಂಬುದು ತಿಳಿಯುತ್ತದೆ.

ಫ್ಲೀಟರು ಸಂಗ್ರಹಿಸಿದ ಮತ್ತೊಂದು ಪ್ರಸಿದ್ಧವಾದ ಲಾವಣಿ ಎಂದರೆ ಅದು 'ಹಲಗಲಿಯ ಪದ' ಈ ಪದದಲ್ಲಿ ಮುಧೋಳ ತಾಲೂಕಿನ ಹಲಗಲಿಯ ಬೇಡರು ಕಂಪನಿ ಸರಕಾರದ ವಿರುದ್ಧ ತಮ್ಮ ಆಯುಧ ರಕ್ಷಣೆಗಾಗಿಯೇ ನಡೆದ ಯುದ್ಧದಲ್ಲಿ ವೀರ ಮರಣವನ್ನು ಹೊಂದುತ್ತಾರೆ. ಅಲ್ಲಿ ನಡೆದ ಪ್ರತಿಯೊಂದು ಘಟನೆಯನ್ನು ನೈಜವೆಂಬಂತೆ ಲಾವಣಿ ಹಾಡಿನ ಮೂಲಕ ಜನಪದರು ಕಟ್ಟಿ ಹಾಡಿದ್ದಾರೆ. ಬೇಡರಿಗೆ ಆಯುಧಗಳೇ ಜೀವಾಳವಾಗಿದ್ದ ಕಾಲವೊಂದಿತ್ತು.

ಅಂದಿನ ತಮ್ಮ ಜೀವನ ನಿರ್ವಹಣೆಗೆ ಬೇಟೆ ಹಾಗೂ ಕಾವಲು ಕಾಯುವ ಕಾಯಕದಲ್ಲಿದ್ದ ಬೇಡರಿಗೆ ಆಯುಧಗಳು ಅವರ ಆಸ್ತಿಯಾಗಿದ್ದವು. ಇಂತಹ ಆಯುಧಗಳನ್ನು ಕಂಪನಿ ಸರಕಾರ ಸಂಗ್ರಹಿಸಲು ಮುಂದಾಯಿತು. ಆಗ ಜನರಲ್ಲಿದ್ದ ಬಿಲ್ಲು, ಬಾಣ, ಪಿಸ್ತೂಲು, ಖಡ್ಗ, ಭರ್ಜಿ ಮುಂತಾದ ಆಯುಧಗಳನ್ನು ಜನ ಸಾಮಾನ್ಯರು ತಂದು ಒಪ್ಪಿಸಿದರು. ಆದರೆ ಶೂರ ಸಿಪಾಯಿಗಳಾಗಿದ್ದ ಬೇಡರು ಮಾತ್ರ ತಮ್ಮ ಆಯುಧಗಳನ್ನು ಕೊಡಲಿಲ್ಲ. ಆಗ

"ಸಾಕಿದ ಹುಲಿ ಐತಿ ಹಲಗಲಿ
ನಂಮ ನಾಡಾಗ ಹಳಬರ ಮಂದಿ
ತರತುರಿ ಕತ್ತಿ ಕಟಾರಿ ಇದ ಕ್ಷಣಾದಾಗ"[೯೦]

ಸಾಕಿದ ಹುಲಿಯಂತಿರುವ ನಮ್ಮ ಹಳಬರು(ತಳವಾರರು) ಇರುವವರೆಗೂ ನಾವು ನಮ್ಮ ಆಯುಧಗಳನ್ನು ಕೊಡುವುದಿಲ್ಲ ಎಂದು ಸಿಪಾಯಿಗೆ ಹೇಳಿ ಕಳುಹಿಸುತ್ತಾರೆ. ಬ್ರಿಟೀಷರ ಸಾಹೇಬ ಉಪಾಯದಿಂದ ಕುಂದರಗಿಯ ಗೌಡನನ್ನು ಸಂಧಾನಕ್ಕಾಗಿ ಬೇಡರಲ್ಲಿಗೆ ಕಳುಹಿಸುತ್ತಾನೆ. ಗೌಡ ಪರಿಪರಿಯಾಗಿ ಬೇಡಿಕೊಂಡು ನಿಮ್ಮ ಆಯುಧಗಳನ್ನು ಒಪ್ಪಿಸಿ ಎಂದಾಗ

"ಕರಾಕರಾ ತಿಂದರೂ ಹಲ್ಲಾ ಹಳಬರೆಲ್ಲರಾ
ಬಂದಾರ ಚಾವಡಿಗೆ
ಚಾವಡೀಗೆ"[೯೧]

ಸಿಟ್ಟಾದ ಬೇಡರು ನಾವೇನು ಕೈಯಲ್ಲಿ ಬಳೆ ತೊಟ್ಟಿಲ್ಲ, ಆದದ್ದು ಆಗಲಿ ನಾವೂ ಕೊಡೋದಿಲ್ಲ ಎಂದು ಸಿಟ್ಟಿನಿಂದಲೇ ಚಾವಡಿಗೆ ಬಂದರು ಎಂಬುದು ತಿಳಿಯುತ್ತದೆ. ಇತ್ತ ಬ್ರಿಟೀಷರು ತಮ್ಮ ಉಪಾಯ ಹಾಗೂ ಶಕ್ತಿ ಬಲದಿಂದ ಏನೆಲ್ಲ ಮಾಡಿದರೂ ಬೇಡರು ಮಾತ್ರ ತಮ್ಮ ಆಯುಧಗಳನ್ನು ಕೊಡಲಿಲ್ಲ. ಈ ಪದ್ಯದಲ್ಲಿ ಆ ಸನ್ನಿವೇಶ ಮೂಡಿ ಬಂದಿದೆ.

"ಬೇಡಿಕಿ ಜನಾ ಮೆಳ್ಳ ಕುಲಾ
ಆಗಿ ಕುಶಿಯಾಲಾ ಕತ್ತಿ ಕೊಡಲಿಲ್ಲಾ"[೯೨]

ಬೇಡಿಕಿ ಜನ ಅಂದರೆ ಬೇಡರು, ಇವರೇ ಹಳಬರಾಗಿದ್ದ ಆ ಊರಲ್ಲಿ ಏನೂ ಮಳ್ಳತನ ಮಾಡಿದರೂ ಇವರು ಮಾತ್ರ ತಮ್ಮ ಜೊತೆಯಲ್ಲಿದ್ದ ಕತ್ತಿ ಕೊಡಲಿಲ್ಲ. ಬೇಡರಿಗೆ ಆಯೂಧಗಳೇ ಜೀವನಾಧಾರವಾಗಿದ್ದವು. ಹಲಗಲಿಯ ಬೇಡರಲ್ಲಿ ಅತೀ ಶೂರರಾಗಿದ್ದ ಪೂಜಾರಿ ಹನುಮ, ಬಾಲಣ್ಣ, ಜಡಗ, ರಾಮ ಇವರು ನಾವು ನಾಲ್ಕು ಮಂದಿ 'ಕೈಯಿನ ಹತಾರನ್ನು ಕೊಡಬಾರದು ಕೊಟ್ಟರೆ ನಮ್ಮ ಜೀವ ಹೋದಂತೆ' ಎಂದು ಶಪಥ ಮಾಡಿ ಸುತ್ತಿನ ಹಳ್ಳಿ, ದೊರೆಗಳಿಗೆ ಹೇಳಿ ನಿಮ್ಮೊಂದಿಗೆ ನಾವಿದ್ದೇವೆ ಎಂದು ಭರವಸೆ ನೀಡುತ್ತಾರೆ. ಅದೇ ರೀತಿ ಹೋರಾಟವನ್ನು ಮಾಡಿ ಕಂಪನಿ ಸರಕಾರದ ಹಲವರನ್ನು ಕೊಲ್ಲುತ್ತಾರೆ. ಇದರಿಂದ ರೋಸಿ ಹೋದ ಕಂಪನಿ ಅಧಿಕಾರಿಗಳು

ಕುತಂತ್ರದಿಂದ ಗುಂಡು ಹಾರಿಸುತ್ತಾರೆ. ಇದರಿಂದಾಗಿ ಆ ಊರಲ್ಲಿ "ಕಾವಲಿ ಹರಿತೋ ರಕ್ತಾ!" ಎಂಬ ಮಾತು ಅವರ ಶೌರ್ಯ ಸಾಹಸಗಳು ಹೇಗಿದ್ದವೆಂಬುದರ ಬಗೆಗೆ ಮನವರಿಕೆಯಾಗುತ್ತದೆ. ಇವರನ್ನು ಕೊಲ್ಲುವ ಸಂದರ್ಭದಲ್ಲಿ ಜಡಗ ಮತ್ತು ಬಾಲಣ್ಣರು

"ತೆರಿಬೇಕೊ ಕಂಣ ಹಳಬರಾ ಮೇಗ
ಏನು ಮಾಡುದೆಲ್ಲ ಮಾಡರಿ
ಕೊಲ್ಲಬೇಡಿರಿ ವೈದು ಅಡಿವ್ಯಾಗ"[೩]

ಇಲ್ಲಿ ಜಡಗ ಮತ್ತು ಬಾಲಣ್ಣರು ತಾವು ಹಳಬರು ನಮ್ಮ ಮೇಲೆ ಕರುಣೆ ತೋರಿಸಿ, ನಮ್ಮನ್ನು ಕೊಲ್ಲಬೇಡಿರಿ ಎಂದು ಬೇಡುವಲ್ಲಿ ಶೌರ್ಯ, ಸಾಹಸಗಳಿಂದ ಹೆಸರಾದ ಬೇಡರ ದುಸ್ಥಿತಿ ನಮಗರಿವಾಗುತ್ತದೆ. ಇಲ್ಲಿ ಹಳಬರು ಎಂಬ ಪದಕ್ಕೆ ತಳವಾರ, ಓಲೆಕಾರ ಎಂಬ ಪದಕ್ಕೆ ಪರ್ಯಾಯವಾಗಿ ಬಳಸಲಾಗುತ್ತದೆ. ಬೆಳಗಾಂ ಜಿಲ್ಲೆಯ ಕೆಲವು ಕಡೆ ಊರಿನ ಜನಸಂಖ್ಯೆಗೆ ಅನುಗುಣವಾಗಿ ತಳವಾರರ ಸಂಖ್ಯೆಯೂ ಹೆಚ್ಚಾಗಿ ಇರುತ್ತಿತ್ತು. ಅದು ಈ ಒಂದು ಪದ್ಯದಲ್ಲಿ ತಿಳಿಯುತ್ತದೆ.

"ಒಂಬತ್ತ ಮಂದಿ ಹಳಬರಾ
ಕಂಬ ಕಂಬಕ ಕಟ್ಟ್ಯಾರ
ಗುಂಡಿಲೊಗಶಾರ ಮುದೋಳದೊರಾಗ"[೪]

ಮುಧೋಳ ಎಂಬ ಊರಲ್ಲಿ ಒಂಬತ್ತು ಜನ ಹಳಬಿಕಿ ಜನ ಇದ್ದರೆಂದು ತಿಳಿಯುತ್ತದೆ.

ಒಟ್ಟಿನಲ್ಲಿ ಜನಪದರು ತಮ್ಮ ಸಾಮಾಜಿಕ ಜೀವನದಲ್ಲಿ ಘಟಿಸಿದ ಕೆಲವು ಪರಿಣಾಮಕಾರಿ ಘಟನೆಗಳನ್ನು ಆಧರಿಸಿ ಲಾವಣಿಯಂತಹ ಕಥನ ಗೀತೆಗಳ ಮೂಲಕ ಪ್ರಸ್ತುತಪಡಿಸುತ್ತಾರೆ. ಇಂತಹ ಅನೇಕ ಲಾವಣಿಗಳಲ್ಲಿ ಸಾಮಾಜಿಕ ಜೀವನದಲ್ಲಿ ನಿತ್ಯ ನಿರಂತರವಾಗಿ ಜನರ ಸೇವೆ ಮತ್ತು ಸನಿಹದಲ್ಲಿದ್ದ ತಳವಾರ, ತನ್ನ ಕಾರ್ಯ ಚಟುವಟಿಕೆ ಹಾಗೂ ಸಾಹಸ ಗುಣಗಳಿಂದಾಗಿ ಜನಪದರ ಬಾಯಲ್ಲಿ ನಿತ್ಯ ನಿರಂತರವಾಗಿ ನಲಿದಾಡಿದ್ದಾನೆ. ಬ್ರಿಟೀಷರ ನಿಶಸ್ತ್ರೀಕರಣ ಕಾಯಿದೆ ೧೮೫೭ರ ಅನ್ವಯ ಆಯುಧಗಳೇ ಜೀವನಾಧಾರವಾಗಿದ್ದ ಬೇಡರಿಗೆ ಇಂತಹ ಕಾಯ್ದೆಯ ಪರಿಣಾಮದಿಂದಾಗಿ ಹೋರಾಡಿ ಸಾಯಬೇಕಾಯಿತು. ಈ ರೀತಿ ನಿಶಸ್ತ್ರೀಕರಣ ಕಾಯ್ದೆ ವಿರೋಧಿಸಿ ಹೋರಾಡಿ ಸತ್ತವರಲ್ಲಿ ಬೇಡರೇ ಅಧಿಕರಾಗಿದ್ದಾರೆ ಎಂಬುದು ಇತಿಹಾಸದಿಂದ ತಿಳಿಯುತ್ತದೆ.

**ಒಡಬು/ವೀರಗಾಸೆ**

ಕನ್ನಡ ಜನಪದ ಸಾಹಿತ್ಯ ಪ್ರಕಾರಗಳಲ್ಲಿ ಒಂದಾಗಿರುವ ಒಡಬು ವೀರಭದ್ರನ ಅವತಾರವನ್ನು ಪ್ರತಿನಿಧಿಸುವ ವೀರಗಾಸೆ ಕುಣಿತದೊಂದಿಗೆ ಪುರವಂತರು ಹೇಳುತ್ತಾರೆ. ಇದನ್ನು ಶೈವ ಸಂಪ್ರದಾಯಕ್ಕೆ

ಸೇರಿದ ಕರ್ನಾಟಕದ ಒಂದು ಜನಪದ ಧಾರ್ಮಿಕ ವೀರನೃತ್ಯ ಎಂದೂ ಸಹ ಕರೆಯುತ್ತಾರೆ. ಇಬ್ಬರಿಂದ ಮೂವತ್ತು ಜನರಷ್ಟು ಮಂದಿ ಭಾಗವಹಿಸುವ ಈ ಕುಣಿತದಲ್ಲಿ ವೀರಭದ್ರನ ಅವತಾರಗಳನ್ನು ಚಮಾಳ, ಕರಡೆ, ದೋಣು, ತಾಳ, ಓಲಗ–ವಾದ್ಯಗಳು, ಕರಡಿವಾದ್ಯದಂತಹ ಪಂಚ ವಾದ್ಯಗಳ ಬಳಕೆಯೊಂದಿಗೆ ಪ್ರದರ್ಶಿಸಿಸುತ್ತಾರೆ. ಈ ಕಲೆಯು ಸಾಹಿತ್ಯ–ವಾದ್ಯ, ಸಂಗೀತ–ನೃತ್ಯ, ಕಲೆಗಳ ಮೂಲಕ ದೈವೀ ಅರಾಧನೆಯ ಒಂದು ರೂಪವಾಗಿ, ಸಾಂಸ್ಕೃತಿಕ ಹಾಗೂ ಮನೋರಂಜನೆಯ ಸಾಧನವಾಗಿ ಬೆಳೆದುಬಂದಿದೆ.

'ಹಬ್ಬ ಹರಿದಿನಗಳಲ್ಲಿ, ಜಾತ್ರೆ–ಉತ್ಸವಗಳಲ್ಲಿ, ಮದುವೆ, ಮನೆದೇವರನ್ನು ಮಾಡುವಾಗ ಒಡಬುಗಳನ್ನು ಹೇಳುವುದು ಹೆಚ್ಚು. ಒಡಬು ಹೇಳುವುದು ಪುರವಂತರಿಗೆ ಸಿದ್ದಿಸಿದ ಕಲೆ. ಇವರು ಹೇಳುವ ಬಹುತೇಕ ಒಡಬು ಶಿವನನ್ನು, ಶಿವನ ಅಧಿಕ್ಯವನ್ನು ಕುರಿತು ಉದ್ಗಡಣೆಗಳಾಗಿವೆ. ವೀರಭದ್ರನ ಅಂಗವಾಗಿಯೇ ಒಡಬು ರೂಪುಗೊಂಡು ಬೆಳೆದು ಬಂದಿದೆ. ಕುಣಿತದೊಂದಿಗೆ ಸಾಗುವ ಈ ಒಡಬುಗಳು ಸ್ತೋತ್ರ ರೂಪದ ಉದ್ಘೋಷಗಳಂತೆ ಮೊಳಗಿ ಜನರನ್ನು ಕುಣಿಯುವಂತೆ ಮಾಡುತ್ತವೆ. ವೀರಾವೇಷದಿಂದ ವಾದ್ಯಗಳ ಗತ್ತಿಗೆ ತಕ್ಕಂತೆ ಲಯಬದ್ಧವಾಗಿ ತನ್ನ ಕೈಯಲ್ಲಿರುವ ಖಡ್ಗವನ್ನು ಝುಳಪಳಿಸುತ್ತಾ ವೃತ್ತಾಕಾರವಾಗಿ ಕುಣಿಯುತ್ತಿರುತ್ತಾರೆ. ಇಂತಹ ವೀರವೇಶದ ಒಡಬುಗಳಲ್ಲಿ ಸಹ ತಳವಾರರ ಉಲ್ಲೇಖಗಳು ಬರುತ್ತವೆ.

ಬಳ್ಳಾರಿ ಜಿಲ್ಲೆಯ ಗೆಣಕಿಹಾಳ ಗ್ರಾಮದ ಜಿ.ಎಂ.ಹಂಪಯ್ಯನವರು ತಾವು ಹೇಳುವ ಒಡಬು ಮತ್ತು ವೀರಗಾಸೆ ನೃತ್ಯದಲ್ಲಿ ತಳವಾರರ ಕುರಿತಾದ ಒಡಬುಗಳನ್ನು ಹೇಳುತ್ತಾರೆ. ಅದರಲ್ಲಿ

"ಕೋಣನ ಕೊಂಬಿನ ಮೇಲೆ ಕಠೋರವೆಂಬ ಪಟ್ಟಣ ಪುಟ್ಟಿತಯ್ಯ, ಆ ಪಟ್ಟಣದಲ್ಲಿ ಆಯ್ ಆಯ್ ಎಂಬ ಗೌಡ, ಉಯ್ ಉಯ್ ಎಂಬ ತಳವಾರ, ಮ್ಯೆಯ್ ಮ್ಯೆಯ್ ಎಂಬ ಕುಲಕರ್ಣಿ. ತಳವಾರನ ಹೆಂಡತಿಗೆ ನಡುವಿಲ್ಲ. ನಡುವಿಲ್ಲದ ತಳವಾರನ ಹೆಂಡತಿ ತಳವಿಲ್ಲದ ಕೊಡವನ್ನೇ ಹೊತ್ತುಕೊಂಡು ಜರಿಯಿಲ್ಲದ ಬಾವಿಗೆ ಹೋದಳಯ್ಯ......... ಭದ್ರಕಾಳಿಯ ರಮಣ, ಶಿವದ್ರೋಹಿಗಳಿಗೆ ನೀನೇ ಗಂಡ ಕಡೆ ಕಡೆ."[೫೫] ಎಂದು ವೀರಭದ್ರನ ಪವಾಡಗಳನ್ನು ಹೇಳುತ್ತಾ ನೃತ್ಯ ಮಾಡುತ್ತಾರೆ. ಸ್ವಾತಂತ್ರ ಪೂರ್ವ ಕಾಲದಲ್ಲಿ ಯಾವುದೇ ಒಂದು ಊರಿನ ಆಡಳಿತದ ಜವಾಬ್ದಾರಿ ಆ ಊರಿನ ಗೌಡ, ಕುಲಕರ್ಣಿ ಮತ್ತು ತಳವಾರನ ಮೇಲಿತ್ತು. ಇಂತಹ ಜವಾಬ್ದಾರಿಯುತ ಕೆಲಸದಲ್ಲಿ ಗೌಡ, ಕುಲಕರ್ಣಿ ಮತ್ತು ತಳವಾರರು ಸದಾ ಕ್ರಿಯಾಶೀಲರಾಗಿರು ತ್ತಿದ್ದರು. ಇವರ ಜೊತೆ ಜೊತೆಗೆ ತಳವಾರನ ಹೆಂಡತಿ ಕ್ರಿಯಾಶೀಲಳಾಗಿ ಸೇವೆಗೈದು ತನ್ನ ನಡುವನ್ನೆ ಕಳೆದುಕೊಂಡಿದ್ದಾಳೆ ಎಂಬ ಅರ್ಥದಲ್ಲಿ ಈ ಒಡಬುವನ್ನು ರಚಿಸಿದಂತೆ ಕಾಣುತ್ತದೆ. ಇದರೊಂದಿಗೆ ಗ್ರಾಮ ಜೀವನದ ಆಡಳಿತದ ವೈಖರಿಯನ್ನು ಭಕ್ತಿಭಾವದ ಮೂಲಕ ಜನರಲ್ಲಿ

ಪ್ರಚಾರಪಡಿಸುವ ಕಾರ್ಯವನ್ನು ಇಂತಹ ಒಡಬುಗಳ ಮೂಲಕ ಜನಪದರು ಮಾಡಿದ್ದಾರೆ ಎಂದು ಹೇಳಬಹುದು.

## ಕೃಷಿ ಆಚರಣೆಗಳು

ಭಾರತ ಕೃಷಿ ಪ್ರಧಾನವಾದ ಹಳ್ಳಿಗಳಿಂದ ಕೂಡಿದ ದೇಶ. ಇಲ್ಲಿ ಕೃಷಿ ಮತ್ತು ಕೃಷಿ ಕರನ್ನು ಕೇಂದ್ರವಾಗಿಟ್ಟುಕೊಂಡು ಹಲವಾರು ವೃತ್ತಿಗಳು, ಕುಲಕಸುಬುಗಳು ಹುಟ್ಟಿಕೊಂಡಿವೆ. ಇವುಗಳ ಹಿನ್ನಲೆಯಲ್ಲಿಯೇ ಹಲವಾರು ಕೃಷಿ ಆಚರಣೆಗಳು ಹುಟ್ಟಿಕೊಂಡಿವೆ. ಅವುಗಳಲ್ಲಿ ಗುಳ್ಳವ್ವ, ಜೋಕುಮಾರ, ಕಾರ ಹುಣ್ಣಿಮೆ, ಮಣ್ಣೆತ್ತಿನ ಅಮವಾಸೆ, ಎಳ್ಳ ಅಮವಾಸೆ ಮುಂತಾದ ಹಬ್ಬ ಮತ್ತು ಕೃಷಿ ಸಂಬಂಧಿತ ಸಂಪ್ರದಾಯಿಕ ಆಚರಣೆಗಳನ್ನು ಪರಂಪರಾಗತವಾಗಿ ಮುಂದುವರೆಸಿ ಕೊಂಡು ಬಂದಿದ್ದಾರೆ. ವರ್ಷಕ್ಕೊಮ್ಮೆ ನಡೆಯುವ ಇಂತಹ ಆಚರಣೆಗಳಿಗೆ ವೈಜ್ಞಾನಿಕ ಹಿನ್ನಲೆ ಮತ್ತು ಕಾರಣಗಳೂ ಇವೆ. ಆದರೂ ಇವುಗಳನ್ನು ನಂಬಿಕೆಗಳಾಗಿ ಜನಪದರು ಜಾತ್ರೆ, ಉತ್ಸವ ಗಳ ಮೂಲಕ ಆಚರಿಸಿ ಸಡಗರ ಪಟ್ಟು, ಜನರನ್ನು ರಂಜಿಸುವ ಕಲಾಭಿವ್ಯಕ್ತಿಯ ಮಾಧ್ಯಮಗಳಾಗಿಯೂ ಇಂದಿನ ಕೃಷಿ ಆಚರಣೆಗಳು ಇವೆ. ಇಂತಹ ಕೃಷಿ ಆಚರಣೆಗಳಲ್ಲಿ ಮುಖ್ಯವಾಗಿ ಮಳೆ, ಬೆಳೆ ಹಾಗೂ ಸಂವೃದ್ಧಿಯ ಸಂಕೇತಗಳಾಗಿ ಗುಳ್ಳವ್ವನ ಆಚರಣೆ, ಜೋಕುಮಾರನ ಆಚರಣೆ, ಕಾರ ಹುಣ್ಣಿಮೆ, ಎಳ್ಳು ಅಮವಾಸೆಯಂತಹ ಕೃಷಿಕೇಂದ್ರಿತ ಆಚರಣೆಗಳು ಜನಪದರಲ್ಲಿ ಇಂದಿಗೂ ಮುಂದುವರೆದುಕೊಂಡು ಬಂದಿದೆ.

## ಮಳೆಗಾಗಿ ಭಿಕ್ಷೆ

ಉತ್ತರ ಕರ್ನಾಟಕದಲ್ಲಿ ನಡೆಯುವ ವಿಶೇಷ ಆಚರಣೆ ಇದಾಗಿದೆ. ಮಳೆ ಬೀಳದಿದ್ದಾಗ ಓಣಿ ಓಣಿ ತಿರುಗಿ ಜೋಳಿಗಿ ಹಾಕಿಕೊಂಡು ಭಿಕ್ಷೆ ಬೇಡುವ ಆಚರಣೆ ವಿಶೇಷವಾಗಿದೆ. ಭಿಕ್ಷೆ ಬೇಡಿದರೆ ಮಳೆ ಬರುತ್ತದೆ ಎಂಬ ದೃಢ ನಂಬಿಕೆ ಈ ಆಚರಣೆಗೆ ಮೂಲ ಕಾರಣ. ಇಂತಹ ಆಚರಣೆಯಲ್ಲಿ ಊರ ತಳವಾರನು ಊರಿನ ಯುವಕರನ್ನು ಒಂದೆಡೆ ಸೇರಿಸಿ ಒಬ್ಬನಿಗೆ ಸೀರೆ ಉಡಿಸಿ, ಕುಪ್ಪಸ ತೊಡಿಸಿ, ಬಳೆ ಹಾಕಿ, ಕುಂಕುಮ, ಇಟ್ಟು ಹೆಣ್ಣಿನ ರೂಪ ಧರಿಸುತ್ತಾನೆ. ಅವರು ಒಂದು ಕೈಯಲ್ಲಿ ಕೋಲು ಮತ್ತೊಂದು ಕೈಯಲ್ಲಿ ನೀರು ತುಂಬಿದ ಗಡಿಗೆ ಹಿಡಿದು ಕಂಕುಳಲ್ಲಿ ಮಗುವೊಂದನ್ನು ಎತ್ತಿಕೊಂಡು ಭಿಕ್ಷೆ ಬೇಡುವ ಹೆಂಗಸಿನಂತೆ ಬೀದಿಗೆ ಹೊರಡುತ್ತಾರೆ. ಮನೆ ಮನೆಯ ಮುಂದೆ ನಿಂತು ದೊಡ್ಡ ಧ್ವನಿಯಲ್ಲಿ

"ಯವ್ವ ನೀಡವ್ವ, ಯಕ್ಕ ನೀಡವ್ವ
ಮಕ್ಕಳು ಮರಿ ಹಸಗೊಂಡಾವೆ.....

ಎಂದು ಹಾಡುತ್ತಾರೆ. ಹೀಗೆ ಮನೆ ಮನೆಗೆ ಹೋಗಿ ಭಿಕ್ಷೆ ಬೇಡುವಲ್ಲಿ ಒಂದು ಕುತೂಹಲಕಾರಿ ಅಂಶವಿದೆ. ಪ್ರತಿಯೊಂದು ಮಳೆಯೂ ಒಂದೊಂದು ಜನಾಂಗದ ಮನೆಯಲ್ಲಿ ವಾಸವಾಗಿರುತ್ತದೆ

ಎಂಬ ನಂಬಿಕೆ ಇದೆ. ಉದಾಹರಣೆಗೆ ಅಶ್ವಿನಿಯು ಹೂಗಾರರ ಮನೆ, ಕೃತ್ತಿಕೆಯು ತಳವಾರರ ಮನೆ, ಭರಣಿಯು ಅಗಸರ ಮನೆ, ರೋಹಿಣಿಯು ಬಣಜಿಗರ ಮನೆ, ಮೃಗಶಿರವು ಕ್ಷಾಮಟರ(ವೈಶ್ಯ) ಮನೆಯಲ್ಲಿ ವಾಸವಾಗಿರುತ್ತದಂತೆ. ಉತ್ತರ ಕರ್ನಾಟಕದಲ್ಲಿ ಅತ್ಯಂತ ನಂಬಿಕಸ್ತ ಮಳೆಯಾದ ಮೃಗಶಿರವು ಕ್ಷಾಮಟರ ಮನೆಯಲ್ಲಿ ಇದ್ದರೆ ಅದು ಅಲ್ಲಿಂದ ಹೊರ ಬರುವುದು ಅಸಾಧ್ಯದ ಮಾತು ಜನಪದರಲ್ಲಿದೆ. ಅದಕ್ಕಾಗಿ ಹೇಗಾದರೂ ಮಾಡಿ ಅದನ್ನು ಅಲ್ಲಿಂದ ಹೊರತರಬೇಕೆಂದು ಪಣತೊಟ್ಟ ಯುವಕರ ಗುಂಪು ಅವರ ಮನೆ ಮುಂದೆ ಹಾಡು ಹೇಳುತ್ತಾ ಅವರ ಮನೆಯಿಂದ ಬಲವಂತವಾಗಿ ದವಸ ಧಾನ್ಯ ಪಡೆದು, ನಂತರ ತಾವು ತಂದ ಮಡಿಕೆಯನ್ನು ಅವರ ಮನೆಯ ಮುಂದೆ ದೂಪ್ಪೆಂದು ಒಡೆದು ಬರುತ್ತಾರೆ. ಆಗ ಮೃಗಶಿರ ಮಳೆ ಬರುತ್ತದೆ ಎಂಬುದು ಜನಪದರ ನಂಬಿಕೆಯಾಗಿದೆ. ಈ ಆಚರಣೆಯಲ್ಲಿ ತಳವಾರ ಉಪಸ್ಥಿತಿ ಮುಖ್ಯವಾಗಿರುತ್ತದೆ.

**ಗುಳ್ಳವ್ವನ ಆಚರಣೆ**

ಗುಳ್ಳವ್ವನ ಹಬ್ಬ ಉತ್ತರ ಕರ್ನಾಟಕದಲ್ಲಿ ಆಷಾಡ ಮಾಸದಲ್ಲಿ ಆಚರಿಸುವ ಒಂದು ಹಬ್ಬ. ಮಣ್ಣೆತ್ತಿನ ಅಮವಾಸೆಯಿಂದ ನಾಗರ ಅಮವಾಸೆಯವರೆಗೆ ಒಂದು ತಿಂಗಳ ಕಾಲ ಈ ಹಬ್ಬವನ್ನು ಆಚರಿಸಲಾಗುತ್ತದೆ. ಮಣ್ಣಿನಿಂದ ಗಂಡಸರು ಬಸವಣ್ಣನನ್ನು ಮಾಡಿದರೆ ಹೆಂಗಸರು ಗುಳ್ಳವ್ವನನ್ನು ಮಾಡುತ್ತಾರೆ. ಒಂದು ತಿಂಗಳ ಕಾಲ ಗುಳ್ಳವ್ವನ ಮಹಿಮೆ, ಪವಾಡ ಹಾಗೂ ಅವಳ ಅಲಂಕಾರ ಕುರಿತು ಹಾಡು ಹೇಳುತ್ತಾರೆ. ಪ್ರತಿವಾರವೂ ಒಂದೊಂದು ಆಕಾರದ ಗುಳ್ಳವ್ವನನ್ನು ಮಾಡುತ್ತಾರೆ.

ಮೊದಲನೇ ಮಂಗಳವಾರ ಲಿಂಗಾಕಾರದ ಗುಳ್ಳವ್ವನನ್ನು ಕೆಲವು ಕಡೆ ಮಾಡಿದರೆ, ಮತ್ತೆ ಕೆಲವು ಕಡೆ ಚೌಕಾಕಾರದ ಎತ್ತರದ ಗುಳ್ಳವ್ವನನ್ನು ಮಾಡಿ ಅದಕ್ಕೆ 'ಕೊಂತೆವ್ವ'ನೆಂದು ಕರೆಯುತ್ತಾರೆ. ಎರಡನೇ ಮಂಗಳವಾರ ಗುಡಿಯಾಕಾರದ ಗುಳ್ಳವ್ವನನ್ನು ಮಾಡಿ 'ನೆಡಿಗುಳ್ಳವ್ವ'ನೆಂದೂ 'ಗದ್ದಿಗೆ ಗುಳ್ಳವ್ವನೆಂದೂ' ಕರೆಯುತ್ತಾರೆ. ಮೂರನೇ ವಾರ ಕಟ್ಟೆಯಾಕಾರದ ಗುಳ್ಳವ್ವನನ್ನು ಮಾಡಿ, ಕಪಾಟುಗಳನ್ನು ಮಾಡಿ, ಕಪಾಟು ಗುಳ್ಳವ್ವನೆಂದೂ ಕರೆಯುತ್ತಾರೆ. ನಾಲ್ಕನೇ ವಾರ ನವಿಲಾಕಾರದ ಗುಳ್ಳವ್ವನನ್ನು ಕುಂಬಾರರ ಮನೆಯವರು ತಯಾರಿಸಿ ಕೊಡುತ್ತಾರೆ. ಇದಕ್ಕೆ 'ತಿಗರಿ ಗುಳ್ಳವ್ವನೆಂದು ಕರೆಯುತ್ತಾರೆ. ಐದನೇ ವಾರದಂದು ಚೆಂಗುಳ್ಳವ್ವ ಮಾಡುತ್ತಾರೆ.

ಗುಳ್ಳವ್ವನ ರಚನೆ ಹಾಗೂ ಹೆಸರುಗಳಲ್ಲಿ ಸಾಕಷ್ಟು ಪ್ರಾದೇಶಿಕ ಭಿನ್ನತೆಗಳಿರುವಂತೆ ಹಾಡುಗಳಲ್ಲಿಯೂ ವ್ಯತ್ಯಾಸಗಳಿರುವುದು ಕಂಡುಬರುತ್ತದೆ. ಗುಳ್ಳವ್ವನ ಮಣ್ಣು ತರಲು ವಾರಿಗೆಯ ಗೆಳತಿಯರೆಲ್ಲಾ ಕೂಡಿಕೊಂಡು ತಿಂಡಿ ತಿನಿಸುಗಳೊಂದಿಗೆ ಹೊಳೆ, ಹಳ್ಳ, ಕೆರೆಗಳ ದಂಡೆಗೆ ಹೋಗುತ್ತಾರೆ. ಅಲ್ಲಿಂದ ಮಣ್ಣು ತಂದು ಹಾಡುತ್ತಾ ಬರುತ್ತಾರೆ. ಗುಳ್ಳವ್ವ ಭೂತಾಯಿಯ ಸ್ವರೂಪ, ಆಕೆಯ ಪಕ್ಕದಲ್ಲಿ ಮಣ್ಣಿನ ಬಸವಣ್ಣನನ್ನು ಇಟ್ಟಿರುತ್ತಾರೆ. ಇಲ್ಲಿ ಭೂತಾಯಿ ಮತ್ತು

ಬಸವಣ್ಣ ಕೃಷಿಕರ ಜೀವನಾಡಿ. ಅದಕ್ಕಾಗಿ ಇಲ್ಲಿ ಬಳಕೆಯಾಗುವ ಪ್ರತಿಯೊಂದು ವಸ್ತು, ಹಾಡು, ಆಚರಣೆಗಳೆಲ್ಲವೂ ಕೃಷಿ ಆಚರಣೆಗೆ ಸಂಬಂಧಿಸಿದವುಗಳಾಗಿರುತ್ತವೆ. ಗುಳ್ಳವ್ವನ ಜೊತೆಗೆ ಮಣ್ಣಿನ ಆರತಿ, ಸೀರೆ, ಖಣ, ಕುಂಕುಮ ಭರಣಿ, ಬಳೆ, ತರಕಾರಿ, ಜೊತೆಗೆ ಒಂದು ಕೋಣವನ್ನು ಮಣ್ಣಿನಿಂದಲೇ ಮಾಡಿರುತ್ತಾರೆ. ಸಂಜೆ ಪೂಜೆಯ ನಂತರ ಮಣ್ಣಿನ ಖಡ್ಗದಿಂದಲೇ ಕೋಣದ ಬಲಿ ಕೊಡುತ್ತಾರೆ. ಇದು ಗುಳ್ಳವ್ವನನ್ನು ಶಕ್ತಿದೇವಿಯನ್ನಾಗಿಯೂ, ಕೋಣವನ್ನು ಮಹಿಷಾಸುರನನ್ನಾಗಿಯೂ ಗ್ರಾಮೀಣ ಜನರು ಅರ್ಥೈಸುತ್ತಾರೆ. ಮರುದಿನ ಬುಧವಾರದಂದು ಹೊತ್ತುಕೊಂಡು ಗುಳ್ಳವ್ವನನ್ನು ಆಡಲಿಕ್ಕೆ ಹೋಗುತ್ತಾರೆ. ಗುಳ್ಳವ್ವನನ್ನು ಒಂದೆತ್ತರ ಗುಳ್ಳವ, ಎರಡೆತ್ತರ ಗುಳ್ಳವ್ವ, ಮೂರೆತ್ತರ ಗುಳ್ಳವ, ನಾಲ್ಕೆತ್ತರ ಗುಳ್ಳವ್ವ, ಐದೆತ್ತರ ಗುಳ್ಳವ್ವ, ಹೀಗೆ ವಾರಕ್ಕೊಂದು ಎತ್ತರ ಏರಿಸುತ್ತಾ ಹೋಗುವ ಕ್ರಮವಿದೆ. ಇಂತಹ ಗುಳ್ಳವನನ್ನು ಹೊತ್ತುಕೊಂಡು ಕೆಲವರು ಹಾಡು ಹೇಳಿದರೆ ಇನ್ನು ಕೆಲವರು ನೃತ್ಯ ಮಾಡುತ್ತಾ ಸಾಗುತ್ತಾರೆ. ಈ ಸಂದರ್ಭದಲ್ಲಿ ಕೆಲವು ಅಶ್ಲೀಲ ಹಾಡುಗಳನ್ನು ಹಾಡುವುದುಂಟು. ಗುಳ್ಳವ್ವನ ಸಿರ ಕಡಿಯಲು ಬರುವ ತಳವಾರನನ್ನು ಕುರಿತು ಹಾಡುಗಳಿವೆ. ಆ ತಳವಾರ ಭೂಮಿ ಅಗೆದು ಬೆಲೆ ತೆಗೆಯುವ ಕೃಷಿಕನಾಗಿರಬಹುದು, ಇಲ್ಲವೇ ಊರಲ್ಲಿ ಅನೀತಿ, ಅನಾಚಾರ ನಡೆಯದಂತೆ ತಡೆಯುವ ಕಠಿಣಾಧಿಕಾರಿಯಾಗಿರಬಹುದು. ಈ ಕಾರಣಕ್ಕೆ ತಳವಾರನನ್ನು ಕುರಿತು ಅಶ್ಲೀಲವಾಗಿ ಹಾಡುವ ಪದ್ಧತಿ ಇದೆ. ಉದಾಹರಣೆಗೆ 'ಗುಳ್ಳವ್ವನ ಕುಂಡ್ಯಾನ ಗುಗ್ಗರಿ ಬಿದ್ದಾವ ಆಯ್ಕೊಂಡು ತಿನ್ನ ತಳವಾರ...' ಎಂದು ವಾಚಿಸುವುದು ಕಾಣಬಹುದು.

ಗುಳ್ಳವ್ವನನ್ನು ಕೂಡಿಸಿದ ಪ್ರತಿಯೊಂದು ಮನೆಯಲ್ಲೂ ವಾರಿಗೆಯ ಗೆಳೆತಿಯರು ಮಣ್ಣಿನಾರತಿ ತೆಗೆದುಕೊಂಡು ಹೋಗಿ ಹಾಡು ಹೇಳುತ್ತಾರೆ. ಈ ವಾರಿಗೆಯ ಗೆಳತಿಯರಲ್ಲಿ ವಯಸ್ಕರು ಅಧಿಕವಾಗಿರುತ್ತಾರೆ. ಇವರ ಆಟಟೋಪಗಳಿಗೆ ಎಡೆಗೊಡದಂತೆ ಕಾಯುವ ತಳವಾರ ಇವರ ಪಾಲಿನ ಶತ್ರುವಾಗಿರಬಹುದು. ಅದಕ್ಕಾಗಿ ಇಂತಹ ಹಾಡುಗಳನ್ನು ಹಾಡುತ್ತಾರೆ ಎಂಬುದು ಕೆಲವರ ವಾದವಾಗಿದೆ.

ಒಟ್ಟಿನಲ್ಲಿ ಭೂತಾಯಿ ಪ್ರತೀಕ ಪಾರ್ವತಿಯ ಪ್ರತಿರೂಪ ಎಂದು ಆಚರಿಸುವ ಈ ಗುಳ್ಳವ್ವನ ಆಚರಣೆಯಲ್ಲಿ ಕೃಷಿಕರು ಭೂಮಿ ಮತ್ತು ಬಸವಣ್ಣನ ಕುರಿತಾಗಿರುವ ಶ್ರದ್ಧೆ, ಭಕ್ತಿಗಳು ಒಡಮೂಡಿ ಭೂತಾಯಿ ಸಮೃದ್ಧ ಬೆಳೆ ತರಲಿ ಎಂದು ಪೂಜಿಸುವ ಹಬ್ಬವಾಗಿದೆ.

**ಕಾರ ಹುಣ್ಣಿಮೆ**

ಕಾರಹುಣ್ಣಿಮೆ ಉತ್ತರ ಕರ್ನಾಟಕದ ಜನರಿಗೆ ವಿಶೇಷ ಹಬ್ಬವಾಗಿದೆ. ಜಾನುವಾರುಗಳೇ ಈ ಹಬ್ಬದ ಕೇಂದ್ರ ಬಿಂದು. ಬಯಲು ಸೀಮೆಯಲ್ಲಿ ಸಂಕ್ರಾಂತಿ ಇರುವಂತೆ, ಬಿಸಿಲು ನಾಡಿನವರಿಗೆ ಅದರಲ್ಲೂ ಉತ್ತರ ಕರ್ನಾಟಕದ ರೈತರಿಗೆ ಕಾರಹುಣ್ಣೀಮೆ ಅತೀ ಮುಖ್ಯವಾದುದಾಗಿದೆ. ಜೂನ್ ತಿಂಗಳು ಮಳೆಗಾಲ ಕಾಲಿಡುವ ಸಮಯದಲ್ಲಿ ಈ ಹಬ್ಬ ನಡೆಯುವುದು ವಿಶೇಷ.

ಅಂದು ರೈತರು ತಮ್ಮ ಎತ್ತುಗಳಿಗೆ ಮೈತೊಳೆದು ವಿಧ ವಿಧವಾಗಿ ಬಣ್ಣ, ಹೂಗಳಿಂದ ಶೃಂಗರಿಸುತ್ತಾರೆ. ಹೀಗೆ ಶೃಂಗರಿಸಿದ ಎತ್ತುಗಳನ್ನು ಅಗಸಿಯ ಬಾಗಿಲಲ್ಲಿ ಕರಿ ಹರಿಯುವ ಸ್ಪರ್ಧೆಯಲ್ಲಿ ಪರಸ್ಪರ ಎತ್ತುಗಳನ್ನು ಓಡಿಸುವ ಕಾರ್ಯ ನಡೆಯುತ್ತದೆ. ಈ ಸಂದರ್ಭದಲ್ಲಿ ಊರಿನ ತಳವಾರ ಹಿಂದಿನ ರಾತ್ರಿ ಊರಲ್ಲಿ ಡಂಗುರ ಹೊಡೆಸಿ ಎಲ್ಲಾ ಕೃಷಿಕರು ಆ ದಿನ ತಮ್ಮ ಜಾನುವಾರುಗಳಿಗೆ ವಿಶ್ರಾಂತಿ ನೀಡಿ, ಊರ ಅಗಸಿಯಲ್ಲಿ ಕಟ್ಟಿದ ಕರಿ ಹರಿಯಲು ಎಲ್ಲರೂ ಪಾಲ್ಗೊಳ್ಳುವಂತೆ ಡಂಗುರ ಹೊಡೆಸುತ್ತಾನೆ. ನಂತರ ತಾನೇ ಮುಂದೆ ನಿಂತು ತಳಿರು ತೋರಣಗಳಿಂದ ಶೃಂಗರಿಸಿದ ಊರ ಅಗಸಿಗೆ ದಾರದಿಂದ ಮಾಡಿದ ಕರಿ ಕಟ್ಟಿಸುತ್ತಾನೆ. ಕರಿ ಹರಿಯುವ ಹಿಂದಿನ ದಿನ ಹೊನ್ನುಗ್ಗಿ ದಿವಸವೆಂದು ಆಚರಿಸುತ್ತಾರೆ. ಅಂದು ಜೋಳದ ನುಚ್ಚಿನಲ್ಲಿ ಬೆಲ್ಲ, ಬೇಳೆ ಹಾಕಿ ಹುಗ್ಗಿ ಮಾಡಿ ಎತ್ತುಗಳಿಗೆ ತಿನ್ನಿಸುತ್ತಾರೆ. ಮಾರನೇ ದಿನ ಊರಿನ ಗೌಡ, ತಳವಾರನ ಮೂಲಕ ಊರಲ್ಲಿ ಅಗಸಿ ಬಾಗಿಲಿಗೆ ಕಾಯಿ, ಎಲೆ, ಅಡಿಕೆ, ಅರಿಶಿಣ, ಉತ್ತತ್ತಿ, ಹೋಳಿಗೆ ಎಡೆಯನ್ನು ಸೇರಿಸಿ ಪೂಜಿಸಿ ಕಟ್ಟಿದ ಗಂಟನ್ನು ದಾರಕ್ಕೆ ಕಟ್ಟಿ ಅಗಸಿ ಬಾಗಿಲಿಗೆ ಅಡ್ಡಲಾಗಿ ಕಟ್ಟಿಸುತ್ತಾನೆ.

ಆ ದಿನ ಸಂಜೆ ರೈತರೆಲ್ಲರೂ ತಮ್ಮ ಎತ್ತುಕರುಗಳೊಂದಿಗೆ ಊರ ಅಗಸಿಗೆ ಬರುತ್ತಾರೆ. ಅಗಸಿಯಲ್ಲಿ ಗೌಡ, ತಳವಾರನ ಸಮ್ಮುಖದಲ್ಲಿ ಎತ್ತುಗಳನ್ನು ಓಡಿಸುವ ಕಾರ್ಯ ನಡೆಯುತ್ತದೆ. ಕೆಲವು ಊರುಗಳಲ್ಲಿ ಇಂಥವರ ಎತ್ತುಗಳೇ ಕರಿ ಹರಿಯಬೇಕು ಎಂದು ನಿರ್ಧರಿಸಿದರೆ, ಇನ್ನು ಕೆಲವು ಕಡೆ ಸಾರ್ವಜನಿಕವಾಗಿ ಒಟ್ಟಾಗಿ ಎತ್ತುಗಳ ಅಗ್ಗವನ್ನು ಬಿಚ್ಚಿ ಓಡಿಸುತ್ತಾರೆ. ಯಾವುದು ಮುಂದೆ ಬಂದು ಕರಿ ಹರಿಯುತ್ತದೊ ಅದಕ್ಕೆ ಕರಿ ಕಟ್ಟುತ್ತಾರೆ. ಇನ್ನು ಕೆಲವು ಕಡೆ ಬಿಳಿ ಮತ್ತು ಕಂದು ಬಣ್ಣದ ಎರಡು ಎತ್ತುಗಳನ್ನು ತಂದು ಅವುಗಳಿಗೆ ಗೌಡ ಮತ್ತು ಕುಲಕರ್ಣಿಯವರ ಎತ್ತುಗಳೆಂದು ಹೆಸರಿಡುತ್ತಾರೆ. ಕಂದುಬಣ್ಣದ ಎತ್ತು ಮುಂಗಾರಿ ಮತ್ತು ಬಿಳಿ ಬಣ್ಣದ ಎತ್ತು ಹಿಂಗಾರಿಯ ಸಂಕೇತ. ಕರಿ ಹರಿಯುವಾಗ ಕಂದು ಎತ್ತು ಮುಂದೆ ಬಂದರೆ ಮುಂಗಾರಿ ಹೆಚ್ಚು ಮತ್ತು ಬಿಳಿ ಬಣ್ಣದ ಎತ್ತು ಮುಂದೆ ಬಂದರೆ ಹಿಂಗಾರು ಉತ್ತಮ ಎಂಬ ನಂಬಿಕೆ ಇದೆ. ಕರಿ ಹರಿದ ಎತ್ತುಗಳನ್ನು ಊರಲ್ಲಿ ಮೇಳದೊಂದಿಗೆ ಮೆರವಣಿಗೆ ಮಾಡುತ್ತಾರೆ. ಅಂದು ಊರಿನ ಗೌಡ ಮತ್ತು ತಳವಾರರಿಗೆ ಕರಿ ಹರಿದ ಎತ್ತುಗಳ ಮಾಲೀಕರಿಂದ ಖುಷಿ ಸಂದಾಯವಾಗುತ್ತದೆ.

ಒಟ್ಟಿನಲ್ಲಿ ಕಾರಹುಣ್ಣಿಮೆ ದಿವಸದ ಕರಿ ಹರಿಯುವಿಕೆಯು ರೈತರು ಆ ವರ್ಷದ ಮಳೆ ಬೆಳೆಯ ಭವಿಷ್ಯವನ್ನು ತಿಳಿಯುವ ಹಬ್ಬವಾಗಿ ಹಾಗೂ ಕೃಷಿ ಚಟುವಟಿಕೆಗಳು ಗರಿಗೆದರುವ ಮುನ್ನ ತಮ್ಮ ಜಾನುವಾರುಗಳನ್ನು ತಯಾರಿಗೊಳಿಸುವ ಉದ್ದೇಶದಿಂದಲೂ ಈ ಆಚರಣೆಯನ್ನು ಹಬ್ಬವಾಗಿ ಸಂಪ್ರದಾಯಕವಾಗಿ ಮುಂದುವರೆಸಿಕೊಂಡು ಬಂದಿದ್ದಾರೆ.

## ಜೋಕುಮಾರ

ಉತ್ತರ ಕರ್ನಾಟಕದ ಕೃಷಿ ದೇವತೆಯಾದ ಜೋಕುಮಾರನು ಭಾದ್ರಪದ ಮಾಸದ ಅನಂತರ ಹುಣ್ಣಿಮೆಯ ಎಂಟನೇ ದಿನದಂದು ಬಡಿಗರ(ವಿಶ್ವಕರ್ಮರ) ಮನೆಯಲ್ಲಿ ಹುಟ್ಟುತ್ತಾನೆ. ಈತ ಗಂಗಾಮತಸ್ಥರಲ್ಲಿ ಜನಿಸಿದ್ದಾನೆಂದು ಜನಪದರ ನಂಬಿಕೆ. ಮಡಿವಾಳರು, ತಳವಾರರು, ಸುಣಗಾರರು, ಅಂಬಿಗರು, ದಲಿತರು ಸೇರಿ ಜೋಕುಮಾರನನ್ನು ಪೂಜಿಸುತ್ತಾರೆ. ಜೋಕಮುನಿ ಮಗನಾದ್ದರಿಂದ ಈತನಿಗೆ ಜೋಕುಮಾರ ಎಂಬ ಹೆಸರು ಬಂದಿತ್ತೆಂದು ಪುರಾಣ ಕಥೆಗಳು ಹೇಳುತ್ತವೆ. ತಮ್ಮ ಜನಪದರಲ್ಲಿ ಒಂದು ಐತಿಹ್ಯವಿದೆ. ಪಂಚಮಿ ಹಬ್ಬದ ನಂತರ ಶ್ರಾವಣಮಾಸ ಮುಗಿದೊಡನೆ ಗಣೇಶ ಹಬ್ಬ ಬರುತ್ತದೆ. ಗಣೇಶ ಯಥೇಚ್ಛವಾಗಿ ಉಂಡು, ತಿಂದು ಭೂಲೋಕವೆಲ್ಲಾ ಸೌಖ್ಯವಾಗಿದೆ ಎಂದು ತನ್ನ ತಂದೆ ತಾಯಿಯರಿಗೆ ವರದಿ ನೀಡುತ್ತಾನೆ. ಜನಪದರ ದೇವರಾದ ಜೋಕುಮಾರ ಭಾದ್ರಪದ ಮಾಸದಲ್ಲಿ ಇಲ್ಲಿ ಮಳೆ ಬೆಳೆ ಇಲ್ಲದೆ ಕಂಗಲಾಗಿರುವ ಜನತೆಯ ಕಷ್ಟ–ಕಾರ್ಪಣ್ಯಗಳ ವರದಿ ನೀಡಿ ಮಳೆ ಸುರಿಸಲು ವಿನಂತಿಸುತ್ತಾನೆ. ಜೋಕುಮಾರನ ಸಾವಿನ ನಂತರವೇ ಉತ್ತರಾ, ಹಸ್ತ ಮಳೆಗಳು ಪ್ರವೇಶಿಸಿ ಉತ್ತಮ ಮಳೆ ಸುರಿಸುತ್ತವೆ ಎಂಬುದು ಜನಪದರ ನಂಬಿಕೆಯಾಗಿದೆ.

ಜೋಕುಮಾರ ಸ್ಫುರದ್ರೂಪಿಯಾದ ಅಂಗಸೌಷ್ಟವನ್ನು, ಹೊಳೆವ ದೊಡ್ಡ ಕಣ್ಣು, ವಿಭೂತಿ, ಹುರಿಕಟ್ಟಾದ ದೊಡ್ಡ ಮೀಸೆ, ದೊಡ್ಡ ಬಾಯಿ, ದೊಡ್ಡ ಗುಪ್ತಾಂಗ ಹೊಂದಿರುತ್ತಾನೆ. ಈತ ಹುಟ್ಟಿದೊಡನೆ ಅತ್ಯಂತ ಕಾಮುಕನಾಗಿ ಹುಟ್ಟಿ, ಈ ಪ್ರವೃತ್ತಿಯಿಂದ ಊರವರಿಗೆಲ್ಲಾ ಹೊರೆಯಾಗಿ ಕೊಲೆಯಾಗಿ ಹೋಗುತ್ತಾನೆ. ಇಂತಹ ಜೋಕುಮಾರನ ಪ್ರತಿರೂಪವನ್ನು ಆಯಾ ಊರಿನ ತಳವಾರರು ಅರಿಶಿಣ ಕುಂಕುಮ, ಎಲೆ, ಅಡಿಕೆ, ಬೆಲ್ಲ, ಚಾಚವನ್ನು ಬಡಿಗರಿಗೆ ನೀಡಿ ಜೋಕುಮಾರನ ಮಣ್ಣಿನ ಮೂರ್ತಿಯನ್ನು ಬುಟ್ಟಿಯಲ್ಲಿ ಇಟ್ಟುಕೊಂಡು ತರುತ್ತಾರೆ.

ಜೋಕುಮಾರನ ಮೊದಲ ಪೂಜೆ ನಡೆಯುವುದು ಗೌಡನ ಮನೆಯಲ್ಲಿ. ಅವರು ಜೋಕುಮಾರನನ್ನು ಹೊತ್ತ ಹೆಂಗಸರಿಗೆ ರಾಗಿ, ಜೋಳ, ಭತ್ತ, ಮೆಣಸಿನ ಕಾಯಿ, ಹುಣಸೆಹಣ್ಣು ರೊಟ್ಟಿ, ಉಪ್ಪು ಮುಂತಾದ ಪದಾರ್ಥಗಳನ್ನು ನೀಡುತ್ತಾರೆ. ಅದಕ್ಕೆ ಪ್ರತಿಯಾಗಿ ಮೊರದಲ್ಲಿ ಬೇವಿನ ಸೊಪ್ಪು ಜೋಳದ ನುಚ್ಚನ್ನು ನೀಡುತ್ತಾರೆ. ಆಗ ಜೋಕುಮಾರನ ಪದವನ್ನು ಹಾಡುತ್ತಾರೆ.

"ಅಡ್ಡಡ್ಡ ಮಳೆ ಬಂದು ದೊಡ್ಡ ದೊಡ್ಡ ಕೆರೆ ತುಂಬಿ
ಗುಡ್ಡಗಾಡೆಲ್ಲ ಹಯನಾಗೇ। ಜೋಕುಮಾರ
ಗೌಡರ ಸೆಡ್ಡಿಯ ಮೇಲೆ ಸಿರಿಬರಲಿ ಜೋಕುಮಾರ"[೯೬]

ಎಂದು ಹಾಡುತ್ತಾ ಗೌಡರ ಮನೆಯಿಂದ ಬಿಳಿಬಟ್ಟೆ ಮತ್ತು ಬೆಣ್ಣೆಯನ್ನು ಪಡೆದು ಬಟ್ಟೆಯನ್ನು ಹೊದಿಸಿ, ಬೆಣ್ಣೆಯನ್ನು ಬಾಯಿಗೆ ಸವರುತ್ತಾರೆ.

ಹೀಗೆ ಏಳು ದಿನಗಳ ಕಾಲ ಊರಿನ ಪ್ರತಿ ಮನೆ ಮನೆಗೂ ಹೋಗಿ ಜೋಕುಮಾರನ ಪದ ಹಾಡಿ ಅವರಿಂದ ಧವಸ ಧಾನ್ಯ ಪಡೆಯುತ್ತಾರೆ. ಪ್ರತಿಯಾಗಿ ಅವರಿಗೆ ಬೇವಿನ ಎಲೆ, ನುಚ್ಚು ಮತ್ತು ಕರಿ ಕೊಡುವ ಪದ್ಧತಿ ಇದೆ. ಇದು ಸಮೃದ್ಧಿಯ ಸಂಕೇತವೆಂದು ಹೇಳಲಾಗುತ್ತದೆ. ಫಲವಂತಿಕೆಯ ಸ್ವರೂಪನಾದ ಜೋಕುಮಾರನಿಗೆ ಊರಲ್ಲಿ ಬಂದಾಗ ಆತನ ಮೇಲೆ ಹೇನು, ತಿಗಣೆ, ಕೂರಿ, ಉಣ್ಣೆಗಳನ್ನು ಬಿಡುತ್ತಾರೆ. ಇದರಿಂದ ಜಾಗೃತನಾದ ಜೋಕುಮಾರ ಜನರ ಕಷ್ಟಕ್ಕೆ ಸ್ಪಂದಿಸುತ್ತಾನೆ ಎನ್ನುವ ನಂಬಿಕೆ ಜನರದ್ದಾಗಿರುತ್ತದೆ. ಇನ್ನು ಜೋಕುಮಾರನನ್ನು ಏಳು ದಿನಗಳ ಕಾಲ ಹೊತ್ತು ತಿರುಗುವವರೂ ತಳವಾರರೇ ಆಗಿರುತ್ತಾರೆ. ಇವರಲ್ಲಿ ಹೆಚ್ಚಾಗಿ ವಾಲ್ಮೀಕಿ ಜನಾಂಗದವರಿದ್ದರೆ ಇನ್ನು ಉಳಿದಂತೆ ಕೋಲುಕಾರ, ಅಂಬಿಗೇರ, ಗಂಗಮತಸ್ಥ ಮಹಿಳೆಯರು ಈ ಜೋಕುಮಾರನನ್ನು ಹೊತ್ತು ತಿರುಗುತ್ತಾರೆ. ಪ್ರತಿ ಮನೆಯ ಕಟ್ಟೆಯ ಮೇಲಿಟ್ಟು ಹಾಡುಗಳನ್ನು ಹಾಡಿ ಆತನ ತುಂಟಾಟಗಳನ್ನು, ಪವಾಡಗಳನ್ನು ಹಾಡುತ್ತಾರೆ. ಉದಾಹರಣೆಗೆ "ಅಡ್ಡಡ್ಡ ಮಳೆಯಾಗಿ ಒಡ್ಡುಗಳೆಲ್ಲಾ ತುಂಬಿ ಗೊಡ್ಡೆಮ್ಮೆ ಹೈನಾಗಿ" ಇಂತಹ ಹಾಡುಗಳಿಂದ ಜನರಲ್ಲಿ ಸುಭಿಕ್ಷೆ ಉಂಟಾಗುತ್ತದೆ ಎಂಬುದು ಕೃಷಿಕರ ನಂಬಿಕೆಯಾಗಿದೆ.

ಊರಲ್ಲಿ ಏಳು ದಿವಸ ತಿರುಗಾಡಿದ ನಂತರ ತಳವಾರರ ಮನೆಯಲ್ಲಿ ಒಂದು ಬುಟ್ಟಿ ಕಡಬನ್ನು ಮಾಡಿ, ಜೋಕುಮಾರನ ಮೈಮೇಲಿನ ಸಾಮಾನು ತೆಗೆದು ಗದ್ದದವರೆಗೂ ಕಡಬುಗಳನ್ನು ಸುರಿಯುತ್ತಾರೆ. ಒಂದು ಕೈಯಲ್ಲಿ ಕೊಬ್ಬರಿ ಬಟ್ಟಲನ್ನು, ಇನ್ನೊಂದು ಕೈಯಲ್ಲಿ ದೀಪವನ್ನು ಇಡಲಾಗುತ್ತದೆ. ಊರಲ್ಲಿ ಎಲ್ಲರೂ ಮಲಗಿದ ನಂತರ ತಳವಾರ ಮನೆಯ ಗಂಡಸೊಬ್ಬರು ಜೋಕುಮಾರನನ್ನು ಬುಟ್ಟಿಯಲ್ಲಿ ಹೊತ್ತು ನಡೆಯುತ್ತಾನೆ. ಇವರ ಸಂಗಡ ಹೆಣ್ಣು ಮಕ್ಕಳು ಇರುವಂತಿಲ್ಲ. ಹಾಗೂ ದೀಪವನ್ನು ಯಾರೂ ನೋಡುವಂತಿಲ್ಲ. ಜೋಕುಮಾರನ ಬುಟ್ಟಿ ಹರಿಜನ ಕೇರಿಯತ್ತ ಸಾಗುತ್ತದೆ. ಅಲ್ಲಿನ ಚಾವಡಿಯಲ್ಲಿ ಹರಿಜನರು ಜೋಕುಮಾರನಿಗಾಗಿ ಕಾಯುತ್ತಿರುತ್ತಾರೆ. ಅಲ್ಲಿ ಆತನನ್ನು ಬೆನ್ನ ಹಿಂದೆ ಮಾಡಿ ಒಬ್ಬರ ಮುಖ ಒಬ್ಬರು ನೋಡದಂತೆ ಬುಟ್ಟಿಯನ್ನು ತೆಗೆದುಕೊಳ್ಳುತ್ತಾರೆ. ನಂತರ ಬುಟ್ಟಿಯಲ್ಲಿನ ಕಡಬುಗಳನ್ನು ತೆಗೆದು ಪೂಜಿಸಿ, ಬುಟ್ಟಿಯ ಸುತ್ತಲೂ ಜಾರಿ ಗಿಡದ ಮುಳ್ಳಿನ ಕಂಟಿಯನ್ನು ಕಟ್ಟುತ್ತಾರೆ. ಊರಲ್ಲಿನ ವೇಶ್ಯೆಯರು ಇಲ್ಲವೇ ದೇವದಾಸಿಯರು ಈ ಮುಳ್ಳಿನ ಕಂಟಿಯನ್ನು ಸುತ್ತು ಹಾಕುತ್ತಾರೆ. ಆಗ ಮುಳ್ಳಿನ ಕಂಟಿ ಅವರ ಸೀರೆಗೆ ಸಿಕ್ಕಿ ಜಗ್ಗಿದಾಗ ಜೋಕುಮಾರ ನಮ್ಮನ್ನು ಹಿಡಿದುಕೊಳ್ಳಲು ಬಂದ, ನಮ್ಮ ಮೇಲೆ ಅತ್ಯಾಚಾರ ಮಾಡಲು ಬಂದ ಎಂದು ಕಿರುಚಾಡಿ ಒನಕೆಯಿಂದ ಜೋಕುಮಾರನ ಮೂರ್ತಿಗೆ ಹೊಡೆಯುತ್ತಾರೆ. ಇದರಿಂದ ವಿಘ್ನಗೊಂಡ ಮೂರ್ತಿಯನ್ನು ಮಡಿವಾಳರು(ಅಗಸರು) ಬಟ್ಟೆ ತೊಳೆಯುವ ಬಂಡೆಗಲ್ಲಿನ ಕೆಳಗೆ ಊಳುತ್ತಾರೆ. ಅನಂತರವೇ ಜೋಕಪ್ಪನನ್ನು ಹೊತ್ತ ಮಹಿಳೆಯರು ಏಳು ದಿನದ ನಂತರ ತಲೆಗೆ ನೀರು ಹಾಕಿ ಸ್ನಾನ ಮಾಡುತ್ತಾರೆ. ಅಗಸರು ಮೂರು ದಿನ ಬಟ್ಟೆ ತೊಳೆಯುವುದಿಲ್ಲ. ಏಕೆಂದರೆ ಈ ಮೂರು ದಿನಗಳ ಕಾಲ ಜೋಕುಮಾರ

ನರಳುತ್ತಿರುತ್ತಾನೆ. ಅದಕ್ಕಾಗಿ ಮೂರು ದಿನದ ನಂತರ ಉಪ್ಪು, ಮೆಣಸಿನಕಾಯಿ, ಜೋಳದ ನುಚ್ಚು ಮತ್ತು ಮಜ್ಜಿಗೆಯೊಂದಿಗೆ ಪೂಜಿಸಿ ಮರುದಿನ ಬಟ್ಟೆ ತೊಳೆಯುತ್ತಾರೆ.

ಜೋಕುಮಾರನ ಒಟ್ಟು ಆಚರಣೆಯನ್ನು ಗಮನಿಸಿದಾಗ ಇದೊಂದು ಭೂಮಿಗಾಗಿ ನಡೆಯುವ ನರಬಲಿಯ ಸಂಗತಿಗಳನ್ನು ಗ್ರಹಿಕೆಗೆ ತರುತ್ತದೆ. ಸಂಸ್ಕೃತಿಯಲ್ಲಿ ರಕ್ತ ಸಮೃದ್ಧಿಯ ಸಂಕೇತ. ಗಂಡಸಿನ ಹತ್ಯೆಯಿಂದ ಹೆಣ್ಣಿನ ಫಲೋತ್ಪತ್ತಿಯ ವೃದ್ಧಿಯಾಗುವ ಕ್ರಮ ಜೋಕುಮಾರನ ಆಚರಣೆಯಲ್ಲಿದೆ. ರಕ್ತ, ಭೂಮಿ, ಅಂಬಲಿ, ಚರಗ ಇವು ಜೀವೋತ್ಪತ್ತಿಯ ನೆಲೆಗಳನ್ನು ಸೂಚಿಸುತ್ತದೆ. ಅದಕ್ಕಾಗಿ ಸೆಪ್ಟೆಂಬರ್, ಅಕ್ಟೋಬರ್ ತಿಂಗಳಲ್ಲಿ ಬಿಸಿಲಿನ ತಾಪಮಾನ ಹೆಚ್ಚಾಗಿದ್ದ ಕಾಲದಲ್ಲಿ ಮಳೆಗಳು ಯತೇಚ್ಚವಾಗಿ ಸುರಿಯಲಿ, ದುಷ್ಟರ ಸಂಹಾರದಿಂದ ಶಿಷ್ಟರ ರಕ್ಷಣೆಯಾಗಲಿ ಎಂಬ ಧ್ಯೇಯದಿಂದ ಈ ಆಚರಣೆ ಜನಪದರಲ್ಲಿ ಇದೆ ಎನ್ನಬಹುದು.

ಹೀಗೆ ಸಂಪ್ರದಾಯಿಕವಾಗಿ ಬಂದ ತಳವಾರ ವೃತ್ತಿಗೆ ಸಂಬಂಧಿಸಿದ ಹಲವಾರು ಗಾದೆ, ಜಾನಪದ ಗೀತೆ, ತ್ರಿಪದಿ, ಲಾವಣಿ, ವೀರಗಾಸೆ, ಕೃಷಿ ಆಚರಣೆಗಳಾದ ಗುಳ್ಳವ್ವ, ಜೋಕುಮಾರ, ಕಾರ ಹುಣ್ಣಿಮೆಯಂತಹ ಹಬ್ಬ ಹರಿದಿನಗಳಲ್ಲಿ ತಳವಾರ ವೃತ್ತಿಗೆ ಸಂಬಂಧಿಸಿದ ಉಲ್ಲೇಖಗಳು ಹಾಗೂ ಪಾಲುದಾರಿಕೆಯಿಂದಾಗಿ ಜನಮನದಲ್ಲಿ ನಲಿದಾಡುತ್ತಿದ್ದಾನೆ. ಇಲ್ಲಿ ತಳವಾರನ ಸ್ವಭಾವ, ಕಾಯಕ ನಿಷ್ಠೆ ಮತ್ತು ಜವಾಬ್ದಾರಿಗಳು ಜಾನಪದ ಸಾಹಿತ್ಯದಲ್ಲಿ ಬಿಂಬಿತವಾಗಿದೆ. ಇಲ್ಲಿ ತಳವಾರರಿಗೆ ಸಂಬಂಧಿಸಿದ ಮತ್ತು ಉಲ್ಲೇಖಿಸಲ್ಪಟ್ಟ ಗಾದೆ, ಒಗಟು, ತ್ರಿಪದಿ, ಲಾವಣಿ ಮತ್ತು ಕೃಷಿ ಆಚರಣೆಗಳನ್ನು ಮಾತ್ರ ವಿಶ್ಲೇಷಿಸಲಾಗಿದೆ. ಇದರಿಂದ ಮೌಖೀಕ ಸಾಹಿತ್ಯ ಪರಂಪರೆಯಲ್ಲಿ ತಳವಾರರ ಸ್ಥಾನಮಾನವೇನೆಂಬುದನ್ನು ಕಂಡುಕೊಂಡಂತಾಗಿದೆ.

## ೩.೪. ಶಾಸನಗಳಲ್ಲಿ ತಳವಾರರು

ಶಾಸನಗಳು ಒಂದು ನಾಡಿನ ಪ್ರಾಚೀನ ಜೀವನ ಕ್ರಮದ ದಾಖಲೆಗಳಾಗಿರುತ್ತವೆ. ಇವುಗಳ ವಿಷಯ ಸಾಹಿತ್ಯ ಕೃತಿಗಳಿಗಿಂತ ಹೆಚ್ಚು ವಸ್ತುನಿಷ್ಠವಾಗಿರುತ್ತವೆ. ಈ ಕಾರಣದಿಂದಾಗಿ ಪ್ರಾಚೀನ ಜೀವನವನ್ನು ಪುನರ್‌ರಚಿಸಿಕೊಡಲು ವಿದ್ವಾಂಸರು ಶಾಸನಗಳಿಗೆ ಹೆಚ್ಚು ಮೊರೆ ಹೋಗುತ್ತಿದ್ದಾರೆ. ಶಾಸನಗಳನ್ನು ಸಂಗ್ರಹಿಸುವುದು ಮತ್ತು ವಿಶ್ಲೇಷಿಸುವುದು ಶ್ರಮದಾಯಕವಾದುದು. ಆದರೂ ಅವುಗಳಿಂದ ಚಾರಿತ್ರಿಕ ಘಟನೆಗಳ ಬಗ್ಗೆ ನಿಖರತೆ ತಿಳಿದುಬರುತ್ತದೆ. ಶಾಸನಗಳಲ್ಲಿ ಅತಿಶಯೋಕ್ತಿ ಅಸ್ವಾಭಾವಿಕತೆಗಳು ಸೇರಿಕೊಂಡಿರುತ್ತವೆ. ಅಲ್ಲದೆ ಇವು ವಿಷಯವನ್ನು ಇಡಿಯಾಗಿ ನಿರೂಪಿಸದೆ ಬಿಡಿ ಬಿಡಿಯಾಗಿ ಬಿತ್ತರಿಸುತ್ತವೆ. ಹೀಗಾಗಿ ಈ ಆಧಾರ ಸಾಮಗ್ರಿಯನ್ನು 'ತೆರೆದ ಕಣ್ಣೂ, ಬಿಚ್ಚು ಮನಸು'ಗಳಿಂದ ಸಂಗ್ರಹಿಸಿ, ಸಂಶ್ಲೇಷಿಸಬೇಕೆಂಬ ಬಿ.ಆರ್.ಹಿರೇಮಠರ ಮಾತು ಒಪ್ಪತಕ್ಕದಾಗಿದೆ.

ಈ ಅಧ್ಯಾಯ ರಚನೆಯಲ್ಲಿ ಶಾಸನಗಳ ಕಾಲಘಟ್ಟವನ್ನು ಕ್ರಿ.ಶ.೮ನೇ ಶತಮಾನದಿಂದ ೧೭ನೇ ಶತಮಾನದ ಮಧ್ಯಕಾಲೀನ ಕರ್ನಾಟಕದ ಚರಿತ್ರೆಯನ್ನು ಹಾಗೂ ಸಂದರ್ಭಾನುಸಾರ ವಿಜಯನಗರೋತ್ತರ ಕಾಲವನ್ನು ಅಧ್ಯಯನಕ್ಕೆ ಸೀಮಿತಗೊಳಿಸಿಕೊಳ್ಳಲಾಗಿದೆ. ಕಲ್ಯಾಣಿ ಚಾಲುಕ್ಯರು, ರಾಷ್ಟ್ರಕೂಟರು, ಹೊಯ್ಸಳ, ಕುಮ್ಮಟದುರ್ಗ, ವಿಜಯನಗರ ಮತ್ತು ವಿಜಯನಗರೋತ್ತರ ಕಾಲಘಟ್ಟದ ಶಾಸನಗಳನ್ನು ಇಲ್ಲಿ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡು ಶಾಸನಗಳಿಂದ ಮಾಹಿತಿ ಸಂಗ್ರಹಿಸಲಾಗಿದೆ. ರಾಜಕೀಯ, ಚರಿತ್ರೆಯ ವಿಷಯಕ್ಕೆ ಅಷ್ಟಾಗಿ ಗಮನ ಕೊಟ್ಟಿಲ್ಲ. ಸಂಸ್ಕೃತಿಯ ದೃಷ್ಟಿಯಿಂದ ಹಾಗೂ ವೃತ್ತಿ ಸಂಬಂಧಿತವಾದ ಅದರಲ್ಲಿ ಮುಖ್ಯವಾಗಿ ಸನ್ನಿವೇಶ, ಸಂದರ್ಭ, ಘಟನೆಗಳನ್ನು ಮಾತ್ರ ಶಾಸನಗಳಿಂದ ಆಯ್ದುಕೊಂಡು ವಿಶ್ಲೇಷಿಸಲಾಗಿದೆ.

ಶಾಸನಗಳಲ್ಲಿ ತಳವಾರನನ್ನು ತಲವಾರ, ತಲಾರ, ತಲಾರಿ, ತಳಾರ, ತಾಳಾವಾರ, ತಳವಾರ, ತಲಾರಿಕೆ ಸುಂಕ, ತಳರ ಸುಂಕ, ತಾಳವಾರಿಕೆ ಮುಂತಾದ ರೂಪಗಳಲ್ಲಿ ಸಿಗುತ್ತದೆ. ಇವೆಲ್ಲವುಗಳ ಅರ್ಥ ತಳವಾರ ಮತ್ತು ಆತನ ವೃತ್ತಿ ತಳವಾರಿಕೆ(ಕಾವಲುಗಾರಿಕೆ)ಗೆ ಸಂಬಂಧಿಸಿದ್ದಾಗಿದೆ. ಕ್ರಿ.ಶ.೮ನೇ ಶತಮಾನಕ್ಕೆ ಸೇರಿದ ಒಂದು ಶಾಸನದಲ್ಲಿ ರಕ್ಷಣೆ ಮತ್ತು ಸೇವೆಗಾಗಿ ತಳವಾರರಿಗೆ ಇನಾಂ ಭೂಮಿ ಕೊಟ್ಟಿದ್ದನ್ನು "ಅರವಟ್ಟಿಗ ತಳರ ಕೂಡಲೂರ ವೃತ್ತಿನೊಕ್ಕೆ ಊರೊಳೆ... ಕೊಟ್ಟ ನೆಲ"[೯೭] ಎಂದು ಭೂಮಿ ದಾನ ನೀಡಿದ್ದನ್ನು ತಿಳಿಸುತ್ತದೆ. ಈ ಶಾಸನವು ಅಂದಿನ ತಳವಾರಿಕೆಯವರ ಆರ್ಥಿಕ ಸ್ಥಿತಿಗತಿಯ ಬಗೆಗೆ ಮಾಹಿತಿಯನ್ನು ನೀಡುತ್ತದೆ.

ಕ್ರಿ.ಶ.೯೮೧ರ ಚಾಲುಕ್ಯ ಅರಸ ಅಹವಮಲ್ಲಿದೇವನು ಕಂಚುಗಾರ ಬೆಳ್ಗಲಿಯ ಮೂರು ದೇವಾಲಯಗಳಿಗೆ ಪೂರ್ವದ ಸ್ಥಾನ ಮಾನ್ಯ ನಡೆಯುವಂತೆ ನಿಗದಿಪಡಿಸುತ್ತಾನೆ. ವೀರನೊಳಂಬ ಪೆರ್ಮ್ಮಾಡಿ ದೇವನ ಹೆಂಡತಿ ದೇವಲದೇವಿಯು ವಿಷ್ಣು ದೇವರಿಗೆ ಆರು ಮತ್ತರು ಭೂದಾನ ಮಾಡುತ್ತಾರೆ. ಅದರಲ್ಲಿ ತಳಾರಿಕೆಯ ಮತ್ತಾದಾಯವೂ ಸೇರಿರುವುದನ್ನು ಕಾಣಬಹುದು.

"......ಪೆರ್ಗ್ಗಡೆಗೆ ಯಿ ಮತ್ತು ೮ ಅಂಬಿಗೆಗೆಯ ಮತ್ತ ೯ ತಳಾಱಗೆಯಿ ಮತ್ತ ೧೨ ಅಂತಿನಿತುಮಂ ಸ್ವಧರ್ಮದಿಂ ಪ್ರತಿಪಾಳಿಪ್ಪರ್..."[೯೮] ಎಂದಿದೆ.

ಕ್ರಿ.ಶ.೧೦೧೮ರ ಶಾಸನ, ಕೊಪ್ಪಳ ಜಿಲ್ಲೆಯ ಹಲಗೇರಿಯಲ್ಲಿದೆ. ಈ ಶಾಸನದಲ್ಲಿ ಬೆಣ್ಣೆಕಲ್ಲು ಸೀಮೆಯ ಕಾಳಗದಲ್ಲಿ ತಳಾರನಾಯಕ ಎರೆಯಮ್ಮನೆಂಬುವನು ಸತ್ತಾಗ ಅವನ ಕುಟುಂಬಕ್ಕೆ ಪಲ್ಗೆರೆಯ ಊರೊಡೆಯ ಮತ್ತು ಮಹಾ ಜನರು ಸೇರಿ ಭೂದಾನ ನೀಡಿದ್ದನ್ನು ತಿಳಿಸುವ ಶಾಸನವಿದೆ.

"ಸೋಮವಾ.....
ಬೆಣ್ನೆ ಕಲ್ಲ ಸೀಮೆಯ ಕಾಳಗದಲ್ತಳಾಱ ನಾಯ
ಕನೆಱೆಯಮ್ಮ ಸತ್ತಡೆ ಕಲ್ಮಾಟಗೆಯ್ದರು"[೯೯] ಎಂದಿದೆ.

ಇಲ್ಲಿ ಪ್ರಾಚೀನ ಕಾಲದಲ್ಲಿ ಯುದ್ಧದಲ್ಲಿ ಹೋರಾಡಿ ಮಡಿದ ವೀರಯೋಧರಿಗೆ ಮತ್ತು ಸೇವಕರಿಗೆ ಭೂದಾನ ನೀಡುವ ಪದ್ಧತಿಯ ಬಗೆಗೆ ತಿಳಿದು ಬರುತ್ತದೆ.

ಕ್ರಿ.ಶ.೧೦೩೪ರ ಹಾಸನ ಜಿಲ್ಲೆ ಸಕಲೇಶಪುರ ತಾಲೂಕಿನ ಚಿಕ್ಕನಾಯಕನಹಳ್ಳಿಯ ಶಾಸನವು ನೀತಿ ಮಹಾರಾಜನು ರಾಜ್ಯಾಳ್ವಿಕೆ ಮಾಡುತ್ತಿದ್ದಾಗ ಚಿಕ್ಕ ಕಾಟಯ್ಯ ಎಂಬುವವನು ಹೋರಾಡಿ, ಜಯಿಸಿ ಸ್ವರ್ಗಸ್ಥನಾಗಿದ್ದಕ್ಕೆ ತಳಾರಮಕಯ್ಯನೆಂಬುವನು ಆತನ ನೆನಪಿಗಾಗಿ ವೀರಗಲ್ಲನ್ನು ನೆಡುತ್ತಾನೆ.

"ಚಿಕ್ಕ ಕಾಟಯ್ಯ ಸರ್ಗ್ಗತನಾಗೆ ಬಳನೆತಲಾಗ ಜಯಿಸಿ ಸತ್ತ ಮತ್ತಿನವಳ ಕಳಹಿ ಬವರಗಣ್ಡ ತಟಜ ಮಕಯ್ಯ ಕಲ್ಲ ನಿಲಿಸಿದ"[೧೦೦] ಪ್ರಾಚೀನ ಕಾಲದಲ್ಲಿ ತಳವಾರರು ವೀರರಾಗಿ ಹೋರಾಟ ಮಾಡುವುದಲ್ಲದೆ, ಹೋರಾಡಿ ಮಡಿದ ವೀರ ಯೋಧರಿಗಾಗಿ ವೀರಗಲ್ಲನ್ನು ನೆಡುವ ಪ್ರೇಮಮಯಿಗಳು ಆಗಿದ್ದರೆಂಬುದು ತಿಳಿದುಬರುತ್ತದೆ.

ಕ್ರಿ.ಶ.೧೦೭೯ರ ರಾಯಚೂರು ಜಿಲ್ಲೆಯ ಒಂದು ಶಾಸನದಲ್ಲಿ ತಳವಾರರು ಸುಂಕ ವಸೂಲಿಗಾಗಿ ಹೋರಾಡಬೇಕಾಗಿತ್ತು ಎಂಬುದನ್ನು ಸಾರುವ ಶಾಸನ. "ತಳಾರಂ ಕಾದುವೆತ್ತು ಕಾವಂಪುರ ದ್ರಮ್ಮವಂ ಆತಂಗೆ ಸುಂಕಂ"[೧೦೧] ಎಂದು ಅಂದಿನ ಆದಾಯದ ಮೂಲವಾದ ತಳವಾರಿಕೆ ಸುಂಕ ವಸೂಲಿಗಾಗಿ ಕಾದಾಡಬೇಕಾಗಿತ್ತು ಎಂಬುದು ಈ ಶಾಸನ ಉಲ್ಲೇಖದಿಂದ ತಿಳಿಯುತ್ತದೆ.

ದಾವಣಗೆರೆ ಜಿಲ್ಲೆ ಹರಪನಹಳ್ಳಿ ತಾಲೂಕಿನ ಕುರುವತ್ತಿಯ ಶಾಸನದಲ್ಲಿ ತಳಾರ ಚಂದಿಯಣ್ಣನ ಉಲ್ಲೇಖವಿದೆ. ೫-೬-೧೦೯ರಂದು ಕುರುವತ್ತಿಯ ಸೋಮೇಶ್ವರ ದೇವರಿಗೆ ತಳಾರ ಚಂದಿಯಣ್ಣನು ಗದ್ದೆದಾನ ಬಿಡುತ್ತಾನೆ. ಅದನ್ನು ಶಾಸನದಲ್ಲಿ "ತಳಾರ ಚಂದಿಯಣ್ನನಿಂದ ಹಿರಿಯದಯಣ್ನಂ ಗರ್ದೆಕಮ್ಮ"[೧೦೨] ಎಂದಿದೆ. ಇದು ಚಂದಿಯಣ್ಣನು ತನ್ನ ಅಣ್ಣ ಉದಯಣ್ಣನೊಂದಿಗೆ ಗದ್ದೆದಾನ ಬಿಟ್ಟಿದ್ದನು. ಅಂದಿನ ರಕ್ಷಣೆ ಜವಾಬ್ದಾರಿಯೊಂದಿಗೆ ಧಾರ್ಮಿಕ ಕಾರ್ಯಗಳಿಗಾಗಿ ದಾನದತ್ತಿಗಳನ್ನು ಬಿಡುವ ತಳವಾರರ ಕುರಿತಾದ ಮಾಹಿತಿ ತಿಳಿಯುತ್ತದೆ.

ಕ್ರಿ.ಶ.೧೧೦೬ರ ಆಂಧ್ರಪ್ರದೇಶದ ಮೆಹಬೂಬ್ ನಗರ ಜಿಲ್ಲೆಯ ಅಲಂಪುರದ ಶಾಸನವು ತಳಾರ ಬಮ್ಮೆಯ ನಾಯಕನ ಮಗಳಾದ ಚಾಕಮ್ಮನು ಬ್ರಹ್ಮಪುರಿಗೆಯ ಚನ್ನಮಾಧವ ದೇವರ ಜೀರ್ಣೋದ್ಧಾರಕ್ಕಾಗಿ ಸುವರ್ಣದ ಅಲಂಕಾರ ಮಾಡಿಸಿದ್ದನ್ನು ತಿಳಿಸುತ್ತದೆ.

ಕ್ರಿ.ಶ.೧೧೧೦ ರ ಚಾಳುಕ್ಯ ವಿಕ್ರಮನ ಕಾಲದ ಶಾಸನವು ಸಿರಿಗೊಪ್ಪದ ರಾಚ ಮಗಾವುಣ್ಡ ನಿರಮೊಪ್ಪ ಆಚಗಾವುಣ್ಡನು ಇದ್ದಾಗ ತುರುಗಳ್ಳರೊಡನೆ ಹೋರಾಡಿ ತಳಾರಿ ಕಾಳಬೋವನು ಮಡಿಯುತ್ತಾನೆ. ಇವನ ಮಗ ಬಮ್ಮೆಪನಿಗೆ ಹೊಲ ಹಾಗೂ ಮನೆಯನ್ನು ಮಾನ್ಯವಾಗಿ ನೀಡಿದ್ದನ್ನು ತಿಳಿಸುವ ಶಾಸನದಲ್ಲಿ

"ಮಗಾಮುಣ್ಡನು ನಿರಮೊಪ್ಪ ಆಚಾಗಾಮುಣ್ಡ

ನುಮಿಳ್ದು ತಳಾಜು ಕಾಳಬೋವ ತುಜು(ವ)...."[೧೦೩] ಉಲ್ಲೇಖವಿದೆ.

೧೧ನೇ ಶಾಸನದಲ್ಲಿ "ಇಸ್ತಿನಿಸಿನೆಗಟ್ದನ್ರಿಪತಿಗೆ ಸನ್ತಂ ಜಯಲಕ್ಷ್ಮಿಯಂ ಭುಜಾಸಿ ಯೊಳಿರಿಸಲ್ಕಿನ್ತಿವ ನೆನೆಜುವನೆನಿಸುವ ನೆಸ್ತುಂ ಶ್ರೀ ತಳಜನಾಗವರ್ಮ್ಮಂ ಧರೆಯೊಳ್..."[೧೦೪] ಎಂದು ತಳಾರ ನಾಗವರ್ಮನು ಕ್ರಿ.ಶ.೧೧೮೨ರ ಬಳಗಾನೂರು ನಗರೇಶ್ವರ ದೇವಾಲಯರಲ್ಲಿರುವ ಕಳಚೂರ್ಯ ಚಕ್ರವರ್ತಿ ಅಹವಮಲ್ಲನ ಆಳ್ವಿಕೆಯ ಕಾಲದ ಶಾಸನ ೪ನೇ ವರ್ಷದಲ್ಲಿ ಅಂದರೆ ೨೩-೪-೧೧೮೨ ರಂದು ತಳಾರ ಕೂಲಿಯನ್ನು ಮತ್ತು ಮನೆಯ ಮೇಲಾಳಿಕೆಯನ್ನು ನಿಗದಿಪಡಿಸಿದ್ದನ್ನು ತಿಳಿಸುತ್ತದೆ. "ಅವನಿತ್ತು ಕಾಯಿಗಂ ಮನೆಯ ಮೆಲಾಳಿಕೆ ತಳಾಜಗೂಲಿ ಕಳ್ಳಕೊಳ್ಳ ಮಲವಯಾ"[೧೦೫] ಎಂದಿದೆ.

ಕ್ರಿ.ಶ.೧೧೮೩ರ ಶೆಟ್ಟಿಗೆರೆಯ ಒಂದು ಶಾಸನವು. ತಳವಾರಿಕೆ ಮತ್ತು ಊರ ತಳವಾರಿಕೆ, ಸೇನಬೋವಿಕೆಗೆ ಭೂಮಿಗಳನ್ನು ದಾನ ನೀಡಿದ್ದನ್ನು ತಿಳಿಸುತ್ತದೆ.

"ತಳವಾರಿಕೆ ಊರ ತಳವಾರಿಕೆ ಸೇನಬೋವಿಕೆ ಇಂತಿವೆಲ್ಲವಕ್ಕವೂ

ಹತ್ತುವ ಹೊಂಗಿಂಗೆ ಆ ಕೆರೆಯ ಕೆಳಗಣ ತೊಂಟ್ಟಂಗಳು

ಮೊದಲಾದ ಗದ್ದೆಗಟ್ಟಿನ ಭೂಮಿಯ ಕಂಬವಳೆಯಲು ಬಹುಪ್ರಾಪ್ತಿ"[೧೦೬]

ಇದೇ ಕಾಲದಲ್ಲಿ ಸೇರಿದ ಅದೇ ಸ್ಥಳದ ಮತ್ತೊಂದು ಶಾಸನವು ಆಯಾ ರಾಜ್ಯದಲ್ಲಿ ಆಡಳಿತ ಮತ್ತು ತೆರಿಗೆ ಹಾಗೂ ಸೇವೆಗಾಗಿ ಕೆಲವು ನಿಯೋಗಗಳಿದ್ದವೆಂದು ತಿಳಿಸುತ್ತದೆ. "ಕಾವಲುಗಾರ ಇಪ್ಪತ್ತೆರಡು ಡವರಿಗಳು ಇಬ್ಬರು ಕೆಡತೆತ್ತು ಕಾವಲಂಘರಿಕನೊಬ್ಬ ಮಲೆಗಾರನೊಬ್ಬ ಬಾಹ್ಯನೊಬ್ಬ ಅಂತು ನಿಯೋಗವ್ಯೆದು ಮತ್ತು ಕುಂಬಾರ ಅಸಗ, ಮಾಲೆಗಾರನೊಬ್ಬ ಅಂತು ನಿಯೋಗ"[೧೦೭]

ಮೈಸೂರು ಜಿಲ್ಲೆಯ ಕೆ.ಆರ್.ನಗರ ತಾಲೂಕಿನ ಚಿಕ್ಕ ಹನಸೋಗೆಯ ಕ್ರಿ.ಶ.೧೨ನೇ ಶತಮಾನದ ಶಾಸನವು ಹನಸೋಗೆಯಲ್ಲಿ ಹುಟ್ಟಿದ ಒಣ್ಣಜ್ಜನ ಮಗ ತಳ(ವಾರ)ರ ಉತ್ತಜ್ಜನು ಗಾಳವನವಾಡಿ ಹನಿಬ್ಬ ನಾಯಕನು ಕೋಳಿಯೂರ ಕೋಟೆಯನ್ನು ಮುತ್ತಿದಾಗ ಅವರೊಡನೆ ಹೋರಾಡಿ ಮಡಿದಿದ್ದನ್ನು ತಿಳಿಸುತ್ತದೆ.

"ಗಾಳವನನಾಡಿ ಹನಿಬ್ಬರು ನಾಯಕರು ಕೋಳಿಯೂರ ಕೋಟೆಯ ಮುತ್ತಲು ಹನಸೋಗೆಯಲು ಹುಟ್ಟಿದ ಒಣ್ನಜ್ಜನ ಮಗ ತಳಾಜ ವುತ್ತಜ್ಜಂ ನೂರಪ್ಪತೊಕ್ಕಲು ಸಹ ಬಿದ್ದ ಕಲ ನಿಲ್ಲಿಸಿದರು."[೧೦೮]

ಹಾಸನ ಜಿಲ್ಲೆಯ ಶ್ರವಣಬೆಳಗೊಳದಲ್ಲಿ ೧೨ನೇ ಶತಮಾನದಲ್ಲಿ ರಚಿತವಾದ ಒಂದು ಶಾಸನವನ್ನು ಬುಪ್ಪಣ್ಣ ಪಂಡಿತನಿಂದ ರಚನೆಯಾಗಿದೆ. ಅದರಲ್ಲಿ "ಗುತ್ತಿ ಹೊಳೆಯಾಚೆನಿತು

ಡಂಗುರ ಸಾರೋ ಮುತ್ತಿನುಂಗುರದ ತಳವಾರ ಬೆಳಗೊಳವ ನೋಟ ಬೇಕೆಂದವರ ಬರ ಹೇಳೋ' ಎಂದು ವರ್ಣಿಸಲಾಗಿದೆ. ಅದೇ ರೀತಿ ಕ್ರಿ.ಶ.೧೨೯೧ರ ತರಿಕೆರೆಯ ಶಾಸನದಲ್ಲಿ

"ದಂಡ ದೋಷ ತಳಾರಿಕೆ.... ಕಳ್ಳಬಾಧೆ ಆ ಸ್ತಳದ ಮಹಾಜನಂಗಳದಲ್ಲದೆ ಮೂನೂರ್ವ್ವರ ಕಾರಣವಿಲ್ಲ"[೧೦೯] ಎಂದು ತಳವಾರನಿಗೆ ಕಳ್ಳರಿಗೆ ದಂಡ ಹಾಕುವ ಮತ್ತು ಶಿಕ್ಷಿಸುವ ಹಕ್ಕು ಇತ್ತು ಎಂಬುದು ಈ ಶಾಸನ ಉಲ್ಲೇಖದಿಂದ ಸ್ಪಷ್ಟವಾಗುತ್ತದೆ.

ಕ್ರಿ.ಶ.೧೩ನೇ ಶತಮಾನದ ಚನ್ನರಾಯಪಟ್ಟಣ ತಾಲೂಕಿನ ನುಗ್ಗೆಹಳ್ಳಿಯ ಶಾಸನವೊಂದರಲ್ಲಿ ನರಸಿಂಹ ದೇವರ ಅರ್ಚನಾದಿ ಕಾರ್ಯಕ್ಕೆ ತಳವಾರಿಕೆ ಕೊಟ್ಟ ಉಲ್ಲೇಖವಿದೆ.

"ಶ್ರೀ ನಾರಸಿಂಹ್ಯದೇವರ ಅರ್ಚನಾದಿ
ರಾಜಶ್ರೀ ಮಾದಣ ಸಾಮಿಯ ಕಾರ್ಯ್ಯ
ಧಾರ ಪೂರ್ಕವಾಗಿ ಕೊಟ್ಟ ತಳವಾಱು ಸ್ವದತ್ತಾಂ"[೧೧೦]

ಕ್ರಿ.ಶ.೧೪೨೨ರ ಶಾಸನವು ಮೈಸೂರು ಜಿಲ್ಲೆ ಮಲೆಯೂರು ಗ್ರಾಮದಲ್ಲಿದೆ. ಇದರಲ್ಲಿ ಈ ಗ್ರಾಮವನ್ನು ವಾಸುದೇವರಿಗೆ ೩ನೇ ವೀರ ಹರಿಹರರಾಯರ ತಂದೆ ದೇವರಾಯ ಕೊಟ್ಟಿರುತ್ತಾರೆ. ಇದರಲ್ಲಿ ನಾಲ್ಕು ಸೀಮೆಯ ತಳವಾರಿಕೆಯನ್ನು ನೀಡಿದ್ದನ್ನು ತಿಳಿಯಬಹುದು.

"ಕನಕಗಿರಿಯ ಶ್ರೀವಿಜಯದೇವರ... ಅಂಗಭೋಗ... ಮಲೆಯೂರು ಚತುಸ್ಸೀಮೆಯೊಳಗಾದ ...ತಳವಾಱಿಕೆ ಗ್ರಾಮದ ಮಣಯ ವೊಸೆಗೆಕ್ಪೌರ..."[೧೧೧] ಇತರೆ ವಿವರಗಳಿವೆ.

ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲೂಕಿನ ಪಾಪಿನಾಯಕನಹಳ್ಳಿಯ ಕ್ರಿ.ಶ.೧೪೫೪ ಶಾಸನವೊಂದರಲ್ಲಿ ಅಚ್ಯುತದೇವ ರಾಯನ ಕಾಲದಲ್ಲಿ ನಿಡುಗಲು ಪಾಪಿ ನಾಯಕನ ಪುರವನ್ನು ಆರುಗೊಂಡು ಅಂಕಾಲ ದೇವಿಯ ಅಮೃತ ಪಡಿಗೆ ತಲಾರಿ ತಿಮ್ಮನಾಯಕನು ದಾನ ಬಿಡುವುದನ್ನು ತಿಳಿಸುತ್ತದೆ.

".....ಅಪಿನಾಯಕನ ಪುರಂ ಸರ್ವಮಾನ್ಯ ಅಗ್ರಹಾರ ಮುಂದು ತಲಾರಿ ತಿಮ್ಮಿನಾಯ ಇನಿ.... ಕೊಡಕುಲ ತಮ್ಮಾ ಎಜಿ...."[೧೧೨] ಎಂದು ತಳವಾರರು ದಾನ ದತ್ತಿ ಬಿಡುತ್ತಿದ್ದರೆಂಬ ಮಾಹಿತಿ ಈ ಶಾಸನದಿಂದ ತಿಳಿಯುತ್ತದೆ.

ಕ್ರಿ.ಶ.೧೪೬೬ಕ್ಕೆ ಸೇರಿದ ಹಾಸನ ಜಿಲ್ಲೆಯ ಗೂರೂರಿನ ಶ್ರೀಮದಶೇಷ ಮಹಾಜನಗಳು ತಿಮ್ಮಣ್ಣ ನಾಯಕರಿಗೆ ಬಿನ್ನಹ ಮಾಡಿ ಬಗವಾಡಿ ತಳವಾರ ನಾರಸಿಂಗನಿಗೆ ಗೂರೂರು ಗ್ರಾಮದ ಜೀರ್ಣವಾಗಿ ಅರಮನೆ ಭಂಡಾರದಿಂದ ೧೨೫ ಗದ್ಯಾಣಗಳನ್ನು ದಾನ ಕೊಟ್ಟಿದ್ದನ್ನು ತಿಳಿಸುವ ಶಾಸನ ಇಂತಿದೆ.

"ಗೊರಉರ ಶ್ರೀ ಮದಶೇಷಮಹಾಜನಂಗಳು ಬಗವಾಡಿ

ತಳುವಾರ ನಾರಸಿಂಗಣಗಳಿಗೆ ಕೊಟ್ಟ ಧರ್ಮಶಾಸನ"[೧೧೩]

ಎಂದು ಉಲ್ಲೇಖಗೊಂಡಿದೆ.

ಕ್ರಿ.ಶ.೧೪೬೭ರ ನಂಜನಗೂಡು ತಾಲೂಕಿನ ಮುಳ್ಳೂರು ಗ್ರಾಮದ ಶಾಸನದಲ್ಲಿ ನಂಜುಂಡ ದೇವರ ಸೇವೆಗಾಗಿ ಉಮ್ಮತ್ತೂರಿನ ಸೋಮಯ್ಯ ದೇವಗಳು ತೋಟ ತುಡಿಕೆ, ತಳವಾರಿಕೆ ಸುಂಕವನ್ನು ಅರ್ಪಿಸಿದ್ದನ್ನು ತಿಳಿಸುತ್ತದೆ.

"ಶ್ರೀ ನಂಜುಂಡೇಶ್ವರ ದೇವರ ಅಮೃತಪಡಿ ಅಭಿಷೇಕ ಅಂಗಭೋಗಕ್ಕೆ ಸಮರ್ಪಿಸಿ ಕೊಟ್ಟೆವಾಗಿ ಆ ಮುಳ್ಳೂರಿಗೆ ಸಲುವ ಗದ್ದೆ ಬೆದ್ದಲು ತೋಟ ತುಡಿಕೆ.... ಮನಿಸುಂಕ, ಸುವರ್ಣಾದಾಯ ಮಗ್ಗದೆಜೆ ವಳವಾಜು....... ಮೊಟ್ಟೆಸುಂಕ ಬಿಸಿಲುಗಾಣ ತಳವಾಜಿಂ ಕುಳ...."[೧೧೪] ಎಂದು ಆಗಿನ ಕಾಲದಲ್ಲಿ ತಳವಾರಿಕೆ ಸುಂಕದೊಂದಿಗೆ ಮನೆಸುಂಕ, ಬಿಸಿಲುಗಾಣ ತೆರಿಗೆ ಮಗ್ಗದ ತೆರಿಗೆ, ಮೊಟ್ಟೆಸುಂಕ, ಬಿಸಿಲುಗಾಣಕ್ಕೂ ತೆರಿಗೆಗಳಿದ್ದ ಬಗೆಗೆ ಮಾಹಿತಿ ತಿಳಿಯುತ್ತದೆ.

ಕ್ರಿ.ಶ.೧೪೬೭ರ ಬಳ್ಳಾರಿ ಜಿಲ್ಲೆಯ ಸಂಡೂರು ತಾಲೂಕಿನ ಕುಡುತಿನಿಯ ಶಾಸನವೊಂದು ತಳವಾರ ಗೋಸಂಪೆನ್ನಯ್ಯನೆಂಬುವವನು. ಸಿದ್ದವೀರಪ್ಪ ಮತ್ತು ಸಂಗನ ಬಸಪ್ಪನ ಪ್ರಾಣಹತ್ಯೆ ಮಾಡಿದ. ಇದರ ದೋಷ ಪರಿಹಾರಕ್ಕಾಗಿ ದರೋಜಿ ಬಳಿಯ ಹರಲಾಪುರ ಗ್ರಾಮ ಕುಡುತಿನಿಯಲ್ಲಿ ೫ ಕೊಳಗ ಎರೆಭೂಮಿ ಮತ್ತು ಇನ್ನು ಕೆಲವು ಅನುಕೂಲಗಳ ಸಮೇತ ದಾನ ನೀಡುತ್ತಾನೆ. ಇದರ ಉಲ್ಲೇಖ ಈ ಶಾಸನದಲ್ಲಿದೆ.

"ಕುಡುತ್ನೆಯ ತಳವಾರ ಗೋಸಪೆಂನ್ಯೆಯ್ಯನು ಬಹುಶಃ

ಸಿದವೀರಪ್ಪ ಸಂಗನ ಬಸಪ್ಪನ ಪ್ರಾಣಹತ್ಯೆ ಮಾಡಿದ

ಇದರ ದೋಷ ಪರಿಹಾರವಾಗಿ ದರೋಜಿ ಏಳಿತದ ಹರಲಪುರ

ಗ್ರಾಮ ಕುಡತಿನಿಯಲ್ಲಿ ೫ ಕೊಳಗ ಎರೆಭೂಮಿ.... ಜಂಗಮನ

ಬಂಗಾರ ಪ್ರತಿಮೆಗೆ ೨೨೦ ವರಹವನ್ನು ನೀಡಿದ ಬಗ್ಗೆ"[೧೧೫]

ಎಂದು ದಾನ ನೀಡಿದ ಬಗ್ಗೆ ತಿಳಿಸುವ ಈ ಶಾಸನದಿಂದ ತಳವಾರರು ಮಾಡಿದ ತಪ್ಪಿಗೆ ಪ್ರಾಯಶ್ಚಿತವಾಗಿ ದಾನ ದತ್ತಿಗಳನ್ನು ಬಿಡುವ ಕರುಣಾಮಯಿಗಳಾಗಿದ್ದರೆಂಬುದು ತಿಳಿದುಬರುತ್ತದೆ. ಅದೇ ರೀತಿ ಕ್ರಿ.ಶ.೧೪೭೧ರ ಬಳ್ಳಾರಿಯ ಡಣಾಯಕನ ಕೆರೆಯ ಶಾಸನವೊಂದು ತಿಪ್ಪನಾಯಕನ ಮಗ ಹನುಮಂತ ನಾಯಕನಿಗೆ ತಳವಾರಿಕೆಯನ್ನು ನೀಡಿದ್ದನ್ನು ತಿಳಿಸುತ್ತದೆ.

"ತಿಪಿನಾಯಕನ ಮಗ ಹನುಮಂತನಾಯಕ ತನ ತಳವಾರ ಕಟ್ಟಿನ ಕಸರಮ..."[೧೧೬]

ಎಂದಿದೆ.

ಕ್ರಿ.ಶ.೧೫೭೮ರ ಚನ್ನರಾಯಪಟ್ಟಣ ಶಾಸನವು ಪ್ರಸನ್ನ ಚೆನ್ನಕೇಶವ ದೇವಸ್ಥಾನದ ಕಟ್ಟಡಕ್ಕೆ ಕೊಳತ್ತೂರು ಗ್ರಾಮದ ಭೂಮಿಯನ್ನು ಬ್ರಾಹ್ಮಣರಿಗೆ ತಳವಾರ ಮಲೆಯನಾಯಕರ ಮಗ ಬೊಮ್ಮೆಯ ನಾಯಕನು ತನ್ನ ಒಡೆಯ ಸೋಮಣ್ಣವೊಡೆಯರ ಆಜ್ಞೆಯಿಂದ ಬಿಟ್ಟುಕೊಟ್ಟಿದ್ದನ್ನು ತಿಳಿಸುತ್ತದೆ.

"ಗಂಡ ಭೇರುಂಡ ಗಜಸಿಂಹ ಸಾಲೆಗ್ರಾಮದ ಸೋವಂಣವೊಡೆಯರ ಮನೆಯ ತಳವಾಜಿ ಮಲೆಯ ನಾಯಕರ ಮಗ ಬೊಂಮೆಯ ನಾಯಕರು ಸೋವಂಣ ವೊಡೆಯರ ಅನುಗ್ಣೆಯಿಂದ"[೧೧೭] ಎಂದು ಭೂಮಿ ದಾನ ನೀಡುವಲ್ಲಿ ಕಂದಾಯದ ಉಸ್ತುವಾರಿ ಹೊಂದಿದ್ದ ತಳವಾರನೇ ಬಿಟ್ಟು ಕೊಡಬೇಕಾಗಿತ್ತು ಎಂಬುದು ಈ ಶಾಸನದಿಂದ ತಿಳಿದುಬರುತ್ತದೆ. ಅದೇ ರೀತಿ ಕೆಲವು ಭೂಮಿಗಳನ್ನು ತೆರಿಗೆ ರಹಿತವಾಗಿ ದಾನ ನೀಡುವ ಪದ್ಧತಿ ಅಂದಿನ ಕಾಲದಲ್ಲಿತ್ತು. ಇದನ್ನು ಸಾಬೀತು ಪಡಿಸುವ ಒಂದು ಶಾಸನ ಕ್ರಿ.ಶ.೧೫೯೬ರ ಚನ್ನರಾಯಪಟ್ಟಣ ತಾಲೂಕಿನ ಜಂಬೂರಿನ ಶಾಸನ ಸ್ಪಷ್ಟಪಡಿಸುತ್ತದೆ. ಈ ಶಾಸನದಲ್ಲಿ ದಳವಾಯಿ ಮಲ್ಲಣ್ಣ ನಾಯಕನಿಗೆ ಇಮ್ಮಡಿ ನರಸಿಂಹ ನಾಯಕನು ದಿಂಡುಗೂರು, ಜಂಬೂರು ಗ್ರಾಮಗಳನ್ನು ತೆರಿಗೆ ರಹಿತವಾಗಿ ಅಗ್ರಹಾರಗಳಿಗೆ ಬಿಡುತ್ತಾನೆ. ಇದನ್ನು ತಿಳಿಸುವ ಶಾಸನ ಈ ರೀತಿ ಇದೆ.

"ಸರ್ವ್ವಮಾಂನ್ಯರ ಅಘ್ರಾರ ಜಂಬೂರು.... ಮುಳುಗಾವಲ ಕೂಲಿ ಚಿಲುವಾನ ತಳವಾಜಿಕೆ ಸ್ಥಳಸುಂಕ ಚರಸುಂಕ..."[೧೧೮]

ಈ ಶಾಸನದಲ್ಲಿ ಬರುವ ವಿವಿಧ ಸುಂಕಗಳ ಪ್ರಕಾರಗಳಲ್ಲಿ ಪ್ರಮುಖವಾಗಿ ತಳವಾರಿಕೆ, ಚರಸುಂಕ, ಸ್ಥಳಸುಂಕ, ಮದುವೆ ತೆರಿಗೆ ಮುಂತಾದವು ಅಂದಿನ ಕಡ್ಡಾಯ ತೆರಿಗೆಗಳಲ್ಲಿ ಒಂದಾಗಿದ್ದವು. ಇವುಗಳಲ್ಲದೆ ತಳವಾರಿಕೆಯ ಹಣ, ಅಕ್ಕಸಾಲೆಯ ನೋಟದ ಹಣ, ಕೇರಿಯ ಭಂಟಿಯ ಹಣ ಮುಂತಾದ ತೆರಿಗೆ ಹಣಗಳಿದ್ದ ಬಗ್ಗೆ ಕ್ರಿ.ಶ.೧೫ನೇ ಶತಮಾನದ ಚಿಕ್ಕನಾಯಕನ ಹಳ್ಳಿಯ ಶಾಸನದಿಂದ ತಿಳಿದುಬರುತ್ತದೆ.

"ತಳವಾರಿಕೆಯ ಹಣ ಅಕ್ಕಸಾಲೆಯ ನೋಟದ ಹಣ ಕೇರಿಯ ಭಂಟಿಯ ಹಣಯಿದು ಮುಂತಾದವು"[೧೧೯] ಇವುಗಳಲ್ಲದೆ.

ಸದಾಶಿವರಾಯನ ಕಾಲದಲ್ಲಿ ನಾಡ ತಳವಾರಿಕೆ, ಗವುಡ ಮಾನ್ಯದ ಹಣ, ಅಂಗಡಿ, ಗಾಣ, ಮಗ್ಗ, ಸಿದ್ದಾಯ, ಕಜ್ಜಾಯ, ಪೋಜರು, ತುರುವ ಹಣ, ಕುಂಬಾರ ತರುವ ಹಣ, ಉಪ್ಪಿನ ಯೋಳಿ ಮುಂತಾದ ಸಕಲ ಸುವರ್ಣಾದಾಯ, ಭತ್ತದ ಆದಾಯ ಮುಂತಾದವುಗಳು ಇದ್ದ ಬಗ್ಗೆ ಕ್ರಿ.ಶ.೧೫೬೯ರ ಶಾಸನದಿಂದ ತಿಳಿದುಬರುತ್ತದೆ. ಈ ಶಾಸನದಲ್ಲಿ "ನಾಡ ತಳವಾರಿಕೆ ಗವುಡ ಮಾನ್ಯದ ರೊಂಕ ಅಂತು ಗಡಿಗಾಣ, ಮಗ್ಗ ಸಿದ್ದಾಯ ಕಡ್ಡಾಯ ಪೋಜರು ತರುವ

ರೊಕ ಕುಂಬಾರ ತರುವ ರೊಕ ವುಡಿನ ವೋಳೆ.... ಸಹ ಪುರ ವರ್ಗ ಸರ್ವಮಾನ್ಯವಾಗಿ"[೧೨೦] ಎಂದಿದೆ.

ಕ್ರಿ.ಶ.೧೫೧೦ರ ಬಳ್ಳಾರಿಯ ಯಲ್ಪಿ ಶಾಸನವು ಕೃಷ್ಣದೇವರಾಯನು ಯಳಮೆ ಸೀಮೆಯಲ್ಲಿ ಮದುವೆಗೆ ಕೊಡುವ ಸುಂಕವನ್ನು ತೆಗೆದು ಹಾಕಿದ್ದನ್ನು ಉಲ್ಲೇಖಿಸುತ್ತದೆ.

> "........ದಕ್ಕೆ ........ಸುಂಕವ ಕೊಂಡವನು ತ(ನ್ನ)
> ....... ತಲಾರಿಕೆಗೆ ಉ ಮದುವೆ...... ಮದವಣಿಗೆ
> ಕೊಟ್ಟವನು ಯೆಂದು.........."[೧೨೧]

ಶಾಸನದಲ್ಲಿ ಉಲ್ಲೇಖಗೊಂಡಿದೆ.

ಕೋಲಾರ ಜಿಲ್ಲೆಯ ಮುಳಬಾಗಿಲ ತಾಲೂಕಿನ ಒಂದು ಶಾಸನದಲ್ಲಿ "ತಳವಾಜಿವರಿ ಮುಂತಾಗಿ ಯೆಲಾಉ ಸರ್ವಮಾನ್ಯವಾಗಿ ಬಿಟ್ಟು"[೧೨೨] ಎಂಬ ಸಂಗತಿಯಿದೆ. ತಳವಾರನಿಗೆ ದಾನದತ್ತಿಗಳನ್ನು ಕೊಡುತ್ತಿದ್ದದಲ್ಲದೇ ಸರ್ವಮಾನ್ಯವಾಗಿ ಭೂಮಿಯನ್ನು ನೀಡಿದ್ದರ ಬಗೆಗೆ ಮಾಹಿತಿ ತಿಳಿಯುತ್ತದೆ.

ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲೂಕಿನ ಸಿಂಗೆನಾಯಕನ ಹಳ್ಳಿಯಲ್ಲಿ ದೊರೆತ ಕ್ರಿ.ಶ.೧೫೧೦ರ ಶಾಸನವು ಕೃಷ್ಣದೇವರಾಯನು ತನ್ನ ಪಟ್ಟಾಭಿಷೇಕದ ಸಮಯದಲ್ಲಿ ಸಿಂಗೆನಾಯಕನ ಹಳ್ಳಿ ಎಂಬ ಗ್ರಾಮವನ್ನು ವಿರೂಪಾಕ್ಷ ದೇವರಿಗೆ ದಾನ ನೀಡಿದ ವಿಷಯವನ್ನು ತಿಳಿಸುತ್ತದೆ. ದೇವರ ಅಮೃತಪಡಿ ನೈವೇದ್ಯ, ಅಂಗರಂಗ, ವೈಭೋಗ, ಚೈತ್ರಮಾಸದ ರಥ ಉತ್ಸವ ಮಕರ ಸಂಕ್ರಾಂತಿಯ ರಥ ಉತ್ಸವ, ನಿತ್ಯ ಉತ್ಸವ ನಿತ್ಯ ದೀಪಾರಾಧನೆಗೆ ಸಿಂಗೆನಾಯಕನಹಳ್ಳಿ ಗ್ರಾಮದಾನ ನೀಡಿ ಆ ಗ್ರಾಮದ ಕಾಡಾರಂಭ ನೀರಾರಂಭದಿಂದ ಬರುವ ಹಣದ ಆದಾಯ, ಭತ್ತಾದಾಯ, ಸುಂಕ, ಕಟ್ಟೆ, ತಳವಾರಿಕೆ ಮುಂತಾದ ಎಲ್ಲಾ ರೀತಿಯ ಆದಾಯವನ್ನು ವಿರೂಪಾಕ್ಷನಿಗೆ ಸಮರ್ಪಿಸಿದ ಬಗೆಗೆ ಮಾಹಿತಿ ತಿಳಿಯುತ್ತದೆ.

> "ಸಿಂಗೆ ನಾಯಕನ ಹಳಿಯ ಗ್ರಾಮ ೧ ಆಕಾ
> ಡಾರಂಭ ನೀರಾರಂಭ ಕೊಟಿದ ರೊಕ..... ತಳವಾರಿಕೆ ಸಾಮ್ಯ
> ಜೋಡಿ ಬಿರಾಡ....."[೧೨೩]

ಎಂದು ವಿವಿಧ ಆದಾಯ ಮೂಲಗಳ ಕುರಿತು ಮಾಹಿತಿ ಈ ಶಾಸನದಲ್ಲಿ ಉಲ್ಲೇಖಿತಗೊಂಡಿದೆ.

ಬಳ್ಳಾರಿ ಜಿಲ್ಲೆಯ ಹೊಸಪೇಟೆಯಲ್ಲಿ ದೊರೆತ ಕ್ರಿ.ಶ.೧೫೧೨ರ ಶಾಸನದಲ್ಲಿ ಕೃಷ್ಣದೇವರಾಯನು ತನ್ನ ತಂದೆ ನರಸನಾಯಕ ಒಡೆಯರಿಗೆ ಮತ್ತು ತಾಯಿ ನಾಗಾಜಿದೇವಿ ಅಮ್ಮನವರಿಗೆ ಧರ್ಮವಾಗಲೆಂದು, ಹೊಸವೂರ ಮಾಗಣಿಗೆ ಸೇರಿದ ವಿರೂಪಾಪುರ ಗ್ರಾಮವನ್ನು ದಾನ

ಮಾಡಿ ಅಲ್ಲಿನ ರೊಕ್ಕ ಆದಾಯ, ಭತ್ತ ಆದಾಯ, ತಳಾವಾರಿಕೆ ಸುಂಕ, ಸಾಂಮ್ಯ ಜೋಡಿ ಬಿರಾಡಗಳನ್ನು ಹಂಪಿಯ ಶ್ರೀ ವಿಠಲ ದೇವರ ಸೇವೆಗಾಗಿ ದಾನ ನೀಡಿದ್ದನ್ನು ತಿಳಿಸುತ್ತದೆ.

"ಯೀ ಗ್ರಾಮದಲೂ ಹುಟ್ಟಿದ ರೊಕ್ಕ ಆದಾಯ ಭತ್ತಆದಾಯ ತಳವಾಜಿಕೆ ಸುಂಕ ಸಾ(೦)ಮ್ಯ ಜೊಡಿ ಬಿರಾಡ"[೧೨೪]

ಅದೇ ರೀತಿಯಾಗಿ ಬಳ್ಳಾರಿ ಜಿಲ್ಲೆ ಹೊಸಪೇಟೆ ತಾಲೂಕು ಕಡೇರಾಂಪುರದಲ್ಲಿನ ಕ್ರಿ.ಶ.೧೫೧೩ರ ಶಾಸನದಲ್ಲಿ ಕೃಷ್ಣದೇವರಾಯನು ತನ್ನ ತಂದೆ ತಾಯಿಯರಿಗೆ ಪುಣ್ಯವಾಗಲೆಂದು ಪ್ರಸನ್ನ ವಿರೂಪಾಕ್ಷ ದೇವರ ಸೇವೆಗಾಗಿ ಕಂನ ಕಿಯಕಟ್ಟೆ ಎಂಬ ಗ್ರಾಮವನ್ನು ದಾನವಾಗಿ ನೀಡಿರುವುದನ್ನು ತಿಳಿಸುತ್ತದೆ.

'ಗ್ರಹಣ ಪುಂಣ್ಯಕಾಲದಲು ದಾನ..... ಯೀ ಗ್ರಾಮದಲ್ಲೂ ಹುಟ್ಟಿದ ರೊಕ್ಕ ಆದಾಯ ಭತ್ತ ಆದಾಯ ತಳವಾರಿಕೆ ಸುಂಕ ಸಾಮ್ಯ ಜೋಡಿ ಬಿರಾಡ ಕಟ್ಟೆ ರೊಕ್ಕ"[೧೨೫] ಎಂದು ಗ್ರಾಮದ ಆದಾಯ, ಭತ್ತದ ಆದಾಯ, ತಳವಾರಿಕೆ ಸುಂಕ, ಸಾಮ್ಯ, ಜೊಡಿ ಬಿರಾಡ, ಕಟ್ಟೆ ರೊಕ್ಕ ಮುಂತಾದ ಆದಾಯವನ್ನು ದಾನ ಬಿಡಲಾಗಿದೆ ಎಂದು ತಿಳಿಸುತ್ತದೆ.

ಕೃಷ್ಣದೇವರಾಯನು ತನ್ನ ತಂದೆ ತಾಯಿಯರಿಗೆ ಪುಣ್ಯವಾಗಲೆಂದು ಕ್ರಿ.ಶ.೧೫೧೩ರ ಹಂಪೆಯ ಶಾಸನದಲ್ಲಿಯೂ ಸಹ ಶ್ರೀರಾಮಚಂದ್ರ ದೇವರ ನಾನಾ ರೀತಿಯ ಸೇವೆಗಾಗಿ ಕಳಸಾಪುರದ ಮಾಗಣಿಯ ವೊಳೆಕೋಟೆ ಗ್ರಾಮ ಮುದ್ದಾಪುರ ಗ್ರಾಮ ಕೊಪ್ಪಣ ಸೀಮೆಯ ಕುಟುಕನಹಳ್ಳಿ ನಾರಿಯ ಸೀಮೆಯ ಜಾಯನೂರ ಗ್ರಾಮವನ್ನು ದಾನವಾಗಿ ನೀಡಿರುವುದನ್ನು ತಿಳಿಸುತ್ತದೆ. ಜೊತೆಗೆ

"ಅಂತುಗ್ರಾಮ ೬ ಕಂ ಸಲುವ ಸಕಲ ಸುರ್ನ್ನಾದಾಯ..... ಸ್ತಳದ ಸುಂಕ ಸಾಮ್ಯ ತಳವಾಜಿಕೆಯ ರೊಕ ಭತ್ತ ಜೋಡಿ ಬಿರಾಡ ಗ್ರಾಮಗಳ ನೀರ ಬಿರಾಡ"[೧೨೬] ಎಂದಿದೆ.

ಇದೇ ಕಾಲಕ್ಕೆ ಸೇರಿದ ಹಂಪೆಯ ಶಾಸನದಲ್ಲಿ ಕೃಷ್ಣದೇವರಾಯನು ತನ್ನ ತಂದೆ ತಾಯಿಯರಿಗೆ ಪುಣ್ಯವಾಗಲೆಂದು ಶ್ರೀ ವಿಠಲ ದೇವರ ಸೇವೆ, ಪೂಜೆಗಾಗಿ ಹರಿಹರಪುರ, ಹೊಸಊರ ಮಾಗಣಿಯ ವಿರುಪಾಪುರ, ಪಂಚಕ ಸೀಮೆಯ ಗೋಪಿಸೆಟ್ಟಿಹಳ್ಳಿಗಳ ಸಕಲ ಆದಾಯವನ್ನು ದಾನಬಿಡುವ ವಿಷಯವನ್ನು ಸ್ಪಷ್ಟಪಡಿಸುತ್ತದೆ.

"ಕೆಳಗಣ ಗದೆ ಸಹಾಯೀ ಗ್ರಾಮಗಳಿಗೆ ಸಲುವ ತಳವಾಜಿಕೆ ಸುಂಕ (ಜೋ)ಡಿ ಬಿರಾಡ ಸಾಂಮ್ಯ"[೧೨೭] ಎಂದು ಸಕಲ ಆದಾಯದಲ್ಲಿ ತಳವಾರಿಕೆ ಆದಾಯವನ್ನು ದಾನ ಬಿಟ್ಟ ವಿಷಯ ತಿಳಿಯುತ್ತದೆ.

ಇದೇ ಕಾಲಕ್ಕೆ ಸೇರಿದ ಮತ್ತೊಂದು ಶಾಸನವು ಸಹ ಕೃಷ್ಣದೇವರಾಯನು ತನ್ನ ತಂದೆ ತಾಯಿಯರಿಗೆ ಪುಣ್ಯವಾಗಲೆಂದು ಶ್ರೀ ವಿಠ್ಠಲ ದೇವರ ಸೇವೆಗಾಗಿ ಸಿಂಘಾರಪುರ, ಹುಲಿಗೆಯ ಮಾಗಣಿಯ ಹರಿಯಲಾಪುರ, ತಿಪ್ಪರಾಜನ ಹೊಬಳಿಯ ತೋಟರಾಯದುರ್ಗ ಸೀಮೆಯ ದೇವಸಮುದ್ರ ಮುಂತಾದ ಗ್ರಾಮಗಳ ಸಕಲ ಆದಾಯವನ್ನು ಮತ್ತು ತಳವಾರಿಕೆ ಆದಾಯವನ್ನು ದಾನಬಿಟ್ಟಿದ್ದನ್ನು ತಿಳಿಸುತ್ತದೆ.

"ಈ ಗ್ರಾಮಗಳಿಗೆ ಸಲುವ ಸಕಲ ಸುವರ್ಣದಾಯ ಸಕಲ ಭತ್ತಾದಾಯ ಸ್ಥಳಸುಂಕ ತಳವಾಜಿಕೆ ಸಾಂಮ್ಯ ಹಾರಿಕಾ"[೧೨೮] ಎಂದು ತಳವಾರಿಕೆ ಆದಾಯದ ಉಲ್ಲೇಖವಿದೆ.

ಇದೇ ಕಾಲಘಟ್ಟಕ್ಕೆ ಸೇರಿದ ಕೊಪ್ಪಳ ಜಿಲ್ಲೆಯ ಬಂಡಿ ಹರ್ಲಾಪುರದ ಶಾಸನವು ಸಹ ಕೃಷ್ಣದೇವರಾಯ ತಂದೆ ತಾಯಿಯರಿಗೆ ಪುಣ್ಯವಾಗಲೆಂದು ವಿಠ್ಠಲ ದೇವರಿಗೆ ಸೇವೆಗಾಗಿ ಮತ್ತು ಉತ್ಸವಕ್ಕಾಗಿ ಹುಲಿಗೆಯ ಮಾಗಣಿ ಮತ್ತು ಹರಿಹರ ಪುರದ ಗ್ರಾಮದ ಹಲವು ತೆರಿಗೆಗಳನ್ನು ದಾನವಾಗಿ ನೀಡಿದ್ದನ್ನು ತಿಳಿಸುತ್ತದೆ.

"ಹರಿಹರ ಪುರದ ಗ್ರಾಮಕ್ಕೆ ಸಲುವ ನಿರಾರಂಭ ಕಾಡಾರಂಭ ತಳವಾಜಿಕೆ ಸುಂಕ ಜೋಡಿ ಬಿರಾಡ ಸಾಂಮ್ಯ"[೧೨೯] ಎಂದು ಉಲ್ಲೇಖಿತಗೊಂಡಿದೆ. ಇದೇ ಕಾಲಘಟ್ಟದ ಹಂಪಿಯ ಮತ್ತೊಂದು ಶಾಸನದಲ್ಲಿಯೂ ಸಹ ಕೃಷ್ಣದೇವರಾಯನು ತನ್ನ ತಂದೆ-ತಾಯಿಗಳಿಗೆ ಪುಣ್ಯವಾಗಲೆಂದು ಶ್ರೀ ಪ್ರಸನ್ನ ವಿರೂಪಾಕ್ಷ ದೇವರ ನಾನಾ ರೀತಿಯ ಸೇವೆಗಳಿಗೆ ಮತ್ತು ಉತ್ಸವಗಳಿಗೆ ಕಂನಕಿಯ ಕಟೆ, ಬುಕ್ಕಾಪುರ, ಮೆಟರೆಯ ಹತ್ತಿರ ನಾಗಲಾಪುರ ರಾಮಾಪುರ, ಅಂತಾಪುರ, ಮುಂತಾದ ಗ್ರಾಮಗಳ ಉತ್ಪತ್ತಿಯನ್ನು ದಾನವಾಗಿ ಬಿಟ್ಟಿರುವುದನ್ನು ತಿಳಿಸುತ್ತದೆ.

"ನಾಗಲಾಪುರದ ಗ್ರಾಮಕ್ಕೆ ಸಲುವ ಕಾಲುವಳಿ ೪ ಸಹಾ ಸಕಲ ಸುವರ್ನಾದಾಯ ಸಕಲ ಭತ್ತ ಆದಾಯ... ತಳವಾಜಿಕೆಯ ರೊಕ ಭತೆ ಜೋಡಿ ಬಿರಾಡ"[೧೩೦] ಎಂದು ಆಗ್ರಾಮದ ಇತರ ಆದಾಯದ ಜೊತೆಗೆ ತಳವಾರಿಕೆ ಆದಾಯವನ್ನು ದಾನವಾಗಿ ಬಿಟ್ಟಿದ್ದನ್ನು ತಿಳಿಸುತ್ತದೆ.

ಕ್ರಿ.ಶ.೧೫೧೩ರ ಹಂಪಿಯ ಮತ್ತೊಂದು ಶಾಸನವು ಸಹ ಕೃಷ್ಣದೇವರಾಯನು ತನ್ನ ತಂದೆ ತಾಯಿಯರಿಗೆ ಪುಣ್ಯವಾಗಲೆಂದು ಶ್ರೀವಿರೂಪಾಕ್ಷ ದೇವರ ಸೇವೆಗಾಗಿ ಚಿಂನಿನಾಯಕನ ಹಳ್ಳಿ, ಕಾಳಗಟ್ಟೆ, ಡಣಾಯಕನ ಪುರ, ರಾಮಚಂದ್ರಪುರ ಮುಂತಾದ ಗ್ರಾಮಗಳ ಉತ್ಪತ್ತಿಯಲ್ಲಿ ದಾನವಾಗಿ ನೀಡಿದ್ದನ್ನು ಕಾಣಬಹುದಾಗಿದೆ.

ಕ್ರಿ.ಶ.೧೫೧೩ರ ಕೃಷ್ಣದೇವರಾಯನ ಶಾಸನದಲ್ಲಿ ಪಂಚಕ ಸೀಮೆಯ "ಗೋಪಿಶೆಟ್ಟಿ ಹಳ್ಳಿಯ ಗ್ರಾಮ ಮತ್ತು ಪಂಚಕ ಸೀಮೆಯ ವೊಳಗಣ ಗ್ರಾಮ-೧ ಅಂತುಗ್ರಾಮ-೩ ಗೋರಿ ಕೆಳಗಣ ಗದೆಯ ಬೀಜವರಿ ಸಹಾಯಿ ಗ್ರಾಮಗಳಿಗೆ ಸಲುವ ತಳಾರಿಕೆ ಸುಂಕ"[೧೩೧] ಎಂದಿದೆ.

ಇದೇ ಕಾಲದ ಮತ್ತೊಂದು ಶಾಸನವು ಹಜಾರ ರಾಮಸ್ವಾಮಿ ದೇವಾಲಯಕ್ಕೆ ಗ್ರಾಮಗಳನ್ನು ಕೃಷ್ಣದೇವರಾಯನು ದಾನ ನೀಡಿದ ಮಾಹಿತಿ ತಿಳಿಯುತ್ತದೆ.

"...ಸ್ತಳದ ಸುಂಕ ಸಾಮ್ಯ ತಳವಾಜಿಕೆಯ ರೊಕಭತ ಜೋಡಿ ಬಿರಾಡ ಗ್ರಾಮಗಳ ನೀರ ಬಿರಾಡ ಅನುಪುಹಾರಿ ತಾ....."[೧೩೨] ಎಂದಿದೆ. ಇದೇ ಕಾಲಕ್ಕೆ ಸೇರಿದ ಮತ್ತೊಂದು ಶಾಸನದಲ್ಲಿ ನರಸಿಂಹ ದೇವರಿಗೆ ಕೋನಮಸಯ್ಯನವರು ಕೊಟ್ಟ ಧರ್ಮಶಾಸನದ ಕ್ರಮವೆಂದರೆ "ಸ್ವಾಮಿ ನಮಗೆ ಪಾಲಿಸಿದ ವಿಜಯನಗರದ ತಳವಾರಿಕೆಗೆ ಸಲುವ ಕಂದಾಯ ಕೊಟ್ಟ ಮೂಲ ಕಾಣಿಕೆ ಅಡಿಗಾಸು.... ರಾಜನಿಗೆ, ದೇವರಿಗೆ ತಳವಾರರು ತಮ್ಮ ಕಂದಾಯವನ್ನು ಅಡಿಗಾಸು ಕೊಟ್ಟದುಂಟು. ಕೃಷ್ಣಸ್ವಾಮಿ ದೇವಾಲಯ ಶಾಸನದಲ್ಲಿ ಜೋಡಿ ಬಿರಾಡ ಸಾಮ್ಯ ನಾಡ ತಳವಾಜಿಕೆ ಸುಂಕ ಕರಣಿಕರ ಮಾನ್ಯರ ಗದ್ದೆಗಳು... ರಾಯದುರ್ಗರ ಸೀಮೆಗೆ ಸಲುವ ಬ್ರಹ್ಮಸಮುದ್ರದ ಗ್ರಾಮ ಈ ಗ್ರಾಮಕ್ಕೆ ಸಲುವ ದುರ್ಗ ದೇವರಿಗೆ ಕೊಟುಬಹ, ಕಡಿವಾಜಿ ನಾಡ ದಳವಾಜಿಕೆ ಹುಗಿಯ ಭತ್ತ.... ಜನ ಮಾದಿಯವರಿಗೆ ಕೊಟುಬಹ ತಳವಾಜಿಕೆ"[೧೩೩] ಎಂದು ಈಗಿನ ಚಿತ್ರದುರ್ಗ ಬಳ್ಳಾರಿ ಜಿಲ್ಲೆಗಳ ಪೂರ್ವಭಾಗದಲ್ಲಿದ್ದ ಗ್ರಾಮ ರಕ್ಷಣೆಯನ್ನು ಮತ್ತು ಆ ಕಾರ್ಯಕ್ಕಾಗಿ ಪಡೆದ ಭೂಮಿಯ ವಿವರವನ್ನು ಹಾಗೂ ನಾಡು ತಳವಾರರು ತಮ್ಮ ಅವಧಿಯಲ್ಲಿ ಸಾಧಿಸಿದ ವಿವರಗಳನ್ನು ಅನೇಕ ಶಾಸನಗಳು ಒಳಗೊಂಡಿವೆ.

ಕೊಪ್ಪಳ ಜಿಲ್ಲೆಯ ಹತೋಟಿ ಶಾಸನ ಕ್ರಿ.ಶ.೧೫೧೫ ಕಾಲಕ್ಕೆ ಸೇರಿದ್ದು ಕೃಷ್ಣದೇವರಾಯನು ಬಾಲಕೃಷ್ಣ ದೇವರ ಪ್ರತಿಷ್ಠಾ ಕಾಲದಲ್ಲಿ ತಂದೆ ತಾಯಿಯರಿಗೆ ಪುಣ್ಯವಾಗಲೆಂದು ಹುಲಿಗೆಯ ಮಾಗಣಿಗೆ ಸೇರಿದ ಅತ್ತಿಮಟ್ಟಿ ಗ್ರಾಮವನ್ನು ದೇವರ ಸೇವೆಗಾಗಿ ದಾನ ಬಿಡುವುದನ್ನು ತಿಳಿಸುತ್ತದೆ.

"ಪೇಟೆವೊಳಗಾದ ಆ ಗ್ರಾಮಕೆ ಸಲುವ ಸುಂಕ ತಳವಾಜಿಕೆ ಜೊಡಿ ಬಿರಾಡಕ ಸಾಮ್ಯ"[೧೩೪] ಎಂದಿದೆ.

ಶ್ರೀ ಕೃಷ್ಣದೇವರಾಯನು ತನ್ನ ಅರಮನೆಗೆ ಆರುಸಾವಿರ ಜನ ಕಾವಲುಗಾರರನ್ನು, ೨೦ ಸಾವಿರ ಭಲ್ಲೆ ಥಾಲುಗಾರರನ್ನು ನೇಮಿಸಿದ್ದನು. ಈ ಕಾಲಾವಧಿಯಲ್ಲಿ "ವಿಜಯನಗರಕ್ಕೆಲ್ಲಾ ಒಬ್ಬ ಮಂತ್ರಿಯು ಆಡಳಿತಗಾರನಾಗಿದ್ದ. ಪಾಯೋಸನು ಬಂದಾಗ ಸಾಳುವ ತಿಮ್ಮನ ತಮ್ಮ ಗೋವಿಂದರಾಜನು ಇಲ್ಲಿ ಮಂತ್ರಿಯಾಗಿದ್ದನು(ಕ್ರಿ.ಶ.೧೫೨೦-೨೨). ಅವನಿಗೆ ತಳವಾರನೆಂಬ ರಕ್ಷಣಾಧಿಕಾರಿಯ ನೆರವಿತು"[೧೩೫] ಎಂದು ಆ ಕಾಲದಲ್ಲಿ ಪ್ರತಿಯೊಬ್ಬ ಮಂತ್ರಿಯ ಕೈ ಕೆಳಗೆ ಒಬ್ಬ ತಳವಾರನಿರುತ್ತಿದ್ದನೆಂಬುದು ಸ್ಪಷ್ಟವಾಗುತ್ತದೆ.

ಹಾಸನ ಜಿಲ್ಲೆ ಬೆಲೂರು ತಾಲೂಕಿನ ಕ್ರಿ.ಶ.೧೫೨೫ರ ಶಾಸನವು ಕೃಷ್ಣದೇವರಾಯ ಊಳಿಗದ ಜಕಣ ನಾಯಕರ ಮಗ ಬಸವಪ್ಪ ನಾಯಕನು ತನ್ನ ತಂದೆಯ ಹೆಸರಿನಲ್ಲಿ

ಬೇಲೂರಿನ ಚೆನ್ನಕೇಶವ ದೇವರಿಗೆ ತೆಪ್ಪಕೊಳವನ್ನು ಕಟ್ಟಿಸಿ ಅದರ ಸೇವೆ ಮತ್ತು ಉತ್ಸವಕ್ಕಾಗಿ ನಾರಾಯಣಪುರ ಮತ್ತು ಹಲುಮಿಡಿ ಗ್ರಾಮವನ್ನು ಮತ್ತು ಬೆರೂರಿನ ತಳವಾರಿಕೆಯ ಆದಾಯವನ್ನು ದೇವರಿಗೆ ಸಮರ್ಪಿಸಿದ ಮಾಹಿತಿಯನ್ನು ಒದಗಿಸುತ್ತದೆ.

"ಬೇಲೂರ ತಳವಾರಿಕೆಯ ವಿಸೇಷಾದಾಯ ದೇವರ ಸೀಮೆಯ ತಳವಾಜಿಕೆ ಯೀಷ್ಟರ ಸ್ವಾಂಮ್ಯ...."[೧೩೬] ಎಂದಿದೆ.

ಹರಪನಹಳ್ಳಿಯ ತಾಲೂಕಿನ ಚಟ್ನಹಳ್ಳಿಯ ಕ್ರಿ.ಶ.೧೫೨೪ರ ಶಾಸನ ಕೃಷ್ಣದೇವರಾಯನು ಆರ್ಯ ಕ್ಷತ್ರಿಯ ಕುಲದ ಮುರಾರಿ ರಾವುತರ ಮಗನಾದ ವಿಸಣರಾವುತನು ನಾರಾಯಣ ಭಟ್ಟನೆಂಬುವವನಿಗೆ ಉಚ್ಚಂಗಿ ವೇಂಠೆಯ ಕವಿಳಿಚೆರ್ವಿ ಸೀಮೆಯ ಚಟನಹಳ್ಳಿ ಗ್ರಾಮವನ್ನು ದಾನ ನೀಡಿದ್ದನ್ನು ತಿಳಿಸುತ್ತದೆ.

"ಆ ಗ್ರಾಮಕೆ ಸಲುವಂತಾ ಮಣೆಯ ಪಾಕೆವ್ರೊಳ ಗಾದವಾರ..... ಸುಂಕ ತಳವಾರಿಕೆ... ಗ್ರಾಮ ವರ್ತ್ತನೆ ನಾಡಸೇನಬೋವಿಕೆ....."[೧೩೭] ಎಂದು ಆ ಸೀಮೆಯ ತಲವಾರಿಕೆ ಮತ್ತು ಸೇನೆಬೋವಿಕೆ ಸುಂಕವನ್ನು ದಾನವಾಗಿ ಬಿಟ್ಟಿದ್ದನ್ನು ತಿಳಿಸುತ್ತದೆ.

ಮಂಡ್ಯ ಜಿಲ್ಲೆ ಪಾಂಡವಪುರ ತಾಲೂಕಿನ ಮೇಲುಕೋಟೆಯ ಕ್ರಿ.ಶ.೧೫೨೮ರ ಶಾಸನವು ಕೃಷ್ಣದೇವರಾಯನಿಗೆ ಪುಣ್ಯವಾಗಲೆಂದು ಶ್ರೀರಂಗಪಟ್ಟಣದ ಸಿಂಧಘಟ್ಟದ ಕೃಷ್ಣರಾಯ ನಾಯಕನು ಮೇಲುಕೋಟೆಯ ಚೆಲುವ ನಾರಾಯಣ ದೇವರಿಗೆ ಕಾವೇ ನಾಯಕನ ಹಳ್ಳಿ, ಗೊಲ್ಲರ ಚಟ್ಟನ ಹಳ್ಳಿಯ ಗ್ರಾಮಗಳನ್ನು ಮತ್ತು ಸಂತೆಯ ಆದಾಯವನ್ನು ದಾನವಾಗಿ ನೀಡಿದ್ದನ್ನು ತಿಳಿಸುತ್ತದೆ. ಅದರಲ್ಲಿ

"ತಳವಾಜಿಕೆಯಿಂದ ಗ ೨೬ ಹೊಗೆದೆಜೆಗೆಯಿಂದ ಗ ೩ ಉಭಯಂಗ ೨೯ ಪಟ್ಟಣದವರಿಗೆ ಸಲವ ಸ್ಥಳಸುಂಕ"[೧೩೮] ಎಂದಿದೆ.

ಕ್ರಿ.ಶ.೧೫೩೫ರ ಶಾಸನವು ವೀರ ಪ್ರತಾಪ ಅಚ್ಯುತರಾಯನ ಕಾಲದಲ್ಲಿ "ತಳವಾರಿಕೆ ಹಣ ಅಕ್ಕ ಸಾಲೆಯ ನೋಟದ ಹಣ ಕೆರೆಯ ಭಂಟಿಯ ಹಣ ಯಿವು ಮುಂತಾದವು"[೧೩೯] ಎಂದು ಕೆಲವು ತೆರಿಗೆಗಳ ಪ್ರಕಾರಗಳ ಬಗ್ಗೆ ಮಾಹಿತಿ ದೊರೆಯುತ್ತದೆ.

ಕ್ರಿ.ಶ.೧೫೩೬ರ ವಿಜಯನಗರ ಕಾಲದ ಶಾಸನವೊಂದು ಮೈಸೂರು ಜಿಲ್ಲೆ ದಾಸನಪುರ ಗ್ರಾಮದಲ್ಲಿದೆ. ಈ ಶಾಸನದಲ್ಲಿ "ಅಚ್ಯುತರಾಯ ಮಹಾರಾಯರು... ನಮಗೆ ನಾಯಕತನಕ್ಕೆ ನಡೆದುಬಂದ ತೆರಕಣಾಂಬೆಯ..... ಮಾದರಿಕೆ, ತಳವಾಜಿಕೆ ಉಪ್ಪಿನ ಕಾವಲಿ"[೧೪೦] ಇತರ ಸಂಗತಿಗಳ ಉಲ್ಲೇಖವಿದೆ. ಅದೇ ರೀತಿ ಚಾಮರಾಜನಗರ ತಾಲೂಕಿನ ದಾಸನಪುರದ ಕ್ರಿ.ಶ.೧೫೩೬ರ ಶಾಸನವು ತಳವಾರಿಕೆಯಿಂದ ಬರುತ್ತಿದ್ದ ಸುಂಕವನ್ನು ತಿಳಿಸುತ್ತದೆ.

ಕ್ರಿ.ಶ.೧೫೩೫ರ ಚಿಕ್ಕನಾಯಕನ ಹಳ್ಳಿಯ ಕಂದಿಕೆರೆ ಶಾಸನದಲ್ಲಿ ವಿಜಯನಗರ ಅಚ್ಯುತರಾಯನ ಮನೆಯ ಬಯಕಾರ ರಾಮಪ್ಪನವರು ವಿರುಪಾಕ್ಷ ದೇವರ ಶಿವರಾತ್ರಿ ಪೂಜೆಗೆ ಕಂದಿಕೆರೆ ಸೀಮೆಯ ಮದುವೆ ಮತ್ತು ಇತರೆ ಸುಂಕಗಳನ್ನು ದಾನ ಮಾಡಿದ್ದನ್ನು ತಿಳಿಸುತ್ತದೆ.

"…..ಮದುವೆಯ ಸುಂಕವನು ಅಷ್ಟದಶ ಪೂಜೆಯೊಳಗಾಗಿದ್ದ ಸಮಸ್ತರಿಗು ಬಿಟ್ಟೆಉ….. ಸಲುವ ಗ ಉಡುವಣ ತಳವಾಜಿಕೆಯ ಹಣ ಅಕ್ಕಸಾಲೆಯ ನೋಟದ ಹಣಕೆ…."[೧೪೧]

ಕ್ರಿ.ಶ.೧೫೪೨ರ ಕಡೂರು ತಾಲೂಕಿನ ಆಸಂದಿ ಶಾಸನವು ಅಚ್ಯುತದೇವರಾಯನಿಗೆ ಪುಣ್ಯವಾಗಲೆಂದು ಅಬಳ ಮಹಾ ಅರಸ ನಾಯಕತನಕ್ಕೆ ವಹಿಸಿದ್ದ "ಯೆಕಟ್ಟಿ ಸೀಮೆಯ ಆಸಂದಿನಾಡ, ಮುಕ್ತಿ ಹಳ್ಳಿ ಹಿರಿಯೂರು ಗ್ರಾಮಗಳಿಗೆ ಜಾತಿ ೧೮ ಮದುವೆ ಸುಂಕ ನಾಡ ತಳವಾರಿಕೆ ಹಣ ಸೆಟ್ಟಿವಣ, ನೋಟವಣ ತಳವಾರಿಕೆ ಹಣ, ಸರ್ವಮಾನ್ಯವಾಗಿ"[೧೪೨] ಬಿಟ್ಟಿದ್ದನ್ನು ತಿಳಿಸುತ್ತದೆ.

ಕ್ರಿ.ಶ.೧೫೪೪ರ ಬಳ್ಳಾರಿ ಜಿಲ್ಲೆಯ ಉಚ್ಚಂಗಿದುರ್ಗದ ಶಾಸನವು ರಾಮರಾಜ ಅಯ್ಯನು ಉಚ್ಚಂಗೆಮ್ಮನ ನಂದಾದೀಪಕ್ಕೆ ತಾಳವರಿ ಹಣವನ್ನು ದಾನ ನೀಡಿದ್ದನ್ನು ತಿಳಿಸುತ್ತದೆ.

"…ಉಂಚಯ ದೇವತೆಯ ಗುಡಿಗೆ ತೆಜುವ ತಾಳವರಿ ರೊಂಖವನು ನಾವು ದೇವತೆಯ ನಂದಾದೀಪಕ್ಕೆ ನೈಂವೇದ್ಯಕ್ಕೆ"[೧೪೩]

ಕ್ರಿ.ಶ.೧೫೫೦–೫೧ರ ಮೇಲುಕೋಟೆ ಶಾಸನದಲ್ಲಿ ಸದಾಶಿವ ಮಹಾರಾಯರು ಅಮರ ಮಾಗಣಿಗೆ ಪಾಲಿಸಿದ ಸಿಂದಗಟ್ಟದ ಸ್ಥಳದಲ್ಲಿ ಪೂರ್ವದಿಂದ ಸ್ವಾಮಿಯ ತಿರುವಿಡಿಯಾಟಕ್ಕೆ ಸಲುವ ಗ್ರಾಮಗಳಿಗೆ ಕೆಲವಾಗಿ ಸಿಂದಗಟ್ಟದವರಿಗೆ ತಳವಾರಿಕೆ"[೧೪೪] ಎಂದಿದೆ. ಇಲ್ಲಿ ತಳವಾರಿಕೆ ಗಡಿಯನ್ನು ನಿರ್ಧರಿಸಿರುವುದು ಕಾಣಬಹುದಾಗಿದೆ.

ಕ್ರಿ.ಶ.೧೫೫೪ರ ಸದಾಶಿವರಾಯನ ಕಾಲದ ರಾವಿರಾಳು ಶಾಸನದಲ್ಲಿ ಸದಾಶಿವರಾಯನ ಕಾಲದಲ್ಲಿ ಶ್ರೀರಂಗರಾಜನ ಮಗ ರಾಮರಾಜನ ನಿರೂಪದಂತೆ ದಿಂಮರಾಜಯ್ಯನು ಆದವಾನಿ ರಾಜ್ಯದ ತಳವಾರಿಕೆಯಿಂದ ಬಂದ ಹಣವನ್ನು ಶ್ರೀಮಲ್ಲಿನಾಥ ಪುರವಾದ ರಾವಿಹಾಳನ್ನು ನಾನಾಗೋತ್ರದ ಮಹಾಜನರಿಗೆ ಹಂಚುತ್ತಾನೆ.

"…ನಿಮಗೆ ಧಾರೆಯನೆರದು ಕೊಟ ನಾಡದಳವಾರಿಕೆ–ಆಯ ಸಾಂಮ್ಯರೊಕ ಭತ್ತ ಕಡಿವಲದ ತಳವಾರಿಕೆ ಸಲುವಾ….ಯ್ಯ"[೧೪೫] ಎಂದಿದೆ.

ಕ್ರಿ.ಶ.೧೫೫೮ರಲ್ಲಿ ಆಳುತ್ತಿದ್ದ ಸದಾಶಿವದೇವ ಮಹಾರಾಯನ ರಾಜ್ಯಭಾರದಲ್ಲಿ ಮಹಾ ಮಂಡಳೇಶ್ವರ ರಾಮರಾಜ ಅಪ್ಪಯ್ಯದೇವ ಮಹಾ ಅರಸನ ಮಗ ಕೋನಪದೇವ ಮಹಾಅರಸನು ರಾಯದುರ್ಗ ವೆಂಠೆಗೆ ಸಲ್ಲುವ ಉರುವಕೊಂಡ ಸೀಮೆಯ ಅಗ್ರಹಾರಗಳಾದ ಅನದಲೆ

ನಿಂಬೆಗಲ್ಲು ರಾಯಸನಪಳ್ಳಿ ಕಲಿದೇವನಹಳ್ಳಿ, ಸಿರಿವರ ರೇವಿನಾಯಕನಹಳ್ಳಿ ಯರ್ರಗುಡಿ ಮುಂತಾದ ಮಹಾಜನರಿಗೆ ತಳವಾರಿಕೆ ಬೇಡಿಕೆ ರಾಯಸದ ವರ್ತನೆ ಕರಣಿಕರ ವರ್ತನೆ, ಮೊದಲಾದ ತೆರಿಗೆಗಳಿಂದ ವಿನಾಯಿತಿ ನೀಡಿದನೆಂದು ಇದರಲ್ಲಿ ದಾಖಲಿಸಿದೆ.

ಹಡಗಲಿ ತಾಲೂಕಿನ ನಕ್ಕರ ಹಲುವಿನ ಕ್ರಿ.ಶ.೧೫೬೨ರ ಒಂದು ಶಾಸನವು "ನಗರೆಹಾಳ್ ಅಧಿಕಾರಿ ಸೇನಬೋವ ತಿರುಮಲ್ಲರಸಗೌಡ ತಳರ ಮತ್ತು ಜೋಯಿಸರಿಗೆ ಮಾನ್ಯ ಭೂಮಿಯನ್ನು ಕೊಡಲಾಯಿತೆಂದು ತಿಳಿಸುತ್ತದೆ."[೧೪೬]

ಕ್ರಿ.ಶ.೧೫೬೨ರ ಒಂದು ಶಾಸನವು ನಾಯಕತನ ಮತ್ತು ತಳವಾರಿಕೆಗೆ ರಾಜನಿಂದ ವಿಶೇಷ ಮನ್ನಣೆ ಇತ್ತು ಎಂಬುದಕ್ಕೆ ಹಾಸನ ಜಿಲ್ಲೆಯ ಕುದುರೆಗುಂಡಿಯ ಈ ಶಾಸನ ಸಾಕ್ಷಿಯಾಗುತ್ತದೆ.

ವೀರಪ್ರತಾಪ ಅಚ್ಯುತರಾಯ ಮಹಾರಾಯರ ಮಕ್ಕಳು ಸದಾಶಿವರಾಯರು ವಿದ್ಯಾನಗರಿ ಅಧಿಕಾರಿ ಅನ್ಯೆಯಸುಂಕ ತಳವಾರಿಕೆ ಸೊಲಗೆ ಬಿಟ್ಟ ಅಳಿವು ಎಂದು ಉಲ್ಲೇಖಿಸಲಾಗಿದೆ. ಇದೇ ಜಿಲ್ಲೆಯ ಹಾಸನದ ವಿರೂಪಾಕ್ಷ ದೇವಸ್ಥಾನದಲ್ಲಿನ ಕ್ರಿ.ಶ.೧೫೬೩ರಲ್ಲಿ "ವೀರ ಪ್ರತಾಪ ಅಚ್ಯುತರಾಯ..... ಬಯ್ಯಪ ನಾಯಕನವರ ಮಕ್ಕಳು ಕೃಷ್ಣಪ್ಪ ನಾಯಕ ಒಬ್ಬನಿಗೆ ಅಮರ ನಾಯಕತನಕ್ಕೆ.... ಪಾಲಿಸಿದ.... ಕಪ್ಪು ಜೋಡಿ ಬೇಡಿಕೆ ತಳವಾಱಿಕೆ... ಅಳಿವು ಅನ್ಯಾಯ..."[೧೪೭] ಇತ್ಯಾದಿ ವಿವರಗಳಿವೆ. ಇಲ್ಲಿ ಏಕಕಾಲಕ್ಕೆ ಎರಡು ಹುದ್ದೆ, ದಾನ-ದತ್ತಿಗಳನ್ನು ನೀಡಿದ್ದು ಗಮನಾರ್ಹವಾದುದಾಗಿದೆ.

ಹಾಸನ ಜಿಲ್ಲೆಯ ಆಲೂರು ತಾಲೂಕಿನ ಪಾಳ್ಯ ದೇವಸ್ಥಾನದ ಶಾಸನವು ಕ್ರಿ.ಶ.೧೫೬೬ರಂದು ಬುಕ್ಕಪ್ಪ ನಾಯಕರು ಕೃಷ್ಣಪ್ಪ ನಾಯಕರಿಗೆ ಪುಣ್ಯವಾಗಲೆಂದು "ಗೋಣಿ ಬೀಡ ಸೀಮೆಯ ೧೮ ಅಘರ ಮುಂತಾದ ಸರ್ವಮಾನ್ಯಗಳಲ್ಲಿ 'ತೆಕ್ಕೊಂಬ ತಳವಾರಿಕೆ ಬೇಡಿಕೆ ವರ್ತನೆಗಳೂ ಸೊಲ್ಲಗೆ ಬಿಟ್ಟ"[೧೪೮] ಸಂಗತಿ ತಿಳಿಯುತ್ತದೆ.

ಇದೇ ಜಿಲ್ಲೆಯ ಸೆಟ್ಟಿಹಳ್ಳಿಯ ಶಾಸನವು ಹಾಸನದ ವಿರೂಪಾಕ್ಷ ದೇವರಿಗೆ ಕಂದಾಚಾರದ ಬುಕ್ಕಪ್ಪ ನಾಯಕನ ಮಗ ಕಚ್ಚಪ್ಪನಾಯಕ ತಮ್ಮಪ್ಪ ನಾಯಕ ಹಾಗೂ ವಿಜಯನಗರದ ಸದಾಶಿವರಾಯನು ಹಾಸನ ಸೀಮೆಯ ಸೆಟ್ಟಿಹಳ್ಳಿಗೆ ಸಲ್ಲುವ ವಿವಿಧ ಕಾಣಿಕೆಗಳನ್ನು ಹಾಗೂ ತಳವಾರಿಕೆಯನ್ನು ದಾನವಾಗಿ ಬಿಟ್ಟಿದನ್ನು ಸೂಚಿಸುತ್ತದೆ.

".....ಸೆಟ್ಟಿಹಳಿಗೆ ಸಲುವಂಥಾ ಚತುಸ್ಸೀಮೆಯೊಳಗಾದ ಗದ್ದೆ ಬೆದ್ದಲು, ಕಾಲುವೆ ಆಣೆ, ಅಚ್ಚುಕಟ್ಟು....... ಜೋಡಿ ಬೇಡಿಗೆ ತಳವಾಱಿಕೆ ಅಳಿವು ಅನ್ಯಾಯ...... ಸರ್ವ್ವಮಾನ್ಯ"[೧೪೯]

ಇದೇ ಜಿಲ್ಲೆಯ ಮತ್ತೊಂದು ಶಾಸನವು ಕುದುರೆಗುಂಡಿಯ ವೀರಭದ್ರದೇವರಿಗೆ ಅರಮನೆಗೆ ಸಲ್ಲುವ ಅನ್ಯೆಯಸುಂಕ, ತಳವಾರಿಕೆ ಸುಂಕವನ್ನು ಸರ್ವಮಾನ್ಯವಗಿ ಬಿಟ್ಟಿದ್ದನ್ನು ತಿಳಿಸುತ್ತದೆ.

"ಕುದುರೆ ಗುಂಡಿಯ ವೀರಭದ್ರ ದೇವರಿಗೆ.... ಅಧಿಕಾರಿ ಅನ್ಯೆಯ ಸುಂಕ, ತಳವರಿಕೆ ಸೊಲಗೆ ಬಿಟ್ಟ ಅಳಿಉ ಅಂನ್ಯಯ"[೧೫೦] ಎಂದಿದೆ.

ಮೈಸೂರು ಜಿಲ್ಲೆ ಕೃಷ್ಣರಾಜ ಸಾಗರದ ಕ್ರಿ.ಶ.೧೫೭೭ರ ಶಾಸನವು ಶ್ರೀರಂಗದೇವ ಮಹಾರಾಜ ಮತ್ತು ವೆಂಕಟಪ್ಪ ನಾಯಕರು ವಿಠ್ಠಲಭಟ್ಟರಿಗೆ ಕೊಟ್ಟ ಅಗ್ರಹಾರ ಮತ್ತು ಭೂದಾನಕ್ಕೆ ಸಂಬಂಧಿಸಿದ್ದಾಗಿದೆ.

"ಕಾವೇರಿ ಮಧ್ಯದ ನರಸಿಂಹಪುರದ ಸೀಮೆಗೆ ಸಲುವ ಹಂಪಾಪುರದ ಸ್ಥಳದ ಗಳಿಕೆಜೆಗೆ ಪ್ರತಿನಾಮವಾದ ....... ಈ ಗ್ರಾಮಕೆ ಉಂಟಾದ ಬಾಡಿ ಬೇಡಿಕೆ ಕಾಣಿಕೆ ಕಡಾಯ ಕೂಟ ಬೇಟೆ ಬಿಟ್ಟ ಬೇಗಾರಸುಂಕ ತಳವಾಜೆಕೆ ಯಿಉ ಮೊದಲಾದ... ಸರ್ವಮಾನ್ಯವಾಗಿ"[೧೫೧] ಎಂದು ಆ ಕಾಲದಲ್ಲಿದ್ದ ಬಾಡಿ ಬೇಡಿಗೆ ಕಡಾಯ ಕೂಟ, ಬೇಗಾರರ ಮತ್ತು ತಳವಾರಿಕೆ ಸುಂಕವನ್ನು ವಿಧಿಸದೇ ದಾನವಾಗಿ ಭೂಮಿ ನೀಡಿದ್ದನ್ನು ಈ ಶಾಸನ ತಿಳಿಸುತ್ತದೆ.

ಕ್ರಿ.ಶ.೧೫೮೭ಕ್ಕೆ ಸೇರಿದ ಚಿಕ್ಕ ಮಂಗಳೂರು ಜಿಲ್ಲೆಯ ಖಾಂಡ್ಯ ಗ್ರಾಮದ ಶಾಸನವು ಶ್ರೀ ವೆಂಕಟಪ್ಪ ನಾಯಕರ ಮಗ ಕೃಷ್ಣಪ್ಪ ನಾಯಕರು ಅಮರ ಮಾಗಣಿಗೆ ಸಲ್ಲುವ ಖಂಡಾದಾಯವನ್ನು ನರಸಿಂಹ ದೇವರಿಗೆ ಧಾರಪೂರ್ವಕವಾಗಿ ನೀಡಿದ್ದನ್ನು ತಿಳಿಸುತ್ತದೆ.

"ಅಮರ ಮಾಗಣಿಗೆ ಸಲುವ ವಸ್ತಾರೆ ಸೀಮೆಯೊಳಗಣ..... ಖಂಡಾದಾಯ ಜನಾರ್ಧನ ದೇವರು ಮಾರ್ಕಂಡೇಶ್ವರ ದೇವರು ನಾರಸಿಂಹ ದೇವರಿಗೆ.. ಸಲುವ... ರೊಕ್ಕ ದೊಳಗೆ ತಳವಾರಿಕೆಗೆ ತೆಕೊಂಡ ಗ ೨೦೦ ವರಹವನೂ ಅಂಚಂದ್ರಾರ್ಕಸ್ಥಾಯಿಯಾಗಿ ಧಾರಾ ಪೂರ್ವಕವಾಗಿ...."[೧೫೨] ಎಂದಿದೆ.

ಕ್ರಿ.ಶ.೧೬ನೇ ಶತಮಾನದ ಕಾರಬಯಲು ಶಾಸನವು ತಳವಾರಿಕೆಯ ದಾಸಪ್ಪನಾಯಕರ ಮಗನಾದ ಚಿಕ್ಕರಸನಾಯ್ಕರಿಗೆ ದಂಡಿಗೆ ಉಂಬಳಿಯಾಗಿ ಗ್ರಾಮವನ್ನು ನೀಡಿದ್ದನ್ನು ತಿಳಿಸುತ್ತದೆ.

"ತಳವಾರಿಕೆಯ ದಾಸಪನಾಯಕರ ಮಗ ಚಿಕ್ಕರಸ ನಾಯ್ಕರಿಗೆ ದಂಡಿಗೆ ಉಂಬಳಿ ಕೊಟ್ಟ ಗ್ರಾಮ ಅರಸನ ಅಪಳೊಯಿಂದ ಬೆಳೂರ ಹೆಬಂದುವರು ನಿದಿಗ ಉಡಿಗೆ"[೧೫೩] ಎಂದು ಆಗಿನ ಕಾಲದಲ್ಲಿ ತಳವಾರಿಕೆಯನ್ನು ದಂಡಿಗೆ ಉಂಬಳಿಯಾಗಿ ನೀಡುತ್ತಿದ್ದುದರ ಬಗೆಗೆ ಮಾಹಿತಿ ತಿಳಿಯುತ್ತದೆ.

'ರಾಯಚೂರು ಜಿಲ್ಲೆ ಲಿಂಗಸೂಗೂರು ತಾಲೂಕು ಸುಲ್ತಾನಪುರದ ಕ್ರಿ.ಶ.೧೬೪೨ರ ಶಾಸನದಲ್ಲಿ ಸುಲ್ತಾನ್ ಮಹಮ್ಮದ್ ಬಾದ್‌ಶಾಹ ಸಾಹೇಬರ ದೌಲತ್‌ಖಾನ್‌ನಾದಂತ ಮುದುಗಲ್ಲ

ಒಡೆಯನಾದ ರಾಘೋಸಿ ದೋಬಾಬಜಿ ಸಾಹೇಬನು ಮಸ್ಕಿಯ ಬಳಿಯಿರುವ ಹಿರೇಹಳ್ಳದ ಬದಿಯಲ್ಲಿ ಸುಲ್ತಾನಪುರವನ್ನು ಕಟ್ಟಿಸಿ ದತ್ತಿಗಳನ್ನು ಬಿಟ್ಟನೆಂದು, ತಳವಾರ ಸಿರಮನಾಯಕ ಶಾಸನವನ್ನು ಹಾಕಿಸಿದನೆಂದು' ತಿಳಿದುಬರುತ್ತದೆ.[೧೫೪]

ಹಾಸನ ಜಿಲ್ಲೆಯ ಕ್ರಿ.ಶ.೧೬–೧೭ನೇ ಶತಮಾನಕ್ಕೆ ಸೇರಿದ ಶಾಸನದಲ್ಲಿ ಪುಷ್ಪಗಿರಿಯ ಬೆಟ್ಟದ ದೇವರಿಗೆ ಹಾರನಹಳ್ಳಿಯ ಕುಮಾರ ಭೈರನಾಯಕನು ಕೊಟ್ಟ ಜೋಡಿ ಬೇಡಿಕೆ ತಳವಾರಿಕೆಯನ್ನು ಉಚಿತವಾಗಿ ನೀಡಿದ್ದನ್ನು ತಿಳಿಸುತ್ತದೆ.

"ಕುಮಾರ ಭೈರನಾಯಕನು ಕೊಟ್ಟ ಭೈರಾಪುರಕ್ಕೆ ಜೋಡಿ ಬೇಡಿಕೆ ತಳವಾರಿಕೆ ವಿರಹಿತ"[೧೫೫] ಎಂದಿದೆ.

೧೬ನೇ ಶತಮಾನದ ನಂಜನಗೂಡು ತಾಲೂಕಿನ ಏಚಿಗನಹಳ್ಳಿಯ ಒಂದು ಸಣ್ಣ ಶಾಸನವು. ಪ್ರಾಚೀನ ಕಾಲದಲ್ಲಿ ಅನೇಕ ಯುದ್ಧ ಮತ್ತು ಹೋರಾಟಗಳಲ್ಲಿ ತಳವಾರರು ಭಾಗಿಯಾಗಿ ಕೆಲವು ಕಡೆ ಸಾವನಪ್ಪಿರುವ ಮಾಹಿತಿಗಳು ದೊರೆಯುತ್ತವೆ. ಅದರಲ್ಲಿ ಈ ಶಾಸನದಲ್ಲಿ ಭೋಳ ಎಂಬ ತಳವಾರ ಕೋಟೆಯ ಕಾವಲಿದ್ದಾಗ ಸತ್ತದನ್ನು ತಿಳಿಸುತ್ತದೆ.

"ನಳ ಸಂತ್ಸದಲಿ ಕೊತೆಯ ತಲರಿ ಭೋಳ ಸತ"[೧೫೬] ಎಂದಿದೆ.

ಕ್ರಿ.ಶ.೧೬ನೇ ಶತಮಾನದಲ್ಲಿ ಕೊಪ್ಪಳ ಜಿಲ್ಲೆಯ ಅಗಳಕೇರಿಯ ಒಂದು ಶಾಸನದಲ್ಲಿ ಗಂಗಾ ಪಂಡಿತರು ಊರ ತಳವಾರಿಕೆ ಮತ್ತು ನಾಡ ತಳವಾರಿಕೆಗೆ ಸತ್ತಿಗೆ ಮಾನ್ಯವಾಗಿ ಆರು ಗುಳ ಭೂಮಿಯನ್ನು ಮಾನ್ಯ ನೀಡಿದ್ದರ ಬಗ್ಗೆ ಮಾಹಿತಿ ತಿಳಿಯುತ್ತದೆ.

"ಯಿದು ಗಂಗಾಪಂಡಿತರು ಕೊಟ ಊರ ತಳವಾರಿಕೆ ನಾಡ ತಳವಾರಿಕೆ ಸತಿಗೆ ಮಾನ್ಯ ಆರು ಗುಳ ಮಾ...."[೧೫೭] ಎಂದಿದೆ.

ಇದೇ ಕಾಲಘಟ್ಟದ ಇದೇ ಊರಿನ ಮತ್ತೊಂದು ಶಾಸನವು ಹುಚಮಲಿ ನಾಯಕ ನೆಂಬುವವನಿಗೆ ಊರ ತಳವಾರಿಕೆಯನ್ನು ನೀಡಿದ ವಿಷಯವನ್ನು ಉಲ್ಲೇಖಿಸಿದೆ.

"ಯಿದು ಹುಚಮಲಿನಾಯಕ ಕೊಟ ಊರ ತಳವಾರಿಕೆ ಮಾಂನ್ಯ ಕೊಂಡರದು"[೧೫೮] ಎಂದಿದೆ.

ಕ್ರಿ.ಶ.೧೬೫೦ರ ಬಳ್ಳಾರಿಯ ನಿಚ್ಚವ್ವನ ಹಳ್ಳಿಯ ಶಾಸನದಲ್ಲಿ ಸುಬೇದಾರ ರಂಗಪ್ಪನು ರಾಜ್ಯಕ್ಕೆ ಆದಾಯ ಬರುವ ಹಾಗೆ ಮಾಡಿ ಉಳಿದ ಅರಸರೊಂದಿಗೆ ಬಾಗಳಿ ಸಂಸ್ಥಾನವು ಉತ್ತಮ ಸಂಬಂಧವುಂಟಾಗುವಂತೆ ಮಾಡಿದ್ದರಿಂದ ಬಾಗಳಿ ಬಸವಪ್ಪ ನಾಯಕರು ಗಡಿ ನಿಜಾಪುರವನ್ನು ದಾನವಾಗಿ ನೀಡಿದ್ದನ್ನ ತಿಳಿಸುತ್ತದೆ.

"ಯಿದೊದೆಂದು ಬರಿಸಿಕೊಟ್ಟ ಗ್ರಾಮದಾನ ಪಟ್ಟೇಸ್ಥಾನ ಮ್ಯಾಂನ್ಯ ಪೂರ್ವವನೂ ದೇಶಾಯಿಕೆ ನಾಡ ತಳವಾರಿಕೆ ಆಯಾ ಮ್ಯಾಂನ್ಯ ವರ್ತನೆ....."[೧೫೯] ಎಂದಿದೆ.

ಕ್ರಿ.ಶ.೧೭, ೧೮ನೇ ಶತಮಾನದ ಕೊಪ್ಪಳ ಜಿಲ್ಲೆಯ ಆನೆಗೊಂದಿಯ ಒಂದು ಶಾಸನವು ಸದಾಶಿವರಾಯನು ಆನೆಗೊಂದಿಯ ಅಂಬಿಗರ ನಾಗಜೋಗಿ ಮತ್ತು ಬಸವ ಜೋಗಿಯರಿಗೆ ಪಾಲಿಸಿದ ತಾಮ್ರಶಾಸನ, ತುಂಗಭದ್ರನದಿಯ ಆನೆಗೊಂದಿ, ತಳವಾರ ಕಟ್ಟೆಯಲ್ಲಿ ೧೦ ಹರಗೋಲು, ೧೦ ಮಂದಿ ಅಂಬಿಗರು ನಿರಾತಂಕವಾಗಿ ಸರಕಾರದ ಸೀಮೆಯಲ್ಲಿ ಕಾರ್ಯ ನಿರತರಾಗಿದ್ದು ರಾಜನಿಗೆ ವಿಜ್ಞಾಪನೆ ಮಾಡಿಕೊಂಡು ಆನೆಗೊಂದಿಯಲ್ಲಿ ೧೫ ಕೊಳಗ ನೀರು ಭೂಮಿ ತಳವಾರ ಕೋಟೆಯಲ್ಲಿ ೧೫ ಕೊಳಗ ಒಟ್ಟು ೩೦ ಕೊಳಗ ನೀರು ಭೂಮಿಯನ್ನು ನೀಡಿದ ವಿಷಯವನ್ನು ತಿಳಿಸುತ್ತದೆ.

"ಆನೆಗೊಂದಿ ಅ ೧೫ ಕೊಳಗ ನೀರು ಭೂಮಿ ತಳವಾರ ಕೋಟೆಯಲ್ಲಿ ೧೫ ಕೊಳಗ ನೀರು ಭೂಮಿ ೩೦ ಕೊಳಗ ಭೂಸ್ವಾ..."[೧೬೦] ಎಂದಿದೆ. ಇಲ್ಲಿ ಆನೆಗೊಂದಿಯ ಸೀಮೆಯಲ್ಲಿನ ಭೂಮಿ ಮತ್ತು ನೀರನ್ನು ದಾನವಾಗಿ ನೀಡಿದ ವಿಷಯದೊಂದಿಗೆ ತಳವಾರಘಟ್ಟದ ಬಳೀಯ ಕೋಟೆಯನ್ನು 'ತಳವಾರ ಕೋಟೆ' ಎಂದು ಕರೆಯುತ್ತಿದ್ದುದು ತಿಳಿದುಬರುತ್ತದೆ. ಅದಕ್ಕೆ ತಳವಾರರೇ ಕೋಟೆ ಕಾವಲಿನ ಉಸ್ತುವಾರಿ ಹೊಂದಿದ್ದರಿಂದ 'ತಳವಾರ ಕೋಟೆ' ಎಂದು ಕರೆದಿರಬಹುದು.

ಕ್ರಿ.ಶ.೧೭ನೇ ಶತಮಾನದ ಬಳ್ಳಾರಿ ಜಿಲ್ಲೆಯ ಚಲ್ಲಕೂಡಲೂರು ಶಾಸನವು ಕೂಡಲೂರು ಅಂಕುಸರಾಯನ ಮಗ ಸಣಂ ಮಾಯಿದೇಶಾಯಿ ತಳವಾರ ನಾಗಣ ಪೊತಯಗೆ ಸರ್ವಮಾನ್ಯ ನೀಡಿದ ಉಲ್ಲೇಖವಿದೆ.

"ಕೂಡಲೂರ ಅಂಕುಸರಾಯ ವೊಡೆಯಜ ಪೌತ್ರ ಸಣಂ ಮಾಯಿ ದೇಶಾಯಿ ತಳವರಿ ನಾಗಣ ಪೂತಯಗ..... ಚಾಚರ ಮೂರು ಸರ್ವ ಮಾನ್ಯ"[೧೬೧] ಎಂದು ಅಂದಿನ ಕಾಲದಲ್ಲಿ ದೇಸಾಯಿಯವರು ತಳವಾರ ನಾಗಣ್ಣ ಎಂಬುವವನಿಗೆ ಭೂಮಿಯ ಆದಾಯವನ್ನು ದಾನ ನೀಡಿದ್ದನ್ನು ತಿಳಿಸುತ್ತದೆ.

ಕ್ರಿ.ಶ.೧೭೦೪ರ ಬಳ್ಳಾರಿ ಜಿಲ್ಲೆಯ ಕೆಂಚನಗುಡ್ಡದ ಶಾಸನವು ಸಿರಿಗುಪ್ಪ ಸೀಮೆಯ ನಾಡ ಗೌಡಿಕೆಯನ್ನು ಮುದುಕನ ಗೌಡನ ಮಗ ಕೆಂಚಣಗೌಡನಿಗೆ ನೀಡಿದ್ದನ್ನು ತಿಳಿಸುತ್ತದೆ. ಅಲ್ಲದೆ ಈ ಶಾಸನದಲ್ಲಿ ತಳವಾರ ಗಡ್ಡಿಯ ನಂದಿನಾಯಕ, ತಳವಾರ ತಿಂಮಿನಾಯಕರ ಉಲ್ಲೇಖವಿರು ವುದನ್ನು ಕಾಣಬಹುದು.

".....ತಳವಾರ ಗಡ್ಡಿ ನಂದಿನಾಯಕ ಕಂವಾರ ಫಣಿಯೋಜ ಬಡಿಗೆ ಸಹ...... ತಳವಾರರ.... ತಿಂಮಿನಾಯಕ.... ಪಂನಿನಾಯಕ ಶ್ರೀ ಶ್ರೀ ಶ್ರೀ"[೧೬೨] ಎಂದು ವಿವಿಧ ವೃತ್ತಿಯವರ ಜಮೀನುಗಳ ವಿವರ ಮತ್ತು ಅವರ ಗಡಿಯನ್ನು ನಿರ್ಧರಿಸಿರುವುದನ್ನು ಈ ಶಾಸನದಲ್ಲಿ ಕಾಣಬಹುದಾಗಿದೆ.

ಕ್ರಿ.ಶ.೧೭೪೦ರ ಹೊಸನಗರದ ದಾನ ಶಾಸನದಲ್ಲಿ ಕೆಳದಿ ಬಸವಪ್ಪ ನಾಯಕ ಮೊಸರೂರ ಸೀಮೆಯ ದೂನದ ಗ್ರಾಮವನ್ನು ನೀಲಂಮಾಜಿಯ ಭಕ್ತಿಯ ಪೂರ್ವಕವಾಗಿ ವಿರಕ್ತಮಠಕ್ಕೆ ಬಿದರೂರಿನ ತಳವಾರಿಕೆಯನ್ನು ನೀಡಿದನ್ನು ತಿಳಿಸುತ್ತದೆ.

"......ನೀಲಂಮಾಜಿ ಅಂಮನವರ ಭಕ್ತಿಯಲು ಬಿದರೂರ ತಳವಾರಿಕೆ ಸಿಸ್ತಿನಲ್ಲು ಸೋಮವಾರದ ಪೇಟೆಯಲ್ಲಿ...."[೧೬೩] ಎಂದಿದೆ.

ಕಾಲ ನಮೂದಿತವಲ್ಲದ ಕೊಪ್ಪಳ ಜಿಲ್ಲೆಯ ಅಗಳಕೆರೆಯ ಒಂದು ಶಾಸನದಲ್ಲಿ ಗಂಗಾ ಪಂಡಿತರು ಊರ ತಳವಾರಿಕೆ, ನಾಡತಳವಾರಿಕೆ ಮತ್ತು ಸತ್ತಿಗೆ ಮಾನ್ಯವಾಗಿ ಆರುಗುಳ ಮಾನ್ಯವನ್ನು ನೀಡಿದ್ದಾರೆ ಎಂಬುದನ್ನು ಉಲ್ಲೇಖಿಸಿದೆ.

"ತಳವಾರಿಕೆ ನಾಡ ತಳವಾರಿಕೆ ಸತಿಗೆ ಮಾಂನ್ಯ ಆರುಗುಳ ಮಾ....."[೧೬೪] ಎಂದಿದೆ.

ಅದೇ ರೀತಿ ಆಂಧ್ರಪ್ರದೇಶದ ಮಡಕಸಿರಾ ತಾಲೂಕಿನ ಅಗಳಿ ಶಾಸನದಲ್ಲಿ ಹುಲಿಕುಂಟೆಯ ಚಂದನಾಯಕನ ಮಗ ತಳವಾರ ದೊಡ್ಡ ಎನ್ನುವವನಿಗೆ ಕಾಚಪೊಡೆಯ ಎನ್ನುವನಿಗೆ ಅಗಳಿಯ ತಳವಾರಿಕೆಯನ್ನು ಕೊಟ್ಟಿದ್ದನ್ನು ಈ ಶಾಸನದಲ್ಲಿ ದಾಖಲಿಸಿದೆ.

"ಹೂಲಿ ಕುಂಟೆ ಚಂದ ನಾಯಕನ ಮಗ ತಳವಾರ ದೊಡ್ಡಗೆ ಕಾಚಪೊಡೆಯ ಅಗಳಿ ತಳವಾಜಿಕೆನೂ ಆ ಚಂದ್ರಾರ್ಕಸ್ತಾ ಇಯಾಗಿ ಕೂಟ ಶಾಸನ...."[೧೬೫] ಎಂದಿದೆ.

ಸಿಂಧನೂರು ತಾಲೂಕಿನ ಮುಕ್ಕುಂದಿ ಶಾಸನದಲ್ಲಿ "ಗೌಡ ಸೇನಭೋವ ಪಟಣ ಸೆಟಿಗಳು ತಳವಾರರು ಕಾರಟಗೆ, ಸಿದಾಪುರ, ಮುಕುಂದಿ ಮುಂತಾದ ಗ್ರಾಮಾನುಗ್ರಾಮಗಳ ಗೌಡ ಶಾನಭೋಗರು ದೇವರಿಗೆ ಕೊಟ್ಟ ತೆರಿಗೆ ಮದುವೆ ಮಂಗಳಕಾರ್ಯ ಹಾಗೂ ಸಂತೆಗೆ ಮಳಿಗೆಗಳನ್ನು ಕಟ್ಟಿಸುತ್ತಾರೆ"[೧೬೬] ಎಂದು ವಿವರವಿದೆ.

ಈ ಶಾಸನದಿಂದ ಪ್ರಾಚೀನ ಕಾಲದಿಂದಲೂ ದಾನ ದತ್ತಿಗಳನ್ನು ರಾಜ ಮಹಾರಾಜರಿಂದ ಪಡೆಯುತ್ತಿದ್ದುದಲ್ಲದೆ, ತಾವು ಸಹ ದಾನದತ್ತಿಗಳನ್ನು ಬಿಟ್ಟಿರುವುದನ್ನು ಇಂತಹ ಕೆಲವು ಶಾಸನಗಳಿಂದ ಸ್ಪಷ್ಟವಾಗುತ್ತದೆ. ಹಾಗೂ ತಳವಾರರು ಧಾರ್ಮಿಕ ಭಾವನೆ ಉಳ್ಳವರಾಗಿದ್ದರು ಎಂಬುದಕ್ಕೆ ಕುರುಗೋಡಿನ ಒಂದು ಶಾಸನದಲ್ಲಿ

"....೧ ಯಿದಕ್ಕೆ ಉತ್ತರ ತಳವಾರ ಯಿಶ್ವರನ ಗುಡಿ(ಈ).... ಮಲ್ಲರಾಯರ ವಂಶದವರು ಕಟ್ಟಿಸಿ ಸ್ಥಳವನ್ನು ಪ್ರಬಲಮಾಡಿ ಕೋಟೆ ಮುಂತಾದವುಗಳನ್ನು ಕಟ್ಟಿಸಿ..." ಎಂದಿರುವ ಈ ಶಾಸನದಿಂದ ತಳವಾರರು ಕಾರ್ಯ ನಿರ್ವಹಿಸುವ ಚಾವಡಿ, ದೇವಾಲಯ, ಕಟ್ಟೆ ಮುಂತಾದ ಸ್ಥಳಗಳ ಬಗೆಗೆ ಪೂಜ್ಯನೀಯ ಭಾವನೆಯನ್ನು ಹೊಂದಿದ್ದಕ್ಕಾಗಿ ಅವನು ಕುಳಿತಿರುತ್ತಿದ್ದ ಈಶ್ವರ ಗುಡಿಯೂ ತಳವಾರನ ಈಶ್ವರ ಗುಡಿಯಾಗಿ ಹೆಸರಾಗಿರುವುದನ್ನು ಕಾಣಬಹುದಾಗಿದೆ.

ಹೀಗೆ, ಶಾಸನಗಳಲ್ಲಿ ತಳವಾರರು ತಮ್ಮ ವೃತ್ತಿ, ಸೇವೆ, ಗ್ರಾಮರಕ್ಷಣೆ ಮತ್ತು ಸಾಹಸ ಚಿತ್ರಣವನ್ನು ಮತ್ತು ಅವರ ಸಾಂಘಿಕ ಜೀವನವನ್ನು ಹಾಗೂ ವಿವಿಧ ವೃತ್ತಿ, ತೆರಿಗೆ ಆದಾಯಗಳನ್ನು ಶಾಸನಗಳು ಸ್ಪಷ್ಟಪಡಿಸುತ್ತವೆ.

## ೩.೫. ವೀರಗಲ್ಲುಗಳಲ್ಲಿ ತಳವಾರರು

ಮಾನವನ ನಾಗರಿಕತೆಯು ಸಂಸ್ಕೃತಿಯ ಆರಂಭ ಕಾಲದಿಂದಲೂ ಅವನ ಬೆಳವಣಿಗೆಯ ಜೊತೆ ಜೊತೆಗೆ ಸಾವಿನ ಬಗ್ಗೆ ಹಾಗೂ ಸಾವಿನ ನಂತರದ ಜೀವನದ ಬಗ್ಗೆ ಹಲವಾರು ನಂಬಿಕೆಗಳು ಕಲ್ಪನೆಗಳು ಬೆಳೆದು ಬಂದಿವೆ. ಸತ್ತವರು ತಮ್ಮ ಅಗತ್ಯತೆಗಳನ್ನು ಪೂರೈಸಿಕೊಳ್ಳದೇ ಹಾಗೇ ತೀರಿಕೊಂಡರೆ ಅವರ ಅಗತ್ಯತೆಗಳನ್ನು ಸತ್ತ ನಂತರ ತೀರಿಸಬೇಕು. ಇಲ್ಲದಿದ್ದರೆ ಅವನು ನಮಗೆ ತೊಂದರೆ ಮಾಡುತ್ತಾನೆ ಎಂಬ ನಂಬಿಕೆ ಇದೆ. ಈ ಪ್ರಕಾರವಾಗಿ ಪ್ರಾಚೀನ ಕಾಲದಿಂದಲೂ ಜನಾಂಗದ ಮುಖ್ಯಸ್ಥ, ಹಿರಿಯ ನಾಯಕ ಅಥವಾ ವೀರರು ತಮ್ಮ ಜೀವಿತಾವಧಿಯಲ್ಲಿ ತೋರಿದ ಸಾಹಸ, ಬಲಿದಾನಗಳನ್ನು ಮುಂದಿನ ಪೀಳಿಗೆಗೂ ಪಸರಿಸುವ ಉದ್ದೇಶದಿಂದ, ಸತ್ತ ವ್ಯಕ್ತಿಗಳನ್ನು ದೈವಾಂಶ ಸಂಭೂತರೆಂದು ಬಿಂಬಿಸಲು ಹಾಗೂ ಅವರ ಶೌರ್ಯ ಸಾಹಸಗಳನ್ನು ಅಜರಾಮರವಾಗಿಸಲು ವೀರಗಲ್ಲುಗಳನ್ನು ನೆಡೆಸುತ್ತಿದ್ದರು. ವೀರಗಲ್ಲುಗಳು ಮೂಲಭೂತವಾಗಿ ಯುದ್ಧದಲ್ಲಿ ಅಥವಾ ಇನ್ನಾವುದೇ ಹೋರಾಟದಲ್ಲಿ ಮಡಿದ ವೀರನ ಸ್ಮಾರಕವಾಗಿ ನೆಡುತ್ತಿದ್ದರು.

ವೀರಗಲ್ಲುಗಳಲ್ಲಿ ಲಿಪಿಯಿರದ ವೀರಗಲ್ಲು ಮತ್ತು ಲಿಪಿ ಇರುವ ವೀರಗಲ್ಲು ಎಂಬ ಎರಡು ಭಾಗಗಳಿವೆ. ಲಿಪಿ ಇರದ ವೀರಗಲ್ಲಿನಲ್ಲಿ ವೀರ ನಿಂತಿರುವ ಚಿತ್ರವೋ ಇಲ್ಲವೆ ಹೋರಾಡುತ್ತಿರುವ ಚಿತ್ರವೋ ಇರುತ್ತದೆ. ಈ ವೀರಗಲ್ಲುಗಳಿಗಿಂತ ಸ್ವಲ್ಪ ಭಿನ್ನವಾದ ಚೆನ್ನಾಗಿ ಕಂಡರಿಸಲ್ಪಟ್ಟ ವೀರಗಲ್ಲುಗಳಿವೆ. ಅವುಗಳಲ್ಲಿ ಮೂರು ಅಥವಾ ಐದು ಪಟ್ಟಿಕೆಗಳಿರುತ್ತವೆ. ಈ ಪಟ್ಟಿಕೆಗಳ ನಡುವೆ ಚಿತ್ರಗಳಿರುತ್ತವೆ. ವೀರ ಹೋರಾಡುತ್ತಿರುವ ಚಿತ್ರ, ವೀರನನ್ನು ಅಪ್ಸರೆಯರು ದೇವಲೋಕಕ್ಕೆ ಕೊಂಡೊಯ್ಯುತ್ತಿರುವ ಚಿತ್ರ. ವೀರಗಲ್ಲುಗಳು ಲಿಂಗದ ಬಳಿ ಧ್ಯಾನಮಗ್ನನಾಗಿರುವ ಚಿತ್ರವಿರುತ್ತದೆ. ಅಂದಿನ ವೀರರ ಪರಾಕ್ರಮಕ್ಕೆ ಮತ್ತು ಧ್ಯಾನಕ್ಕೆ ಕೊಟ್ಟ ಬೆಲೆಯನ್ನು ಈ ಚಿತ್ರಗಳು ಗೋಚರಿಸುತ್ತವೆ. ಹೀಗೆ ಮೃತರಾದ ವೀರರ ನೆನಪಿಗಾಗಿ ನಿಲ್ಲಿಸಿದ ಕಲ್ಲುಗಳೇ ವೀರಗಲ್ಲುಗಳು. 'ಕೀಳ್ಗುಂಟೆ' ಎಂದರೆ ರಾಜನೊಬ್ಬ ಮರಣ ಹೊಂದಿದಾಗ ಅವನ ಜತೆಯಲ್ಲೇ ಆತ್ಮಹತ್ಯೆ ಮಾಡಿಕೊಳ್ಳುವುದು ಇತ್ಯಾದಿ. ಈ ಗುಂಪಿಗೆ ಸೇರಿದ ಕೆಲವು ಶಾಸನಗಳಲ್ಲಿ ಊರಿನ ಹೆಣ್ಣು ಮಕ್ಕಳ ಮಾನ, ಪ್ರಾಣ ಕಾಪಾಡುವಲ್ಲಿ ಸತ್ತ ವೀರರಿಗೆ, ಊರಿನ ದನಗಳನ್ನು ಕಳ್ಳಕಾಕರು ಕದ್ದುಕೊಂಡು ಹೋಗುವಾಗ ಅವರೊಡನೆ ಹೋರಾಡಿ ಸತ್ತ ವೀರರಿಗೆ ಆ ಊರಿನ ಗೌಡ, ತಳವಾರರು ಇಲ್ಲವೆ ಸತ್ತ ವೀರನ ಸಂಬಂಧಿಕರು ವೀರಗಲ್ಲುಗಳನ್ನು ನಿಲ್ಲಿಸುತ್ತಿದ್ದರು. ಈ ವೀರಗಲ್ಲಿನಲ್ಲಿ ಸತ್ತ ವೀರನ ವಿಷಯವನ್ನು ಹಾಗೂ ಆತನಿಗೆ ಕೊಟ್ಟ ದತ್ತಿಯ ವಿವರವನ್ನು

ತಿಳಿಸುವ ಪಾಠ ಈ ವೀರಗಲ್ಲುಗಳಲ್ಲಿರುತ್ತದೆ. ಇಲ್ಲಿ ಕೆಲವು ಕಡೆ ವೀರನ ಸಾವನ್ನು ವೈಭವೀಕರಿಸುವುದೂ ಉಂಟೂ, ಇಂತಹ ವೀರಗಲ್ಲುಗಳಲ್ಲಿ ತಳವಾರರು ಹಲವಾರು ಹೋರಾಟ, ಕಾಳಗ, ಯುದ್ಧದಲ್ಲಿ ಹೋರಾಡಿ ಮಡಿದಿದ್ದನ್ನು ಕಾಣಬಹುದಾಗಿದೆ.

ಕ್ರಿ.ಶ.೧೦ನೇ ಶತಮಾನಕ್ಕೆ ಸೇರಿದ ಕೊಪ್ಪಳ ಜಿಲ್ಲೆಯ ಹಲಗೇರಿಯ ಒಂದು ವೀರಗಲ್ಲು ಶಾಸನದಲ್ಲಿ ಬೆಣ್ಣೆಕಲ್ಲು ಸೀಮೆಯ ಕಾಳಗದಲ್ಲಿ ತಳಾರನಾಯಕ ಎಜೆಯಮ್ಮನೆಂಬುವನು ಹೋರಾಡಿ ಸತ್ತಾಗ ಅವನ ಕುಟುಂಬಕ್ಕೆ ಪಲ್ಗಜೆಯ ಊರೊಡೆಯ ಮತ್ತು ಮಹಾಜನರು ಸೇರಿ ಭೂದಾನ ನೀಡಿದ್ದನ್ನು ತಿಳಿಸುತ್ತದೆ.

"ಸೋಮವಾ...... ಬೆಣ್ಣೆಕಲ್ಲು ಸೀಮೆಯ ಕಾಳಗದಲ್ತಳಾಱ ನಾಯಕ ನೆಜೆಯಮ್ಮ ಸತ್ತಡೆ ಕಲ್ನಾಟನೆಯ್ದುರು"[೧೬೭] ಎಂದಿದೆ. ಈ ವೀರಗಲ್ಲು ಅಂದಿನ ಕಾಲದಲ್ಲಿ ಹೋರಾಡಿ ಸತ್ತ ತಳವಾರರಿಗೆ ಭೂದಾನ ನೀಡಿದ್ದನ್ನು ತಿಳಿಸುತ್ತದೆ.

ಕ್ರಿ.ಶ.೧೦೩೪ಕ್ಕೆ ಸೇರಿದ ಸಕಲೇಶಪುರ ತಾಲೂಕಿನ ಚಿಕ್ಕ ನಾಯಕನಹಳ್ಳಿಯ ಶಾಸನವು ನೀತಿ ಮಹಾರಾಜನು ರಾಜ್ಯಾಳ್ವಿಕೆ ಮಾಡುತ್ತಿದ್ದಾಗ, ಚಿಕ್ಕ ಕಾಟಯ್ಯ ಎಂಬುವವನು ಹೋರಾಡಿ ಜಯಿಸಿ ಸ್ವರ್ಗಸ್ಥನಾಗಿದ್ದಕ್ಕೆ ಈತನ ಮೈದುನ ತಳರಮಕಯ್ಯನೆಂಬುವನು ಕಲ್ಲು ನಿಲ್ಲಿಸಿದ್ದನ್ನು ತಿಳಿಸುತ್ತದೆ.

"ಚಿಕ್ಕ ಕಾಟಯ್ಯ ಸಗ್ಗ್ರತನಾಗೆ..... ಸತ್ತ ಮತ್ತಿನವಳ ಕಳಹಿ ಬವರಗಣ್ಡ ತಱಱ ಮಕಯ್ಯ ಕಲ್ಲು ನಿಲಿಸಿದ"[೧೬೮] ಎಂದಿದೆ.

ಇದೇ ಕಾಲಕ್ಕೆ ಸೇರಿದ ಮತ್ತೊಂದು ವೀರಗಲ್ಲು ಹುಟ್ಟೂರು ತಾಲೂಕಿನ ಬಂಕಾಪುರದಲ್ಲಿದೆ. ಈ ವೀರಗಲ್ಲು ಶಾಸನದಲ್ಲಿ "ತಂಬಲಿಗರ ಎತ್ತನ್ನು ಅಪಹರಿಸಿದ ಕಳ್ಳರೊಡನೆ ಹೋರಾಡಿ ಮಡಿದ ತಳವಾರ ಗೊಜ್ಜಿಗನ ಮನೆತನಕ್ಕೆ ತಂಬಲಿಗರು ಹಣದಾನ ನೀಡಿದ ಸಂಗತಿ ಹೊಟ್ಟೂರು ಶಾಸನದಿಂದ ತಿಳಿದುಬರುತ್ತದೆ."[೧೬೯]

ಕರ್ನಾಟಕ ಚರಿತ್ರೆಯಲ್ಲಿ ತುರುಗಳು, ಹೆಣ್ಣು, ಮಣ್ಣು, ಸಂಪತ್ತು ಇತರ ಮೂಲಭೂತ ಸಂಪನ್ಮೂಲಗಳ ಸಂರಕ್ಷಣೆ ತಳವಾರನ ಕರ್ತವ್ಯವಾಗಿತ್ತು. ಅದರಲ್ಲೂ ತುರುಗಳ ಸಂರಕ್ಷಣೆಯಲ್ಲಿ ತಳವಾರನ ಪಾತ್ರ ಬಹುಮುಖ್ಯವೆನಿಸಿದೆ. ೧೨ನೇ ಶತಮಾನದ ಹೂಲಿಯ ವೀರಗಲ್ಲು ಬೋಸಿಗ ಮತ್ತು ಮಲ್ಲಿಗ ಎಂಬ ಗೆಳೆಯರ ಸ್ನೇಹ ಹಾಗೂ ವೀರತನಗಳ ಪರಿಚಯವಿದೆ. ಹೂಲಿಯ ತುರುಗಳನ್ನು ಬೊತಾರ್ಯ್ಯ ಎಂಬುವನು ಹಿಡಿದಾಗ ಹೂಲಿಯ ತಳಾರ ನಾಯಕನಾದ ಬೋಸಿಗ ಮತ್ತು ಆತನ ಒಡನುಂಡ ಗೆಳೆಯನಾದ ಮಲ್ಲಿಗ ಬೂತಾರ್ಯ್ಯನನ್ನು ಎದುರಿಸಿ

ಹೋರಾಡಿ ಮೊದಲು ಬೋಸಿಗನು ಸಾಯುತ್ತಾನೆ. ಅದನ್ನು ಕಂಡು ಗೆಳೆಯ ಮಲ್ಲಿಗನು ಸಹ ಸಾಯುತ್ತಾನೆ.

"ಒಡನುಂಡ ಕೆಳೆಯನಂ ಸಂಗಡದಾಳಂ ವೇಳದಾಳನನುವರದೆಡೆದೊಳ್

ಬಿಡಲಾಗದೆಂದು ಬೋಸಿಗ ನೊಡನಟೆದಂ ಮಲ್ಲಿಗಂ ಪ್ರತಾಪೋನ್ನತಿಯಿಂ"[೧೭೦] ಎಂದು ಅವರ ಸ್ನೇಹ, ವೀರತನವನ್ನು ಈ ವೀರಗಲ್ಲು ತಿಳಿಸುತ್ತದೆ.

ಕೆಲವು ವೀರಗಲ್ಲುಗಳ ಪಾಠಗಳು ಆರಂಭದಿಂದಲೂ ವೀರನ ಪರಾಕ್ರಮವನ್ನು ಹೊಗಳುವುದರ ಮೂಲಕ ನಾಟಕೀಯವಾಗಿ ಅವರ ವೀರತ್ವ ಮತ್ತು ಮಾಡಿದ ಯುದ್ಧದ ವಿವರಗಳನ್ನು ತಿಳಿಸುತ್ತವೆ. ಉದಾ: ಕ್ರಿ.ಶ.೧೧೧೭ರ ಒಂದು ವೀರಗಲ್ಲು ಪಾಠ ಹೀಗಿದೆ.

"ಬಿಟ್ಟಿದೇವನ ತಳಕಾರ ಹರಿಯಿಟ್ಟಡೆ ಅದಿಯಮನಿದಿರಾನ್ತು ಕಾದಿ ಆನೆಯನೊತ್ತಿ...... ಆನೆಯಂ ಮುಗುರ್ಚ್ಚಿ......"[೧೭೧] ಎಂದಿದೆ.

೧೨ನೇ ಶತಮಾನಕ್ಕೆ ಸೇರಿದ ಕ್ರಿ.ಶ.೧೧೨೪ರ ತರಿಕೆರೆ ತಾಲೂಕಿನ ಬಂಕನಕಟ್ಟೆಯಲ್ಲಿ ದೊರೆತ ವೀರಗಲ್ಲು ಶಾಸನದಲ್ಲಿ ಬಾಕಿಸೆಟ್ಟಿಯ ಮಗ ತಳಾರ ಮಸಣೆಯ ನಾಯಕನು ಬಂಕನ ಕಟ್ಟೆಯಲ್ಲಿ ದೊರೆತ ವೀರಗಲ್ಲು ಶಾಸನದಲ್ಲಿ ಬಾಕಿಸೆಟ್ಟಿಯ ಮಗ ತಳಾರ ಮಸಣಿಯ ನಾಯಕನು ಬಂಕನಕಟ್ಟೆಯಲ್ಲಿ ಬೇಡರೊಂದಿಗೆ ಹೋರಾಡಿ ಮಡಿದಿದ್ದನ್ನು ತಿಳಿಸುತ್ತದೆ.

"ಬಾಕಿಸೆಟ್ಟಿಯ ಮಗ ತಳಾಱ ಮಸಣೆಯ ನಾಯಕ
ಬಂಕನಕಟ್ಟುವ ಬೇಡರು ಯಿಱಿದಲ್ಲಿ ಸಂಗಡ
ಮೆಚ್ಚಲಿಱಿದು ಸುರಲೋಕ ಪ್ರಾಪ್ತನಾದಂ"[೧೭೨]

ಎಂದಿದೆ.

ಕ್ರಿ.ಶ.೧೨ನೇ ಶತಮಾನಕ್ಕೆ ಸೇರಿದ ಮದ್ದೂರು ತಾಲೂಕಿನ ಹಾಗಲಹಳ್ಳಿಯ ಒಂದು ವೀರಗಲ್ಲು ತಳವಾರ ಕುಲದ ಚಾಮಗಾವುಂಡನ ಮಗ ಅದಿತ್ಯಗಾವುಂಡನು ಬೊಪ್ಪ ಸಮುದ್ರ ಯುದ್ಧದಲ್ಲಿ ಹೋರಾಡಿ ಮಡಿದಿದ್ದನ್ನು ತಿಳಿಸುತ್ತದೆ.

"......ಶ್ರೀ ಬಲ್ಲಾಳದೇವರ ರಾಜ್ಯದಲು...... ಹಾದರವಾಗಿಲ ತಳಱರ(ಕು)ಲದ ಜಾಮಗಾವುಣನ ಮಗಂ ಆದಿತ್ಯಗವುಣಂ ಬೊಪ್ಪಸಮುದ್ರದಲು ತುಱುಗಳ ಮಘುರ್ಚ್ಚಿ ಸ್ವನಾಡನ ಕಾಳೆಗದಲು......."[೧೭೩] ಎಂದು ಕುದುರೆ ಮುಗುಚಿ ಸತ್ತ ವಿಚಾರವನ್ನು ತಿಳಿಸುತ್ತದೆ.

ಕ್ರಿ.ಶ.೧೨ನೇ ಶತಮಾನದ ಮೈಸೂರು ಜಿಲ್ಲೆಯ ಒಂದು ವೀರಗಲ್ಲು ಶಾಸನವು ಚಂಗಾಳ್ವರ ಅರಸ ಮಹಾಮಂಡಲೇಶ್ವರ ಬೊಪ್ಪದೇವ ಆತನ ೧೨ ಜನ ನಾಯಕರು ಕೂಲಿಯೂರು

ಕೋಟೆಯನ್ನು ಮುತ್ತಿಗೆ ಹಾಕುತ್ತಾರೆ. ತಳವಾರ ವಿಟ್ಟಿಜ್ಜನ ಮಗ ಒಣ್ನಜ್ಜ ಚಿಕ್ಕ ಹನಸೋಗೆಯಲ್ಲಿ ಹುಟ್ಟಿದ ಎಂದಿದೆ.

"ಗಾಳವನನಾಡಿ ಹನಿಬ್ಬರು ನಾಯಕರು ಕೋಳಿಯೂರ ಕೋಟೆಯ ಮುತ್ತಲು ಹನಸೋಗೆಯಲು ಹುಟಿದ ಒಣ್ನಜ್ಜನ ಮಗ ತಳಾಜಿ ವುತ್ತಜಂ ನೂರಪ್ಪತೊಕ್ಕಲು ಸಹ ಬಿದ್ದ ಕಲ ನಿಲಿಸಿದರು"[೧೭೪] ಎಂದು ಆ ಯುದ್ಧದಲ್ಲಿ ಮಡಿದ ವುತ್ತಜನಿಗೆ ವೀರಗಲ್ಲನ್ನು ನಿಲ್ಲಿಸಿದ್ದನ್ನು ಕಾಣಬಹುದಾಗಿದೆ.

ಇದೇ ಕಾಲಕ್ಕೆ ಸೇರಿದ ಶಿರಾ ತಾಲೂಕಿನ ಅಮರಾಪುರಂ ವೀರಗಲ್ಲು ಶಾಸನವು "ಕರುಳೆಯ ನಾಯಕ ಎಂಬುವವನು ತುರುಗಳನ್ನು ಸೆರೆ ಹಿಡಿದಾಗ ತೈಲಂಗೆರೆಯ ತಳವಾರ ಬೊಮ್ಮಯ್ಯನಾಯಕನ ಮಗ ಮುಂಡಿನ ಬೊಮ್ಮಯ್ಯನು ಹೋರಾಡಿ ಸತ್ತಿದ್ದನ್ನು ತಿಳಿಸುತ್ತದೆ."[೧೭೫]

ಆರ್.ಶೇಷಶಾಸ್ತ್ರಿ ಅವರು ಕೋಲಾರ ಜಿಲ್ಲೆ ಚಿಂತಾಮಣಿ ತಾಲೂಕಿನ ತಳಗವಾರ ಗ್ರಾಮದಲ್ಲಿ ವಿಜಯನಗರ ಕಾಲದ ವಿಶಿಷ್ಠ ವೀರಗಲ್ಲನ್ನು ಶೋಧಿಸಿದ್ದಾರೆ. "ವೀರನು ಕತ್ತಿಯನ್ನು ಹಿಡಿದು ತನ್ನ ಹೆಂಡತಿಯೊಂದಿಗೆ ನಿಂತಿದ್ದಾನೆ. ವೀರನ ಬಲಬದಿಯಲ್ಲಿ ವ್ಯಕ್ತಿಯೊಬ್ಬನು ಕೈ ಮುಗಿದು ನಿಂತಿದ್ದಾನೆ. ವೀರನ ಹೆಂಡತಿಯ ಎಡಗಡೆ ಎತ್ತರವಾದ ವೇದಿಕೆಯ ಮೇಲೆ ಸಣ್ಣ ಹುಡುಗನೊಬ್ಬನು ನಿಂತಿದ್ದಾನೆ. ಇವನನ್ನು ವೀರನ ಹೆಂಡತಿ ತನ್ನ ಕೈಯಿಂದ ಹಿಡಿದಿದ್ದಾಳೆ. ಬಾಲಕ ಯಾರು? ವೀರ ದಂಪತಿಗಳ ಮಗನೇ ಎಂದು ಇವರು ಸಂಶಯ ವ್ಯಕ್ತಪಡಿಸಿದ್ದಾರೆ."[೧೭೬] ಬಹುಶಃ ಈ ದಂಪತಿಗಳು ಗ್ರಾಮರಕ್ಷಕರಾದ ತಳವಾರರೇ ಇರಬೇಕೆಂದು ಊಹಿಸಬಹುದಾಗಿದೆ.

ಕೊಪ್ಪಳ ಜಿಲ್ಲೆಯ ಕುಷ್ಟಗಿಯ ಒಂದು ವೀರಗಲ್ಲು ಶಾಸನದಲ್ಲಿ ತುಱುಗಳ್ಳರೊಡನೆ ಹೋರಾಡಿ ಮಡಿದ ತಳವಾರನ ಉಲ್ಲೇಖವಿದೆ. "ತಳರಿ ಕಾಲ ಬೋವಯ್ಯ ಎಂಬುವನು ತುಱುಗಳ್ಳರೊಡನೆ ಹೋರಾಡಿ ಅಂಕೆಗೌಡ ತಳಾರಿಯ ಮಗ ಬೋವಯ್ಯನಿಗೆ ಹೊಲಮನೆ ದಾನ ನೀಡಿದ ವಿವರವಿದೆ."[೧೭೭] ಅದೇ ರೀತಿ ಕ್ರಿ.ಶ.೧೭೪೬ರ ಮಾರಂಡಹಳ್ಳಿಯ ವೀರಗಲ್ಲು ಶಾಸನವು ಬೇಡರು ಲೂಟಿ ಮಾಡಿಕೊಂಡು ಹೋಗುತ್ತಿರಬೇಕಾದರೆ ಅವರನ್ನು ಎದುರಿಸಿದ ತಳವಾರ ಹನುಮ ಎಂಬುವನು ಸತ್ತ ವಿಷಯವನ್ನು ತಿಳಿಸುತ್ತದೆ.

ಒಟ್ಟಿನಲ್ಲಿ ವೀರನ ಪರಾಕ್ರಮ, ಸತ್‌ಚಾರಿತ್ರ್ಯ, ಸಂಯಮಶೀಲತೆ ಹಾಗೂ ಅವನಿಗೆ ಒದಗಿದ ಕಷ್ಟಗಳು ಅವನ ಜೀವನದ ದುರಂತತೆ ಇವುಗಳನ್ನು ಮುಂದಿನ ಪೀಳಿಗೆಗೆ ವರ್ಗಾಹಿಸಲು ಜನರು ಅವರನ್ನು ದೈವತ್ವಕ್ಕೇರಿಸಿ ಆರಾಧಿಸುವ ಸಲುವಾಗಿ ವೀರಗಲ್ಲುಗಳನ್ನು ಸ್ಥಾಪಿಸಿದ್ದಾರೆ. ಅದರಲ್ಲಿ ತಳವಾರರ ಕುರಿತಾದ ವೀರಗಲ್ಲುಗಳಲ್ಲಿ ಹೆಚ್ಚಿನವು ತುರುಗಳ್ಳರೊಡನೆ ಹೋರಾಡಿ ಮಡಿದದ್ದು ಮತ್ತು ಸಣ್ಣ ಪುಟ್ಟ ಸೀಮಾ ಸಂಬಂಧಿತ ಕಾಳಗ ಹಾಗೂ ಕಳ್ಳರೊಡನೆ ಹೋರಾಡಿ ಮಡಿದಿರುವುದನ್ನು ಕಾಣಬಹುದಾಗಿದೆ. ಗ್ರಾಮದ ರಕ್ಷಣೆ ಮತ್ತು ಜವಾಬ್ದಾರಿಯುತ ಹುದ್ದೆ

ಯಾಗಿದ್ದರಿಂದ ಅವನು ಕಳ್ಳಕಾಕರೊಡನೆ ಹೋರಾಡುವುದು ಅನಿವಾರ್ಯವಾಗಿತ್ತು. ಆ ಕಾರಣದಿಂದ ಹಲವಾರು ಕಾಳಗದಲ್ಲಿ ತಳವಾರರು ಹೋರಾಡಿ ಮಡಿದಿರುವುದನ್ನು ಈ ವೀರಗಲ್ಲುಗಳು ಸಾಕ್ಷೀಕರಿಸುತ್ತವೆ. ಹೀಗೆ, ಕರ್ನಾಟಕದ ಸಾಂಸ್ಕೃತಿಕ ಚರಿತ್ರೆಯನ್ನು ತಳವಾರರಿಗೆ ಸಂಬಂಧಿಸಿದ ಶಾಸನಗಳು, ವೀರಗಲ್ಲುಗಳು ಇರುವುದರ ಜೊತೆಗೆ ತಳವಾರರು ಶಾಸನಗಳನ್ನು ಮತ್ತು ವೀರಗಲ್ಲುಗಳನ್ನು ಹಾಕಿಸುತ್ತಿದ್ದರೆಂಬ ಮಾಹಿತಿ ತಿಳಿಯುತ್ತದೆ.

## ೩.೬. ಕೈಫಿಯತ್ತುಗಳಲ್ಲಿ ತಳವಾರರು

ಇತಿಹಾಸವೆನ್ನುವುದು ಕೇವಲ ಗತಕಾಲಕ್ಕೆ ಸೀಮಿತವಾದ ಘಟನೆಯಲ್ಲ. ಪರೋಕ್ಷವಾಗಿ ವರ್ತಮಾನವನ್ನು ನಿಯಂತ್ರಿಸುವ ಅದು ಬಹಳಷ್ಟು ಸಲ ಬದುಕಿಗೆ ಬೆಲೆಯುಳ್ಳ ಪಾಠವಾಗಿ ಪರಿಣಮಿಸುತ್ತದೆ. ಹೀಗಾಗಿ ಪ್ರತಿಯೊಂದು ಜನಾಂಗ ತನ್ನ ವರ್ತಮಾನದ ಬೇರುಗಳನ್ನು ಗತಕಾಲದಲ್ಲಿ ಶೋಧಿಸುತ್ತಲೇ ಇರುತ್ತದೆ. ಭಾರತೀಯ ಪ್ರಾಪಂಚಿಕ ಬದುಕಿನ ವಿಷಯವಾಗಿ ಆ ಬದುಕಿನ ಆಕರ ಸಾಮಗ್ರಿಯ ವಿಷಯವಾಗಿ ತೀರ ಉಪೇಕ್ಷಿತ ನಿಲುವು ತಾಳುತ್ತ ಬಂದರು. ವಿದ್ವಾಂಸರು ಅದನ್ನು ಪುರಾಣೀಕರಿಸುವ ದಾರಿ ಹಿಡಿದರು. ಹೀಗೆ ಕಂಡುಕೊಂಡ ಕೆಲವು ಆಕರ ಸಾಮಗ್ರಿಗಳಲ್ಲಿ ಕೈಫಿಯತ್ತುಗಳು ಮುಖ್ಯವೆನಿಸುತ್ತವೆ.

ಪ್ರಾಚೀನ ಕರ್ನಾಟಕದ ಇತಿಹಾಸವನ್ನು ರಚಿಸಲು ನಮಗೆ ನೆರವಾಗುವ ಆಕರ ಸಾಮಗ್ರಿಗಳು ನಾಲ್ಕು ಬಗೆಯಾಗಿವೆ. ವಸ್ತು ಸಾಮಗ್ರಿ, ಜ್ಞಾನ ಸಾಮಗ್ರಿ ಮತ್ತು ಕ್ರಿಯಾ ಸಾಮಗ್ರಿ, ಭಾಷಾ ಸಾಮಗ್ರಿ. ಇವುಗಳಲ್ಲಿ ವಸ್ತುವೇ ಇರಲಿ, ಜ್ಞಾನವೇ ಇರಲಿ, ಕ್ರಿಯೆಯೇ ಇರಲಿ ಈ ಮೂರನ್ನು ಪ್ರತಿನಿಧಿಸುವ ಭಾಷೆಯ ಪಾತ್ರ ಮುಖ್ಯವಾದುದು. ಇಲ್ಲಿ ಭಾಷೆ ಒಂದು ಸಾಮಗ್ರಿಯಾಗುವುದು. ಭಾಷೆಯ ಮೂಲಕ ಮೌಖಿಕ ಮತ್ತು ಲಿಖಿತ ದಾಖಲೆಗಳನ್ನು ಪ್ರಧಾನ(ಶಾಸನ) ಮತ್ತು ಗೌಣ(ಕೈಫಿಯತ್ತು) ರೂಪದಲ್ಲಿ ದಾಖಲಿಸಲಾಗುತ್ತಿತ್ತು. ಬಹುಮನಿ ಅರಸರೊಂದಿಗೆ ನಮ್ಮ ನಾಡನ್ನು ಪ್ರವೇಶಿಸಿದ ಕೈಫಿಯತ್ತು ಎಂಬುದು ಮೂಲತಃ ಅರೇಬಿಯನ್ ಭಾಷೆಯ ಪರವಾಗಿದ್ದು ಅದಕ್ಕೆ 'ಸ್ಪಷ್ಟವಾದ ಹೇಳಿ', 'ವಿವರಣೆ' ಎಂಬ ಅರ್ಥವಿದೆ. ಐತಿಹಾಸಿಕ ದಾಖಲೆಯೆಂಬ ಅರ್ಥ ಪಡೆದುಕೊಂಡ ಈ ಕೈಫಿಯತ್ತು ಹೊಸತರಲ್ಲಿ 'ಸ್ಥಳಪುರಾಣ'ಎಂಬ ಅರ್ಥಕ್ಕೆ ಸೀಮಿತವಾಗಿತ್ತು. ಮೂಲತಃ ಸ್ಥಳ ವಿವರ ಮತ್ತು ಆ ಸ್ಥಳದ ಘಟನೆಗಳನ್ನು ವಸ್ತುವಾಗಿಟ್ಟುಕೊಂಡು ಪ್ರಾರಂಭವಾದ ಈ ಪ್ರಕಾರ ಬರಬರುತ್ತಾ ವೃತ್ತಿ, ಜಾತಿಗಳನ್ನು ಗುರಿಯಿಟ್ಟುಕೊಂಡು ಅನೇಕ ವಿಷಯಗಳನ್ನು ಒಳಗೊಂಡು ಬೆಳೆಯಿತೆಂದು ತೋರುತ್ತದೆ. ಕರ್ನಾಟಕದಲ್ಲಿ ಕರ್ನಲ್ ಮೆಕೆಂಝಿ ತಾನು ಅಧಿಕಾರಿಗಳಿಂದ ಮತ್ತು ಸ್ಥಳೀಯರಿಂದ ಸಂಗ್ರಹಿಸಿದ, ಬರೆಯಿಸಿದ, ಇಂಥ ವಿವರಣಾತ್ಮಕ ದಾಖಲೆಗಳನ್ನು 'ಕೈಫಿಯತ್ತು' ಎಂಬ ಪದವನ್ನು ಬಳಸಿ ಪ್ರಚಾರಕ್ಕೆ ತಂದವರಲ್ಲಿ ಮೆಕೆಂಝಿ ಮೊದಲಿಗನಾಗಿದ್ದಾನೆ.

ವಿಜಯನಗರ ಪೂರ್ವಕಾಲಿನ ಕನ್ನಡ ನಾಡಿನ ಅಧ್ಯಯನಕ್ಕೆ ಶಾಸನ, ಸಾಹಿತ್ಯಗಳು ನೆರವಾದರೆ, ಉತ್ತರಕಾಲೀನ ಅಧ್ಯಯನಕ್ಕೆ ಹೆಚ್ಚಿನದಾಗಿ ಮತ್ತು ವ್ಯಾಪಕವಾಗಿ ಕೈಫಿಯತ್ತುಗಳು ನೆರವಾಗುತ್ತವೆ. ಕೈಫಿಯತ್ತುಗಳಲ್ಲಿ ಐತಿಹ್ಯ ಮತ್ತು ವದಂತಿಗಳು ಮೇಳೈಸಿಕೊಂಡು ಚಾರಿತ್ರಿಕ ನಿರೂಪಣೆಯನ್ನು ಮಾಡುತ್ತವೆ. ಚರಿತ್ರೆ, ರಾಜಕೀಯ, ಸಾಮಾಜಿಕ, ಧಾರ್ಮಿಕ, ಆರ್ಥಿಕ, ಭೌಗೋಳಿಕ, ಜನಾಂಗಿಕ ವಿವಿಧ ಆಯಾಮಗಳ ಚಿತ್ರಣಗಳನ್ನು ಕೈಫಿಯತ್ತುಗಳಲ್ಲಿ ಕಾಣಬಹುದಾಗಿದೆ.

ಇತಿಹಾಸ ಬರವಣಿಗೆಯಲ್ಲಿ ಶಾಸನಗಳಿಗೆ ಪ್ರಥಮ ಸ್ಥಾನ. ಇನ್ನುಳಿದಂತೆ ಕೈಫಿಯತ್ತುಗಳು ದ್ವಿತೀಯ ಸ್ಥಾನದಲ್ಲಿ ನಿಲ್ಲುತ್ತವೆ. ಶಾಸನಗಳಲ್ಲಿ ಚಕ್ರವರ್ತಿ, ಮಾಂಡಲೀಕ, ಮೊದಲಾದ ಪ್ರತಿಷ್ಠಿತರ ವಿಷಯಕ್ಕೆ ಪ್ರಾಧಾನ್ಯತೆ ನೀಡಿದರೆ, ಕೈಫಿಯತ್ತುಗಳು ಮಧ್ಯಮ ಮತ್ತು ಸಾಮಾನ್ಯ ವರ್ಗದವರ ಚಟುವಟಿಕೆಗಳಿಗೆ ಪಾಧಾನ್ಯತೆ ನೀಡಿವೆ. ವಿಜಯನಗರ ಸಾಮ್ರಾಜ್ಯದ ತರುವಾಯ ತಲೆಯೆತ್ತಿದೆ. ಪಾಳೆಯಪಟ್ಟುಗಳ ಚರಿತ್ರೆ, ಗ್ರಾಮ, ಕೋಟೆ, ಕೊತ್ತಲ, ಕೆರೆ, ದೇವಾಲಯ ನಿರ್ಮಾಣ ಹಾಗೂ ಸಾಮಾಜಿಕ ಸಂಘರ್ಷ, ಧಾರ್ಮಿಕ ಆಚರಣೆ, ಮೂಢನಂಬಿಕೆ, ಜಾತಿವ್ಯವಸ್ಥೆ ಇತ್ಯಾದಿಗಳ ಮಾಹಿತಿಯನ್ನು ಕೈಫಿಯತ್ತು ಒಳಗೊಂಡಿದೆ. ಶಾಸನಗಳನ್ನು ಪಂಡಿತರು ಬರೆದರೆ, ಕೈಫಿಯತ್ತುಗಳನ್ನು ಸ್ಥಳೀಯ ಸಾಮಾನ್ಯ ಜನರು ಬರೆದಿದ್ದಾರೆ. ಇವುಗಳಲ್ಲಿ ಕೇಳಿ ಬರೆದಿರುವವರೇ ಅಧಿಕ ಸಂಖ್ಯೆಯಲ್ಲಿವೆ. ಇಂತಹ ಕೈಫಿಯತ್ತುಗಳಲ್ಲಿ ತಳವಾರರು ಅಲ್ಲಲ್ಲಿ ಉಲ್ಲೇಖಗೊಂಡಿರುವುದನ್ನು ಕಾಣಬಹುದು.

ಮೈಸೂರು ಪ್ರದೇಶಕ್ಕೆ ಸೇರಿದ ಅಷ್ಟ ಗ್ರಾಮಗಳ ಕೈಫಿಯತ್ತಿನಲ್ಲಿ ಅಷ್ಟ ಗ್ರಾಮಕ್ಕೆ ಕಾಲುವೆಗಳನ್ನು ಕಟ್ಟಲಾಯಿತು. ಆಗ ನೀರಾವರಿಗೆ ಒಳಪಟ್ಟ ಆ ಗ್ರಾಮದಲ್ಲಿ ವಿವಿಧ ಸೇವಗೆ ಹಾಗೂ ದೇವಸ್ಥಾನಕ್ಕೆ ಭೂಮಿ ಅಳತೆ ಮತ್ತು ಉದ್ದೇಶ ಹಾಗೂ ಗಡಿಯನ್ನು ತಿಳಿಸುವ ಶಾಸನದಲ್ಲಿ

"ಗುಡಿ ವೀರಯ್ಯನ ಸೇವೆ, ತಳವಾರ ಮರಿಯನ ಸೇವೆ ಸೂಳೆ ಬೊಬಿ ಕೊಂಡು ಬಿಟ್ಟದ್ದು"[೧೭೮] ಎಂಬ ವಿವಿಧ ಸೇವಕರಿಗೆ ಭೂಮಿ ನೀಡಿದ್ದನ್ನು ತಿಳಿಸುತ್ತದೆ.

ಬಳ್ಳಾರಿ ಜಿಲ್ಲೆಯ ಕುರುಗೋಡಿನ ಒಂದು ಶಾಸನದಲ್ಲಿ ಶ್ರೀ ಪೃಥ್ವಿವಲ್ಲಭ ಮಹಾರಾಜಧಿ ರಾಜ ಕಡ(೨ಳ) ಚರ್ಯ ಕುರಕಮಳ ಮಾತಾಂಡ ಶ್ರೀ ಮತ್ಸ(+೦)ಬ ವರ್ಮದೇವ ಚರ್ಕವರ್ತಿ ಆಸ್ಥಾನದ ಶೆಟ್ಟಿಗಳಿಗೆ ಮಲ್ಲಿಕಾರ್ಜುನ ದೇವರಿಗೆ ದೀಪರಾಧನೆ ನೈವೇದ್ಯಕ್ಕೆ ಹೇರಿಗೆ ವರ್ತನೆಯ ಗಡಿಯನ್ನು ವಿವರಿಸುವಲ್ಲಿ ತಳವಾರ ಯೀಶ್ವರನ ಗುಡಿಯ ಉಲ್ಲೇಖ ಬರುತ್ತದೆ.

"ಮಧ್ಯಭಾಗದಲ್ಲೂ ಹಿಂಡುಲಿ ಸಂಗಮೇಶ್ವರ

..................................................

ಯಿದಕ್ಕೆ ರಕ್ಷಣ ವಿರೂಪಾಕ್ಷೇಶ್ವರನ ಗುಡಿ

ಯಿದಕ್ಕೆ ಉತ್ತರ ತಳವಾರ ಯೀಶ್ವರನ ಗುಡಿ"[೧೭೯]

ಎಂದಿದೆ. ಈ ಶಾಸನದಲ್ಲಿ ಉಲ್ಲೇಖಿಸಿದಂತೆ ತಳವಾರ ಈಶ್ವರನ ಗುಡಿಯನ್ನು ತಳವಾರನು ತನ್ನ ಚಾವಡಿಯಾಗಿ ಬಳಸುತ್ತಿದ್ದರಿಂದ ಆ ದೇವಸ್ಥಾನಕ್ಕೆ ತಳವಾರಯೀಶ್ವರ ಗುಡಿ ಎಂದು ಹೆಸರು ಬಂದಿರಬಹುದು.

ಇದೇ ಊರಿನ ಇನ್ನೊಂದು ಶಾಸನ ಕೈಫಿಯತ್ತಿನಲ್ಲಿ ಕುರುಗೋಡು, ತೆಕ್ಕಲಕೋಟೆ, ಶಿಂಧನೂರು, ಶಿರಕುಪ್ಪೆ, ಕಣಿಕಲ್ಲು, ರೂಪನಗುಡಿ, ವಡ್ಡು, ದರೂಜಿ ತಾಲೂಕಿಗೆ ಹನಯಪ್ಪನಾಯಕ ಮಗ ದ್ಯಾಮಣ್ಣ ನಾಯಕನು ಪಟ್ಟಾಧಿಕಾರಿಯಾಗಿದ್ದ. ಈತನ ಮರಣದ ನಂತರ ಮಗ ಹಾಗೂ ಚಿಕ್ಕಪ್ಪ ಚಿಕ್ಕಮಲಕಪ್ಪನು ಆಳ್ವಿಕೆ ಮಾಡುತ್ತಿದ್ದಾಗ ವಿಜಾಪುರದ ಬಾದಶಹನ ಭಂಟ ಹವಾಲದಾರ ದೊಡ್ಡ ಯಲ್ಲಪ್ಪನಾಯಕ ಮತ್ತು ಚಿಕ್ಕ ಯಲ್ಲಪ್ಪ ನಾಯಕರು ಈ ಸ್ಥಳಕ್ಕೆ ಬಂದು ಇದನ್ನು ವಶಪಡಿಸಿಕೊಂಡರು. ಈ ಸ್ಥಳದ ನಾಡು, ಪರಗಣೆ, ಗ್ರಾಮನುಗ್ರಾಮ ಕಸಬೆ ಮುಂತಾದವನ್ನು ಸ್ವಾಧೀನ ಮಾಡಿಕೊಂಡು ಹಳೆ ಕುರಗೋಡಿನಲ್ಲಿರುವ ಬಾಲೆಕಿಲ್ಲೆ ಮೇಲೆ ನಾಡು ತಳವಾರು ವಿಠ್ಠಲಪ್ಪ ನಾಯಕ ಎಂಬುವವನಿಗೆ ಪೂರ್ವದಾರಭ್ಯ ನಾಡ ತಳವಾರಿಕೆ ಮೇಲೆ ಭೂಸ್ವಾಸ್ತ, ಜಕಾತಿ, ರುಕುಮು, ಜಾಗೀರು ಗ್ರಾಮವನ್ನು ನೀಡಿದ್ದನ್ನು ತಿಳಿಸುತ್ತದೆ.[೧೮೦]

ದೇವಲಾಪುರ ಪ್ರತಿನಾಮ ಮಲ್ಲಿಕಾರ್ಜುನಪುರ ಕೈಫಿಯತ್ತಿನಲ್ಲಿ "ತೀರ್ಥಹಳ್ಳಿ ಮಕ್ಕೆರಾ ಸಾಳ್ವ ನರಸಿಂಗರಾಯರ ಆಳ್ವಿಕೆಯಲ್ಲಿ ಗ್ರಾಮಕ್ಕೆ ಸ್ಥಳಜ್ಞರು, ಗೌಡರು, ಲಕ್ಕಣ್ಣಗೌಡ, ಸ್ಥಳದ ಶ್ಯಾನಭೋಗ, ವುಳಿ ಮರಸಯ್ಯ, ಅದರಸಯ್ಯ, ಬಡಗಿ ಗುರುವೋಜ, ತಳವಾರ ನಲ್ಲೋಬ, ಮಾಸಯ್ಯ, ಮಾದಿಗರ ಪಿಡ್ಡ, ಜಗುಲಿಯವರು ಯೀ ಗ್ರಾಮಕ್ಕೆ ಸ್ತಲಜ್ಞರು"[೧೮೧] ಎಂದು ಗ್ರಾಮಾಡಳಿಕ್ಕೆ ಅಧಿಕಾರಿಗಳ ವರ್ಗ ಹಾಗೂ ವಿವಿಧ ಸೇವಕರನ್ನು ನೇಮಿಸಿದ್ದನ್ನು ತಿಳಿಸುತ್ತದೆ. ಜೊತೆಗೆ ಇವರು ಕೆಲವು ಕಾಲದ ನಂತರ ತೀರ್ಥ ಹಾಳಾದ ಮೇಲೆ ಗ್ರಾಮಗೌಡ, ಶ್ಯಾನುಭೋಗ, ಬಡಗಿ, ತಳವಾರರು ವಿಜಯನಗರಕ್ಕೆ ಬಿಟ್ಟು ಹೋದರು ಎಂಬುದನ್ನು ತಿಳಿಸುತ್ತದೆ.

ಬಳ್ಳಾರಿ ಪರಿಸರಕ್ಕೆ ಸೇರಿದ ಶ್ರೀ ಕುಮಾರದೇವರ ಕ್ಷೇತ್ರದ ಕೈಫಿಯತ್ತಿನಲ್ಲಿ ಕೃಷ್ಣರಾಯರ ಅಳಿಯ ರಾಮರಾಯ ರಾಜನು ಮುಸ್ಲಿಂರಿಗೆ ದ್ವೇಷ ಬರುವ ಹಾಗೆ ಅಡಳಿತ ನಡೆಸಿದ್ದಕ್ಕೆ ಈತನನ್ನು ಶಿರಚ್ಛೇದವ ಮಾಡುತ್ತಾರೆ. ಆನಂತರ ಮೊಗಲಾಯಿ ಬಾದಷಹನು ಈ ಸೀಮೆಯನ್ನು ವಶಪಡಿಸಿಕೊಂಡು ಆದವಾನಿ, ರಾಯಚೂರು, ಮುದಗಲ್ಲು, ಕಂದನೂಲು, ಹಿರೆಸೀಮೆ ವಗೈರೆ ಮೊದಲಾದ ದೇಶಗಳನ್ನು ಬಸ್ತಿ ಮಾಡುವುದಕ್ಕೆ ಗೌಡ, ಶ್ಯಾನಭೋಗರಿಗೆ ಆಜ್ಞಾಪಿಸುತ್ತಾನೆ. ಆಗ ಕುಡುತನೆ ಭೂಮಿಯ ಚಕ್ಕಬಂದಿ ಹೇಳುವಾಗ 'ಯಿಂದ್ರ ದಿಕ್ಕಿನಲ್ಲಿ ಕೊಳಗಲ್ಲು ನಮ್ಮ ಮೇಲೆ(ರೆ) ಹರದಾರಿ ತಳವಾರಮಟ್ಟಿ, ಅಗ್ನಿ ದಿಕ್ಕಿಗೆ ಬೆಳಗಲ್ಲು ಹೊಲಮೇರೆಗೆ..."[೧೮೨]ಎಂದು ಕುಡುತೆನೆ ಪಕ್ಕದಲ್ಲಿ ತಳವಾರಮಟ್ಟಿ ಎಂಬ ಊರು ಇದ್ದ ಬಗೆಗೆ ಮಾಹಿತಿ ತಿಳಿಯುತ್ತದೆ. ತಳವಾರಮಟ್ಟಿ ಎಂಬುದು ತಳವಾರರು ವಾಸಿಸುತ್ತಿದ್ದ ಸ್ಥಳ ಎಂದು ಹೇಳಬಹುದು.

ಚನ್ನಯ್ಯ ಕುಲದ ಜಾತಿ ರಿವಾಜು ಕೈಫಿಯತ್ತು(ಸೊಂಡೂರಿನ) ಕೈಫಿಯತ್ತಿನಲ್ಲಿ ಚನ್ನಯ್ಯ ಕುಲದವರ ರೀತಿ ರಿವಾಜು ಮತ್ತು ಸಂಪ್ರದಾಯ, ಆಚರಣೆಗಳನ್ನು ವಿವರಿಸುವ ಈ ಶಾಸನದಲ್ಲಿ ಅವರ ಮದುವೆ ಸಂಪ್ರದಾಯದಲ್ಲಿ ವಿಳ್ಯೆ ಹಂಚುವ ವಿವರದಲ್ಲಿ "ದೇವರು, ಗುರುಗಳು, ನಾಡಿಗ, ಶ್ಯಾನುಭೋಗ, ಮಠ ಮತ್ತು ಪ್ಯಾಟೆ ಶೆಟ್ಟರು, ಪಟ್ಟಣ ಶೆಟ್ಟಿಗಳ ಜೊತೆಗೆ ಊಳಿಗ ತಳವಾರನಿಗೆ ಕಡ್ಡಾಯವಾಗಿ ವಿಳ್ಯೆ ಕೊಡಬೇಕು"[೧೮೩] ಎಂಬ ನಿಯಮವಿದೆ. ಇದರಿಂದ ಊರಿನ ಪ್ರತಿಯೊಂದು ಕಾರ್ಯದಲ್ಲಿ ತಳವಾರನ ಉಪಸ್ಥಿತಿ ಕಡ್ಡಾಯವಾಗಿರುತ್ತಿತ್ತು ಎಂಬುದಕ್ಕೆ ಪುಷ್ಠಿ ನೀಡುತ್ತದೆ.

ಹೀಗೆ ಪ್ರಾಚೀನ ಕಾಲದಿಂದ ಮಧ್ಯಕಾಲದವರೆಗಿನ ಶಾಸನ, ಕೈಫಿಯತ್ತುಗಳಲ್ಲಿ ತಳವಾರರ ಕುರಿತಾದ ಉಲ್ಲೇಖಗಳು ಬಂದಿವೆ. ಇವುಗಳ ಮೂಲಕ ಅಂದಿನ ಸಮಾಜದೊಂದಿಗಿನ ಇವರ ಬಾಂಧವ್ಯ ಹಾಗೂ ಆಡಳಿತ ಕಾರ್ಯವಿಧಾನದಲ್ಲಿ ಸಕ್ರಿಯವಾಗಿ ಪಾಲ್ಗೊಂಡು ಒಂದು ವ್ಯವಸ್ಥಿತ ಸಮಾಜ ನಿರ್ಮಾಣ ಮಾಡುವಲ್ಲಿ ತಳವಾರರು ಪಾಲುದಾರರಾಗಿದ್ದಾರೆ.

**ಕೊನೆಟಿಪ್ಪಣಿಗಳು**

೧. ನರಸಿಂಹಾಚಾರ್ಯ ಡಿ.ಎಲ್., 'ವಡ್ಡಾರಾಧನೆ' ೨೦೦೪, ಪು.೫೮

೨. ಅದೇ, ಪು.೫೯

೩. ಅದೇ, ಪು.೬೦

೪. ಅದೇ, ಪು.೬೦

೫. ಅದೇ, ಪು.೬೦

೬. ಅದೇ, ಪು.೧೨೪-೨೩

೭. ಅದೇ, ಪು.೬೫

೮. ಅದೇ, ಪು.೬೭

೯. ಅದೇ, ಪು.೧೬೬

೧೦. ಅದೇ, ಪು.೧೬೭

೧೧. ಅದೇ, ಪು.೧೬೭

೧೨. ಅದೇ, ಪು.೧೬೮

೧೩. ಅದೇ, ಪು.೧೬೮

೧೪. ಅದೇ, ಪು.೧೬೮

೧೫. ಅದೇ, ಪು.೧೭೨

೧೬. ಅದೇ, ಪು.೧೭೨

೧೭. ಅದೇ, ಪು.೧೬೬

೧೮. ಸಣ್ಣಯ್ಯ ಬಿ.ಎಸ್. ಮತ್ತು ರಾಮೇಗೌಡ, "ಅಜಿತ ತೀರ್ಥಂಕರ ಪುರಾಣ".

೧೯. ನರಸಿಂಹಾಚಾರ್ಯ ಎಸ್.ಜಿ.(ಸಂ), "ಪಂಚತಂತ್ರ-ದುರ್ಗಸಿಂಹ", ೧೮೯೮, ಪು.೭೯.

೨೦. ಶಾಮಾಶಾಸ್ತ್ರಿ ಆರ್.(ಸಂ), 'ಧರ್ಮಾಮೃತ-ನಯಸೇನಾ', ೧೯೨೪, ಪು.೧-೧೬೮.

೨೧. ನರಸಿಂಹಾಚಾರ್ಯ ಎಸ್.ಜಿ.(ಸಂ), "ಲೀಲಾವತಿ-ನೇಮಿಚಂದ್ರ", ೧೮೯೮, ಪು.೮-೧೫.

೨೨. ವೆಂಕಟರಾವ್ ಎ.(ಸಂ), "ಪುಷ್ಪದಂತ ಪುರಾಣ-ಗುಣವರ್ಮ-೩, ೧೯೩೩, ಪು.೭-೬೯.

೨೩. ಕೃಷ್ಣಕುಮಾರ್ ಸಿ.ಪಿ.(ಸಂ), 'ಜನ್ನ ಸಂಪುಟ-ಅನಂತನಾಥ ಪುರಾಣ', ೨೦೦೭, ಪು.೬೫.

೨೪. ಅಂಗಡಿ ಎಸ್.ಎಸ್., 'ಸರಳ ಯಶೋಧರ ಚರಿತೆ', ೨೦೧೨, ಪು.೩೭

೨೫. ಅದೇ, ಪು.೧೩೬.

೨೬. ಅದೇ, ಪು.೩೯

೨೭. ಅದೇ, ಪು.೪೧

೨೮. ಬಾಹುಬಲಿ ಪಂಡಿತ, 'ಧರ್ಮನಾಥ ಪುರಾಣ', ಹಸ್ತಪ್ರತಿ, ಕೆಎ.೨೯೬, ಓರಿಇ.

೨೯. ಮಲ್ಲಾರಾಧ್ಯ ಬಿ.(ಸಂ), 'ಪದ್ಮರಾಜ ಪುರಾಣಂ-ಪದ್ಮಣಾಂಕ', ಪು.೪-೨೪.

೩೦. ಕುವೆಂಪು(ಸಂ), 'ಕರ್ಣಾಟ ಭಾರತ ಕಥಾಮಂಜರಿ', ೧೯೦೯, ಪು.೩೪೯.

೩೧. ಶ್ರೀರಾಮ ಇಟ್ಟಣ್ಣವರ, 'ಜಾನಪದ ಪರಿಕ್ರಮ', ೨೦೦೭, ಪು.೫೫.

೩೨. ಕುವೆಂಪು(ಸಂ), 'ಕರ್ಣಾಟ ಭಾರತ ಕಥಾಮಂಜರಿ', ೧೯೦೯, ಪು.೧೪-೬೧೧.

೩೩. ಹಿರೇಮಠ ಆರ್.ಸಿ.(ಸಂ), 'ಬಸವ ಪುರಾಣ-ಭೀಮಕವಿ', ೧೯೫೮, ಪು.೫೩-೪೮.

೩೪. ದೇಪರಾಜ, 'ಸೊಬಗಿನ ಸೋನೆ', ಹಸ್ತಪ್ರತಿ ಕೆ.೨೯೦, ಓ.ರಿ.ಇ(೨೦.೩೧)

೩೫. ಕೃಷ್ಣಮೂರ್ತಿ ಕೆ.ಎಸ್., 'ತೊರವೆ ರಾಮಾಯಣ-ಕುಮಾರ ವಾಲ್ಮೀಕಿ', ೨೦೦೨, ಪು.೬೪೨.

೩೬. ಅದೇ, ಪು.೬೪೩.

೩೭. ಅದೇ, ಪು.೨೭೭

೩೮. ದೇವಿರಪ್ಪ ಎಚ್.(ಸಂ), 'ಸಿಂಗಿರಾಜ-ಸಿಂಗಿರಾಯ ಪುರಾಣ', ೧೯೫೦, ಪು.೨೨-೨೭.

೩೯. ಮಂಗರಸ-III 'ಶ್ರೀಪಾಲಚರಿತೆ', ಹಸ್ತಪ್ರತಿ, ಕೆ.ಬಿ.೭೦, ಓ.ರಿ.ಇ.(೧-೬೩).

೪೦. ಹಿರೇಮಠ ಆರ್.ಸಿ.(ಸಂ), 'ಮೋಹನ ತರಂಗಿಣಿ-ಕನಕದಾಸ', ೧೯೭೩, ಪು.೨೫೬.

೪೧. ಅದೇ, ಪು.೨೫೭.

೪೨. ವಿರೂಪಾಕ್ಷಿ ಪೂಜಾರಹಳ್ಳಿ, 'ಕರ್ನಾಟಕದಲ್ಲಿ ತಳವಾರಿಕೆ', ೨೦೦೬, ಪು.೨೩.

೪೩. ನರಸಿಂಹಾಚಾರ್ಯ ಆರ್.(ಸಂ), 'ಶಬ್ದಾನುಶಾಸನ-ಭಟ್ಟಾಕಳಂಕ', ೧೯೨೩, ಪು.೧೯೧.

೪೪. ನರಸಿಂಹಾಚಾರ್ಯ ಎಸ್.ಜಿ.(ಸಂ), 'ಚಿಕದೇವರಾಯ ವಿಜಯ-ತಿರುಮಲಾರ್ಯ', ೧೮೯೬- ಪು.೬-೩೬

೪೫. ಶಾಮಶಾಸ್ತ್ರಿ ಆರ್.(ಸಂ), 'ಕಂಠೀರವ ನರಸರಾಜ ವಿಜಯ', ೧೯೭೧, ಪು.೧೫೬.

೪೬. ಸೇಡಿಯಾಪ್ಪು ಕೃಷ್ಣಭಟ್ಟ (ಸಂ), 'ಜಿನದತ್ತರಾಯ ಚರಿತೆ-ಪದ್ಮನಾಭ', ೧೯೫೬, ಪು.೬-೪೭.

೪೭. ಕೆಳದಿ ಗುಂಡಾ ಜೋಯಿಸ(ಸಂ), 'ಕೆಳದಿ ನೃಪ ವಿಜಯ-ಲಿಂಗಣ್ಣ', ೧೯೯೯, ಪು.೪೧.

೪೮. ಮುಮ್ಮಡಿ ಕೃಷ್ಣರಾಜ, 'ಸೌಗಂಧಿಕಾ ಪರಿಣಯ', ಹಸ್ತಪ್ರತಿ, ಕೆ.ಬಿ.೧೨೮, ಓ.ರಿ.ಇ.

೪೯. ಶ್ರೀರಾಮ ಇಟ್ಟಣ್ಣವರ(ಸಂ), ಜಾನಪದ ಪರಿಕ್ರಮ, ಪು.೫೬.

೫೦. ಶಿರೂರ ಬಿ.ವ್ಹಿ.(ಸಂ), ಎಲ್ಲಾ ಪುರಾತನರ ವಚನಗಳು, ಭಾಗ ೨, ೨೦೦೬, ಪು.೨೧೩.

೫೧. ಅದೇ, ಪು.೪೯೭

೫೨. ವೀರಣ್ಣ ದಂಡೆ(ಸಂ), ಎಲ್ಲ ಪುರಾತನರ ವಚನಗಳು, ಭಾಗ ೧, ೨೦೦೬, ಪು.೩೭೭.

೫೩. ಅದೇ, ಪು.೮೫೭

೫೪. ಶಿರೂರ ಬಿ.ವ್ಹಿ.(ಸಂ), ಎಲ್ಲಾ ಪುರಾತನರ ವಚನಗಳು, ಭಾಗ ೨, ೨೦೦೬, ಪು.೪೧೦.

೫೫. ವೀರಣ್ಣ ದಂಡೆ(ಸಂ), ಎಲ್ಲ ಪುರಾತನರ ವಚನಗಳು, ಭಾಗ ೧, ೨೦೦೬, ಪು.೩೭೭.

೫೬. ಅದೇ, ಪು.೨೭

೫೭. ಅದೇ, ಪು.೪೨೧

೫೮. ಕಲಮುದಾಗಿ ಗುರುರಾಯರು(ಸಂ), ಸರ್ವಜ್ಞನ ವಚನಗಳು, ೨೦೧೦, ಪು.೫೦

೪೯. ಅದೇ, ಪು.೬೧

೫೦. ಅದೇ, ಪು.೮೩

೫೧. ಅದೇ, ಪು.೨೪೪

೫೨. ಅದೇ, ಪು.೨೫೫

೫೩. ಅದೇ, ಪು.೩೩೧

೫೪. ನಾಗರಾಜ ಎಂ., ಕರ್ನಾಟಕ ಮಡಿವಾಳರು, ೨೦೧೦, ಪು.೨೩೨

೫೫. ರಾಮೇಗೌಡ, ಜಾನಪದ ಸಂಶೋಧನೆ, ೨೦೧೨, ಪು.೩೫

೫೬. ಅದೇ, ಪು.೭

೫೭. ರಾಮಚಂದ್ರಗೌಡ, ಜಾನಪದ ಅಂತರಂಗ, ೧೯೮೫, ಪು.೩೮

೫೮. ಗಾದೆ

೫೯. ಬಸವ ಪುರಾಣ, ಪು.೭೦೩

೬೦. ಕಿಟಲ್, ಕನ್ನಡ–ಇಂಗ್ಲಿಷ್ ನಿಘಂಟು, ೧೯೯೭, ಪು.ಗಾದೆ

೬೧. ಯಲ್ಲಪ್ಪನಾಯಕ, ಸುರಪುರ ಇವರಿಂದ ಮಾಹಿತಿ

೬೨. ಯಲ್ಲಪ್ಪನಾಯಕ, ಸುರಪುರ ಇವರಿಂದ ಮಾಹಿತಿ

೬೩. ವೀರೇಂದ್ರ ಸಿಂಪಿ, ಸಮಗ್ರ ಜನಪದ ಸಂಪುಟ, ೨೦೦೭, ಪು.೫೨೪

೬೪. ಅದೇ, ಪು.೫೩೦

೬೫. ಅದೇ, ಪು.೫೫೬

೬೬. ಕನ್ನಡ ವಿಷಯ ವಿಶ್ವಕೋಶ(ಜಾನಪದ), ೨೦೦೬, ಪು.೫೮೧

೬೭. ಕಾಪಸೆ ರೇವಪ್ಪ(ಸಂ), ಮಲ್ಲಿಗೆ ದಂಡೆ, ೨೦೦೦, ಪು.೬೦–೬೧

೬೮. ವೀರೇಂದ್ರ ಸಿಂಪಿ, ಸಮಗ್ರ ಜನಪದ ಸಂಪುಟ, ೨೦೦೭, ಪು.೪೬

೬೯. ಅದೇ, ಪು.೨೭೭

೭೦. ವಿರೂಪಾಕ್ಷಿ ಪೂಜಾರಹಳ್ಳಿ, ಕರ್ನಾಟಕದಲ್ಲಿ ತಳವಾರಿಕೆ, ೨೦೦೬, ಪು.೫೧

೭೧. ಅದೇ, ಪು.೫೧–೫೨

೮೨. ಮುದ್ದೇಬಿಹಾಳ ಆರ್.ಸಿ., ಬೇಡ ನಾಯಕರ ಪಾಡು, ೧೯೯೪, ಪು.೫

೮೩. ಕ್ಯಾತನಹಳ್ಳಿ ರಾಮಣ್ಣ(ಸಂ), ಫ್ಲೀಟರು ಸಂಗ್ರಹಿಸಿದ ಲಾವಣಿಗಳು, ೧೯೯೧, ಪು.೨

೮೪. ಅದೇ, ಪು.೩೬

೮೫. ಅದೇ, ಪು.೩೯

೮೬. ಅದೇ, ಪು.೫೨

೮೭. ಅದೇ, ಪು.೭೩

೮೮. ಅದೇ, ಪು.೭೧

೮೯. ಅದೇ, ಪು.೭೪

೯೦. ಅದೇ, ಪು.೧೪೪

೯೧. ಅದೇ, ಪು.೧೪೫

೯೨. ಅದೇ, ಪು.೧೪೮

೯೩. ಅದೇ, ಪು.೧೪೯

೯೪. ಅದೇ, ಪು.೧೫೧

೯೫. ಜಿ.ಎಂ.ಹಂಪಯ್ಯ, ಬಳ್ಳಾರಿ

೯೬. ಕನ್ನಡ ವಿಷಯ ವಿಶ್ವಕೋಶ, ಜಾನಪದ, ಪು.೬೮೦

೯೭. MAR-೧೯೧೬, ೧೩-೬, ೮ನೇ ಶತಮಾನ.

೯೮. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ ೧, ಬಳ್ಳಾರಿ ಜಿಲ್ಲೆ, ಬೆಳಗಲ್ಲು ೩೮

೯೯. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ ೨, ಕೊಪ್ಪಳ ಜಿಲ್ಲೆ, ಹಲಗೇರಿ ೧೮

೧೦೦. ಎ.ಕ.IX, ಹಾಸನ ಜಿಲ್ಲೆ, ಚಿಕ್ಕನಾಯಕನಹಳ್ಳಿ ಸಂ.೩೨

೧೦೧. ವಿರೂಪಾಕ್ಷಿ ಪೂಜಾರಹಳ್ಳಿ, ಕರ್ನಾಟಕದಲ್ಲಿ ತಳವಾರಿಕೆ, ೨೦೦೭, ಪು.೨೬.

೧೦೨. ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸ, ೨೦೦೨, ಪು.೧೬೫.

೧೦೩. ಕನ್ನಡ ವಿಶ್ವವಿದ್ಯಾಲಯದ ಶಾಸನ ಸಂಪುಟ ೧, ಬಳ್ಳಾರಿ ಜಿಲ್ಲೆ, ಸಿರಗುಪ್ಪ

೧೦೪. SII-XX 55-25; ೧೦೮೨

೧೦೫. ಕನ್ನಡ ವಿಶ್ವವಿದ್ಯಾಲಯದ ಶಾಸನ ಸಂಪುಟ ೭, ರಾಯಚೂರು ಸಂ.೬. ೪೦೨

೧೦೬. ಎ.ಕ.XXIV(ಚಿಕನಾ) ಶೆಟ್ಟಿಗೆರೆ, ಸಂ.೮೧, ಪು.೪೯೧.

೧೦೭. ಅದೇ, ಶೆಟ್ಟಿಗೆರೆ, ಸಂ.೮೧, ಪು.೪೮೮.

೧೦೮ ಎ.ಕ.V., ಮೈಸೂರು, ಚಿಕ್ಕಹನಸೊಗೆ, ಸಂ.೭೨.

೧೦೯. ಎ.ಕ.VI, ತರೀಕೆರೆ ಸಂ.೫೫, ೧೨೯೧, ೨೪

೧೧೦. ಎ.ಕ.X, ಹಾಸನ ಜಿಲ್ಲೆ, ನುಗ್ಗೆಹಳ್ಳಿ, ಸಂ.೧೧೪.

೧೧೧. ಎ.ಕ.IV, ಮೈಸೂರು ಜಿಲ್ಲೆ, ಮಲೆಯೂರು, ಸಂ.೩೫೫.

೧೧೨. ಕನ್ನಡ ವಿಶ್ವವಿದ್ಯಾಲಯದ ಶಾಸನ ಸಂಪುಟ ೧, ಬಳ್ಳಾರಿ, ಪಾಪಿನಾ, ಸಂ.೧೩೮.

೧೧೩. ಎ.ಕ.VIII, ಹಾಸನ ಜಿಲ್ಲೆ, ಗೊರೂರು, ಸಂ.೨೦೧.

೧೧೪. ಎ.ಕ.III, ಮೈಸೂರು, ಮುಳ್ಳೂರು, ಸಂ.೧೮೧.

೧೧೫. ಕನ್ನಡ ವಿಶ್ವವಿದ್ಯಾಲಯದ ಶಾಸನ ಸಂಪುಟ ೧, ಬಳ್ಳಾರಿ, ಜೋಗ ೨೮.

೧೧೬. ಅದೇ, ಡಣಾಯಕನಕೆರೆ, ಸಂ.೪೭.

೧೧೭. ಎ.ಕ.X, ಹಾಸನ ಜಿಲ್ಲೆ, ಚನ್ನರಾಯಪಟ್ಟಣ ೨(V ಚಪ ೧೫೩)

೧೧೮. ಅದೇ, ಜಂಬೂರು ೪೪(V ಚಪ ೧೫೯)

೧೧೯. ಎ.ಕ.XXIV, ಚಿಕ್ಕನಾಯಕನಹಳ್ಳಿ, ಕಂದಿಗೆರೆ, ಸಂ.೧೧(SII ಚಿನಾ.೪೪).

೧೨೦. AR-No-164 of 1980-81, I K III NO-286.

೧೨೧. ಕನ್ನಡ ವಿಶ್ವವಿದ್ಯಾಲಯದ ಶಾಸನ ಸಂಪುಟ ೧, ಬಳ್ಳಾರಿ ಜಿಲ್ಲೆ, ಯಲ್ಪಿ SII - IX-II-480-13; 1510.

೧೨೨. ಎ.ಕ.X(s) ಮುಳಬಾ, ೫–೭, ೧೫ನೇ ಶತಮಾನ.

೧೨೩. ಕನ್ನಡ ವಿಶ್ವವಿದ್ಯಾಲಯದ ಶಾಸನ ಸಂಪುಟ ೩, ಹಂಪಿ ಶಾಸನ, ಸಂ.೨೪೦.

೧೨೪. SII - IX-II-490; ಕನ್ನಡ ವಿಶ್ವವಿದ್ಯಾಲಯದ ಶಾಸನ ಸಂಪುಟ ೧, ಬಳ್ಳಾರಿ ಸಂ.೭೪.

೧೨೫. ಕನ್ನಡ ವಿಶ್ವವಿದ್ಯಾಲಯದ ಶಾಸನ ಸಂಪುಟ ೩, ಹಂಪಿ ಶಾಸನ, ಸಂ.೨೫೦.

೧೨೬. SII - IV-253, ಕನ್ನಡ ವಿಶ್ವವಿದ್ಯಾಲಯದ ಶಾಸನ ಸಂಪುಟ ೩, ಹಂಪಿ ಶಾಸನ, ಪು.೨೬೫.

೧೨೭. SII - IV-273, ಕನ್ನಡ ವಿಶ್ವವಿದ್ಯಾಲಯದ ಶಾಸನ ಸಂಪುಟ ೩, ಹಂಪಿ ಶಾಸನ, ಪು.೧೮೨.

೧೨೮. ಕನ್ನಡ ವಿಶ್ವವಿದ್ಯಾಲಯದ ಶಾಸನ ಸಂಪುಟ ೩, ಹಂಪಿ ಶಾಸನ, ಪು.೨೭೭, ೨೦೮.

೧೨೯. ಕನ್ನಡ ವಿಶ್ವವಿದ್ಯಾಲಯದ ಶಾಸನ ಸಂಪುಟ ೨, ಕೊಪ್ಪಳ, ಹರ್ಲಾಪುರ, ಸಂ.೧೬೦.

೧೩೦. SII - IX-II-491, ಕನ್ನಡ ವಿಶ್ವವಿದ್ಯಾಲಯದ ಶಾಸನ ಸಂಪುಟ ೩, ಸಂ.೨೫೦.

೧೩೧. ಕನ್ನಡ ವಿಶ್ವವಿದ್ಯಾಲಯದ ಶಾಸನ ಸಂಪುಟ ೩, ಸಂ.–೧೮೧, AR-49A, 1889, SII-10 No-278.

೧೩೨. ವಿರೂಪಾಕ್ಷಿ ಪೂಜಾರಹಳ್ಳಿ, ಕರ್ನಾಟಕದಲ್ಲಿ ತಳವಾರಿಕೆ, ೨೦೦೭, ಪು.೨೯

೧೩೩. ಅದೇ, ಪು.೩೧.

೧೩೪. ಕನ್ನಡ ವಿಶ್ವವಿದ್ಯಾಲಯದ ಶಾಸನ ಸಂಪುಟ ೨, ಕೊಪ್ಪಳ ಜಿಲ್ಲೆ, ಕೊಪ್ಪ, ಸಂ.೧೬೧.

೧೩೫. SII -ವಾ, IX-II; ಪು.೫೩೬

೧೩೬. ಎ.ಕ.IX, ಬೆಲೂರು, ಸಂ.೧೮೨.

೧೩೭. ಕನ್ನಡ ವಿಶ್ವವಿದ್ಯಾಲಯದ ಶಾಸನ ಸಂಪುಟ, ೩, ಹಂಪಿ ಶಾಸನ, ಹರಪನಹಳ್ಳಿ, ಸಂ.೩

೧೩೮. ಎ.ಕ.XI, ಮಂಡ್ಯ, ಪಾಂಡವ, ಸಂ.೧೩೪

೧೩೯. ಎ.ಕ.XXIV, ಚಿಕ್ಕನಾಯಕನಹಳ್ಳಿ, ಸಂ.೫೪, ಬೂದಿಹಾಳು, ಸಂ.೪೩೪.

೧೪೦. ಹಂಪೆಯ ಶಾಸನಗಳು, ಪು.೧೮೪.

೧೪೧. ಎ.ಕ.XXIV ಕಂದಿಕೆರೆ, ಸಂ.೧೧(XXI ಚಿನಾ ೪೪).

೧೪೨. ಎ.ಕ.XII(ಚಿಕ್ಕಮಗಳೂರು), ಅಸಂದಿ(VI ಕ ೧೫೮).

೧೪೩. ಕನ್ನಡ ವಿಶ್ವವಿದ್ಯಾಲಯದ ಶಾಸನ ಸಂಪುಟ ೧, ಬಳ್ಳಾರಿ, ಉಚ್ಚಂಗಿದುರ್ಗ, ಸಂ.೪.

೧೪೪. ಎ.ಕ.VI, ಮೈಸೂರು, ಮೇಲುಕೋಟೆ, ಸಂ.೧೩೩(XIV ಶ್ರೀಪ ೨೬೨)

೧೪೫. ಕನ್ನಡ ವಿಶ್ವವಿದ್ಯಾಲಯದ ಶಾಸನ ಸಂಪುಟ ೧, ಬಳ್ಳಾರಿ ಜಿಲ್ಲೆ, ರಾವಿಹಾಳು, ಸಂ.೨೫.

೧೪೬. SII- IX-(II)-676;

೧೪೭. ಎ.ಕ.VI, ಹಾಸನ, ಸಂ.೨(V ಹಾ ೨).

೧೪೮. ಅದೇ, ಪಾಳ್ಯ ಸಂ.೪೪(V ಹಾ ೨೨).

೧೪೯. ಅದೇ, ಹಾಸನ, ಸಂ.೨(V ಹಾ ೨).

೧೫೦. ಅದೇ, ಕುದುರೆಗುಂಡಿ ಸಂ.೭೯(ರಿ ೧೯೩೫–೮).

೧೫೧. ಎ.ಕ.V, ಮೈಸೂರು, ಗಳಿಗೇಕೆರೆ, ಸಂ.೧೦೪(IV ಯ ೫೯).

೧೫೨. ಎ.ಕ.11, ಚಿಕ್ಕಮಂಗಳೂರು, ಖಾಂಡ್ಯ, ಸಂ.೧೮೩(VI ಚಿಮ ೭೯).

೧೫೩. ಎ.ಕ.VII, ಕಾರಬಯಲು, ಸಂ.೧೨೬(IV ನಾಮಂ ೭೫).

೧೫೪. ಕನ್ನಡ ವಿಶ್ವವಿದ್ಯಾಲಯದ ಶಾಸನ ಸಂಪುಟ ೩, ರಾಯಚೂರು, ಸಂ.೪೭ ಪು.೧೮೨.

೧೫೫. ಎ.ಕ.VIII, ಹಾಸನ, ಭೈರಾಪುರ, ಸಂ.೧೦೩(ರಿ ೧೯೨೬–೪೫).

೧೫೬. ಎ.ಕ.III, ಮೈಸೂರು, ಏಚಿಗನಹಳ್ಳಿ, ಸಂ.೧೭೧(ಎ.ಕ.III, 43).

೧೫೭. ಕನ್ನಡ ವಿಶ್ವವಿದ್ಯಾಲಯದ ಶಾಸನ ಸಂಪುಟ ೨, ಕೊಪ್ಪಳ, ಅಗಳಕೆರೆ, ೧೪೬

೧೫೮. ಅದೇ, ಸಂ.೧೪೭.

೧೫೯. ಕನ್ನಡ ವಿಶ್ವವಿದ್ಯಾಲಯದ ಶಾಸನ ಸಂಪುಟ ೧, ಬಳ್ಳಾರಿ, ನಿಚ್ಚವ್ವನಹಳ್ಳಿ, ಸಂ.೨೧೩.

೧೬೦.ಕನ್ನಡ ವಿಶ್ವವಿದ್ಯಾಲಯದ ಶಾಸನ ಸಂಪುಟ ೨, ಕೊಪ್ಪಳ, ಆನೆಗೊಂದಿ, ೨೬.

೧೬೧. ಕನ್ನಡ ವಿಶ್ವವಿದ್ಯಾಲಯದ ಶಾಸನ ಸಂಪುಟ ೧, ಬಳ್ಳಾರಿ, ಚಲ್ಲಕೊಡಲೂರು–೨೦.

೧೬೨. ಅದೇ, ಸಂ.೨೧, ಪು.೧೨೮.

೧೬೩. ಎ.ಕ.XV, ಹೊಸನಗರ, ದೂನ, ಸಂ.೧೬(VIII ಹೊಸ ೩೨)

೧೬೪. AR No.B.405 oF 1964-65, IK-III-No.80.

೧೬೫. ಕನ್ನಡ ವಿಶ್ವವಿದ್ಯಾಲಯದ ಶಾಸನ ಸಂಪುಟ ೪, ಆಂಧ್ರ ಕನ್ನಡ ಶಾಸನ, ಸಂ.೫೦.

೧೬೬. ಕನ್ನಡ ವಿಶ್ವವಿದ್ಯಾಲಯದ ಶಾಸನ ಸಂಪುಟ ೩, ರಾಯಚೂರು ಜಿಲ್ಲೆ, ಪು.೩೬೭.

೧೬೭. ಕನ್ನಡ ವಿಶ್ವವಿದ್ಯಾಲಯದ ಶಾಸನ ಸಂಪುಟ ೨, ಕೊಪ್ಪಳ ಜಿಲ್ಲೆ, ಪು.೧೮.

೧೬೮. ಎ.ಕ.IX, ಹಾಸನ ಜಿಲ್ಲೆ, ಪು.೫೧೯

೧೬೯. ನೋಡಿ, AE.XVI, ಪು.೭೩–೭೫.

೧೭೦. ಶೇಷಶಾಸ್ತ್ರಿ ಆರ್., ಕರ್ನಾಟಕ ವೀರಗಲ್ಲುಗಳು, ೨೦೦೪, ಪು.೧೫೭.

೧೭೧. MAR-1934, P-12

೧೭೨. ಎ.ಕ.XII, ಚಿಕ್ಕಮಗಳೂರು, ಬಂಕನಕಟ್ಟೆ, ಸಂ.೬೩(VI ತ ೬೩).

೧೭೩. ಎ.ಕ.VII, ಮಂಡ್ಯ, ಪು.೩೧೮.

೧೭೪. ಎ.ಕ.VII ನಾಗಮಂಗಲ, ಕಾರಬಯಲು, ಸಂ.೧೨೭(XIV ನಾಮಂ ೧೩೭).

೧೭೫. ಶೇಷಶಾಸ್ತ್ರಿ ಆರ್., ಕರ್ನಾಟಕ ವೀರಗಲ್ಲುಗಳು, ೨೦೦೪, ಪು.೩೧೮.

೧೭೬. ಅದೇ, ಪು.೩೧೮

೧೭೭. ಅದೇ, ಪು.೩೩೬

೧೭೮. ಕಲಬುರ್ಗಿ ಎಂ.ಎಂ.(ಸಂ), 'ಕರ್ನಾಟಕ ಕೈಫಿಯತ್ತುಗಳು', ಪು.೪೪೮

೧೭೯. ಅದೇ, ಪು.೪೪೮

೧೮೦. ಅದೇ, ಪು.೪೫೨

೧೮೧. ಅದೇ, ಪು.೫೨೧

೧೮೨. ಅದೇ, ಪು.೫೪೮

೧೮೩. ಅದೇ, ಪು.೫೭೮

ಅಧ್ಯಾಯ ನಾಲ್ಕು

# ತಳವಾರರ ವೃತ್ತಿ ಮತ್ತು ಜೀವನ

ವ್ಯಕ್ತಿ ತಾನು ಬದುಕಲು ಯಾವುದಾದರೊಂದು ಕಸುಬನ್ನು ಕೈಗೊಳ್ಳಲೇಬೇಕು. ಪ್ರತಿಯೊಬ್ಬರಲ್ಲಿಯೂ ವೃತ್ತಿಯ ಸಂಸ್ಕೃತಿಯಲ್ಲಿ ಬೌದ್ಧಿಕ ಮತ್ತು ದೈಹಿಕ ಸಾಮರ್ಥ್ಯವು ಪ್ರಮುಖ ಪಾತ್ರ ವಹಿಸುತ್ತವೆ. ಪ್ರಕೃತಿಯ ಮಡಿಲಲ್ಲಿ ಜೀವಿಸುವ ಮಾನವ ಪ್ರಕೃತಿ ಒದಗಿಸುವ ವಸ್ತು ಮತ್ತು ಸಂದರ್ಭಗಳನ್ನು ಅವಲಂಬಿಸಿಕೊಂಡೇ ಬದುಕಬೇಕಾಗುತ್ತದೆ. ಉದ್ಯೋಗ ಪ್ರತಿಯೊಬ್ಬ ಮನುಷ್ಯನ ಲಕ್ಷಣವಾಗಿದೆ. ಇಲ್ಲಿ ಶಿಕ್ಷಣ ಕಲಿತವನೂ ಕಲಿಯದವನೂ ಯಾವುದಾದರೊಂದು ವೃತ್ತಿ ಕೈಗೊಂಡು ಅದಕ್ಕೆ ಹೊಂದಿಕೊಂಡಿರುತ್ತಾನೆ. ವ್ಯಕ್ತಿಗಳು ಕೈಗೊಂಡ ವೃತ್ತಿ ಅವರವರ ಆಸಕ್ತಿ, ಶಕ್ತಿ, ಸಾಮರ್ಥ್ಯ, ಶ್ರದ್ಧೆ ಹಾಗೂ ನಿಷ್ಠೆಯನ್ನು ಅವಲಂಬಿಸಿರುತ್ತದೆ. ಈ ರೀತಿಯ ಒಂದೊಂದು ವೃತ್ತಿಯಿಂದಾಗಿ ಅವರ ಕುಟುಂಬದ ಪ್ರಗತಿ, ದೇಶದ ಆರ್ಥಿಕಾಭಿವೃದ್ಧಿ ಹಾಗೂ ಸುಗಮ ಆಡಳಿತಕ್ಕೆ ನೆರವಾಗಿವೆ. ಈ ಹಿನ್ನೆಲೆಯಲ್ಲಿ ಉದ್ಯೋಗವೇ ಬದುಕಿನ ಅವಲಂಬನೆಯಾಗಿರುತ್ತದೆ ಮತ್ತು ಜೀವನ ನಿರ್ವಹಣೆಯ ಮಾರ್ಗವೂ ಆಗಿರುತ್ತದೆ. ಹೀಗೆ ಜೀವನಾವಶ್ಯಕತೆಯ ಪರಿಣಾಮವಾಗಿ ಹುಟ್ಟಿಕೊಂಡ ವೃತ್ತಿಗಳಲ್ಲಿ ತಳವಾರಿಕೆ ವೃತ್ತಿಯೂ ಒಂದಾಗಿದೆ.

## ೪.೧. ಆಯಗಾರರಾಗಿ ತಳವಾರರು

ಭಾರತ ಹಳ್ಳಿಗಳಿಂದ ಕೂಡಿದ ದೇಶ. ಇಲ್ಲಿ ರೈತನೇ ದೇಶದ ಬೆನ್ನೆಲುಬಾಗಿದ್ದಾನೆ. ಕೃಷಿಗೆ ಪೂರಕವಾಗಿ ಹಲವು ವೃತ್ತಿಗಳಿಂದ ಅವರ ಸೇವೆ ಮಾಡುತ್ತಾ ರೈತರನ್ನೇ ಅವಲಂಬಿಸಿ, ತಮ್ಮ ಬದುಕನ್ನು ನಿರ್ವಹಿಸುವ ಗ್ರಾಮ ಸೇವಕರೇ ಆಯಗಾರರಾಗಿದ್ದಾರೆ. 'ಆಯ' ಎಂದರೆ ಸಮಾಜ ಜೀವನ ಮತ್ತು ಕೃಷಿ ಚಟುವಟಿಕೆಗಳಿಗೆ ಬೇಕಾದ ಸೇವೆ ಹಾಗೂ ವಿವಿಧ ಸಲಕರಣೆಗಳನ್ನು ಒದಗಿಸುವ ವೃತ್ತಿ ಸಮುದಾಯಗಳಿಗೆ ರೈತರು ತಾವು ಬೆಳೆದ ಬೆಳೆಯಲ್ಲಿ ಇಂತಿಷ್ಟು ಪಾಲು ಧವಸ ಧಾನ್ಯದ ರೂಪದಲ್ಲಿ ನೀಡುವ ಪ್ರತಿಫಲಕ್ಕೆ 'ಆಯ' ಎಂದು ಕರೆಯಲಾಗುತ್ತದೆ. "ಆಯ ನೀಡುವವರನ್ನು 'ಆಯದ ಕುಳ' ಅಥವಾ ವತನದಾರರು ಎಂದು ಕರೆದರೆ ಪಡೆಯುವವರನ್ನು 'ಆಯದವರು', 'ಕಸುಬಿನವರು', 'ಆಯಗಾರರು' ಎಂದು ಕರೆಯುವ ವಾಡಿಕೆ ಇದೆ."[೧]

ಆಯಗಾರರಾದವರು ತಾವು ನೀಡುವ ಸೇವೆಗೆ ಪ್ರತಿಫಲವಾಗಿ ತಮ್ಮ ಕೆಲಸದ ಅವಧಿಯಲ್ಲಿ ಸಂಭಾವನೆ ಪಡೆಯದೆ, ಸುಗ್ಗಿಯ ಕಾಲದವರೆಗೂ ಕಾದು, ಆಯಾ ಕುಟುಂಬದ ಕಣಗಳಿಗೆ ಹೋಗಿ, ಅಲ್ಲಿ ಬೆಳೆದ ಫಸಲಿನಲ್ಲಿ ಇಂತಿಷ್ಟು ಪಾಲು ಎಂಬಂತೆ ಅಲ್ಲಿಂದ ಜೋಳ, ರಾಗಿ, ಭತ್ತ, ಕುಸುಬಿ, ಹುರುಳಿ ಮುಂತಾದ ದವಸ ಧಾನ್ಯಗಳನ್ನು ಪಡೆಯುತ್ತಾರೆ. ಇದಲ್ಲದೆ ಹಬ್ಬ ಹರಿದಿನಗಳಲ್ಲಿ ತರಕಾರಿ, ಹೂವು, ಹಣ್ಣು, ತೆಂಗಿನಕಾಯಿ ಮುಂತಾದವುಗಳನ್ನು ಪಡೆಯುತ್ತಾರೆ.

"ಆಯಗಾರಿಕೆ ಕೃಷಿ ಸಮಾಜದ ಬಹುಮುಖ್ಯ ಆರ್ಥಿಕ ಹಾಗೂ ಸಾಮಾಜಿಕ ಪದ್ಧತಿಯಾಗಿತ್ತು. ಇದೊಂದು ಅಂತರ್ ಕುಟುಂಬ ಸಂಬಂಧಗಳ ತಾಳಿಕೆ ಹಾಗೂ ಬಾಳಿಕೆಯ ವ್ಯವಸ್ಥೆಯಾಗಿತ್ತು. ಇದೊಂದು ಸಮೂಹ ಹೊಣೆಗಾರಿಕೆಯ ಸಂಗತಿಯಾಗಿತ್ತು. ಆಯ ಎನ್ನುವುದು ಹಣಕ್ಕಾಗಿ ದುಡಿಯುವ ಉದ್ಯೋಗವಾಗಿರಲಿಲ್ಲ ಅದೊಂದು ಧರ್ಮ ಪ್ರಜ್ಞೆಯಾಗಿತ್ತು"[೨] ಎಂಬ ವೀರೇಶ ಬಡಿಗೇರ ಅವರ ಮಾತು ಅರ್ಥಪೂರ್ಣವೆನಿಸುತ್ತದೆ. ಇಲ್ಲಿ ಆಯಗಾರರು ಯಾರು? ಎಂಬ ಪ್ರಶ್ನೆಗೆ ವಂಶ ಪಾರಂಪರ್ಯವಾಗಿ ಗ್ರಾಮಕ್ಕೆ ಸೇವೆ ಸಲ್ಲಿಸುತ್ತಿರುವ ಸೇವರಕನ್ನು ಆಯಗಾರರು ಎಂದು ಹೇಳಲಾಗಿದೆ. ಇವರು ಕೆಲಸದ ರಹಸ್ಯವನ್ನು ತಿಳಿದವರು ಮತ್ತು ತಮ್ಮ ವೃತ್ತಿಗನುಸಾರವಾಗಿ ಕಾಲಕ್ರಮದಿಂದ ಆಯಾ ಗ್ರಾಮದ ಕೆಲಸಗಳನ್ನು ನಡೆಸಿಕೊಂಡು ಬರುತ್ತಿರುವ ಜನಸೇವಕರಾಗಿದ್ದಾರೆ. ಅವರಲ್ಲಿ ಮುಖ್ಯವಾಗಿ "ಗೌಡ, ಶಾನುಭೋಗ, ಜೋಯಿಸ, ಕಮ್ಮಾರ, ಕುಂಬಾರ, ಬಡಗಿ, ನಾಯಿಂದ, ತಳವಾರ, ಕ್ಷೌರಿಕ ಮೊದಲಾದವರು ಆಯಗಾರರಾಗಿದ್ದಾರೆ. ಊರಿನ ಮುಖ್ಯಸ್ಥರ ಮನೆಗಳಿಂದ ಅನ್ನ, ಆಹಾರ ಮೊದಲಾದವುಗಳನ್ನು ಸಂಪ್ರದಾಯಿಕವಾಗಿ ಪಡೆದುಕೊಳ್ಳುವವರು ಜೀತಗಾರರಾಗಿದ್ದಾರೆ."[೩]

ಆಯಗಾರರನ್ನು ಅಡದೆಯವರು, ಅಡದೆ ಕುಳಗಳು, ಎಚ್ಚಗಾರರು, ಕೈವಾಡದವರು, ಗುಪ್ಪಿನವರು, ಬಾಬಿನವರು, ಬಾಬುದಾರರು, ಹಿಟ್ಟಿನವರು, ಮೈಲಿಗೆಯವರು, ಮ್ಯಾರೆಯವರು, ಹಕ್‌ದಾರರು, ಬಾರಬಲೂತಿ ಮುಂತಾದ ಹೆಸರುಗಳಿಂದ ಕರೆಯುತ್ತಾರೆ. ಆಯಗಾರರನ್ನು ಎಂಟು ಹಿಟ್ಟಿನವರು ಬಾರ ಬಲೂತಿಗಳು, ಅಷ್ಟದಶ ವರ್ಗದವರು ಎಂದು ವಿಂಗಡಿಸುತ್ತಾರೆ. ಅವರಲ್ಲಿ ಗೌಡ, ಶ್ಯಾನಭೋಗ, ತಳವಾರ, ಬಡಗಿ, ಕಮ್ಮಾರ, ಅಕ್ಕಸಾಲಿಗ, ಅಗಸ, ಅಂಬಿಗ ಅಥವಾ ಕಂಚಗಾರ ಇವರಲ್ಲಿ ಮೊದಲ ಮೂವರನ್ನು ಗ್ರಾಮಾಧಿಕಾರಿಗಳು ಎಂದು ಕರೆಯುತ್ತಾರೆ. ನಂತರದ ಐದು ಜನರನ್ನು ಪಂಚಕಾರರೆಂದು ಕರೆಯುತ್ತಿದ್ದ ಮಾಹಿತಿ ಖಾನಾಪುರ ತಾಲೂಕಿನ ಬೈಲೂರು ಶಾಸನ(ಕ್ರಿ.ಶ.೧೧೬೨)ದ ಉಲ್ಲೇಖದಿಂದ ತಿಳಿಯುತ್ತದೆ.

ಗ್ರಾಮೀಣ ಜೀವನದಲ್ಲಿ ಆಯಗಾರರ ಪಾತ್ರ ಅತೀ ಪ್ರಮುಖವಾಗಿತ್ತು. ವ್ಯವಸ್ಥಿತ ಬದುಕಿಗೆ ಅವರು ಪರಸ್ಪರ ಪೂರಕ ಹಾಗೂ ಪ್ರೇರಕವಾಗಿದ್ದರು. ಕೃಷಿ ಮತ್ತು ಸಾಮಾಜಿಕ ಪರಿಕಲ್ಪನೆಯೊಂದಿಗೆ ಗ್ರಾಮೀಣ ಬದುಕಿನಲ್ಲಿ ಬಹಳ ಹಿಂದಿನಿಂದಲೂ ಪರಂಪರಾಗತವಾಗಿ ಗ್ರಾಮೀಣ ವೃತ್ತಿಗಳು

ಮುಂದುವರೆದುಕೊಂಡು ಬಂದಿವೆ. ಅಲೆಮಾರಿಯಾಗಿದ್ದ ಮಾನವ ಒಂದೆಡೆ ನೆಲೆಯೂರಿ ತನ್ನ ಬದುಕಿಗಾಗಿ ಆಯ್ದುಕೊಂಡ ವೃತ್ತಿಗಳು ಮುಂದೆ ಅವರ ಕುಲಕಸುಬುಗಳಾಗಿ ಉಳಿದುಕೊಂಡಿವೆ. ಇಂತಹ ಕುಲ ಕಸುಬುಗಳಿಂದಲೇ ಆಯಗಾರಿಕೆ ಹುಟ್ಟಿಕೊಂಡಿದೆ. ಆಯಗಾರರಲ್ಲಿ ಎರಡು ಪ್ರಕಾರಗಳಿವೆ.

> "ನಿಜ ಆಯಗಾರರು: ಗೌಡ, ಶಾನುಭೋಗ, ಬಡಗಿ, ತಳವಾರ, ಬೇಗಾರ.
>
> ಅರೆ ಆಯಗಾರರು: ಜೋಯಿಸ, ಕುಂಬಾರ, ನಾಪಿತ(ಕ್ಷೌರಿಕ), ರಜಕ(ಅಗಸ), ಬಾರಿಕ(ನೀರಗಂಟಿ), ಅಕಸಾಲೆ"[೪]

ಪಾಳೆಯಗಾರರ ಕಾಲದಲ್ಲಿ ತಳವಾರಿಕೆ ಆಯಗಾರಿಕೆಯಿಂದ ಕೂಡಿತ್ತು ಎಂಬುದಕ್ಕೆ ಒಂದು ಶಾಸನದಲ್ಲಿ ಕಾಡೇಯ ನಾಯಕನೆಂಬುವವನು ತನ್ನ ಮಾವನಾದ ಸೋವೆಯ ನಾಯಕನಿಗೆ ತಳವಾರಿಕೆ ಆಯದಲ್ಲಿ ಶ್ರೀಮರುಳೇಶ್ವರ ದೇವರ ನಂದಾದೀಪಕ್ಕೆ ಎಣ್ಣೆಗಾಗಿ, ಒಂದು ಗಾಣವನ್ನು ತಳವಾರಿಕೆ ಆಯದಲ್ಲೇ ಕೊಟ್ಟ ಎಂಬುದನ್ನು ತಿಳಿಸುವ ಶಾಸನವೊಂದರಲ್ಲಿ.

> "ಶ್ರೀಮತು ಹಟ್ಟಗಾಜಿ ಕಡಂಬರ ಕಾಡೆಯ ನಾಯಕನು ಮವರ
> ಮಾವಂ ಸೋವೆಯ ನಾಯಕನುಂ ತಳಾಜಿಕೆಯಾಯದಲ್ಲಿ
> ಶ್ರೀ ಮರುಳೇಶ್ವರ ದೇವರ ನನ್ದಾದೀವಿಗೆಗೆ ಡೊಂಕಿವಣ
> ಮಾನೆಣ್ಣೆ ಸಹಿತಂ ಬಿಟ್ಟ ಗಾಣವೊಂದು...... ತಳಾಜಿಕೆಯಾಯ
> ದೊಳಗೆ ಕೊಟ್ಟ ಸಧಮ್ಮದಿಂ ಪ್ರತಿಪಾಳಿಸಿ ನಡೆಸುವರು"[೫]

ಆಯ ಪಡೆಯುವ ತಳವಾರರಲ್ಲಿ ಕೆಲವರು ಅದನ್ನು ತಮ್ಮ ಉಪಜೀವನಕ್ಕೆ ಉಪಯೋಗಿಸಿ ಕೊಂಡರೆ, ಮತ್ತೆ ಕೆಲವರು ಇಂತಹ ಧಾರ್ಮಿಕ ಕಾರ್ಯಗಳಿಗೆ ವಿನಿಯೋಗಿಸುತ್ತಿದ್ದರೆಂಬ ಮಾಹಿತಿ ತಿಳಿಯುತ್ತದೆ.

ಹುಬ್ಬಳ್ಳಿ ತಾಲೂಕಿನ ಮಂಟೂರ ಗ್ರಾಮಕ್ಕೆ ಸೇರಿದ ಹೊಯ್ಸಳ ವೀರ ಬಲ್ಲಾಳನ ತಾಮ್ರ ಪಟದಲ್ಲಿ(ಕ್ರಿ.ಶ.ಸು.೧೨೦೦)

ಹಿಟ್ಟಿನ ತಳವಾರಿ ಮಾರನಾಯಕ, ಹಿಟ್ಟಕಾರ ಬಡಗಿ ಹಿಲೋಜ, ಹಿಟ್ಟಿನ ಕಮ್ಮಾರ, ದೇವೋಜ ಮತ್ತು ಹಿಟ್ಟಿನ ಅಕ್ಕಸಾಲಿ ಪಾರಸೋಜ ಇವರಿಗೆ ಭೂಮಿಯನ್ನು ಬಿಟ್ಟು ಕೊಟ್ಟ ಉಲ್ಲೇಖ ಬರುತ್ತದೆ.

ಹಿಟ್ಟು ಒಂದು ಆಹಾರ ಪದಾರ್ಥವಾಗಿತ್ತು ಕಾರಣ ಹಿಟ್ಟು ಶಬ್ದಕ್ಕೆ ಆಯ, ಬದುಕುವ ಸಾಧನ, ಸಂಭಾವನೆ, ಪ್ರತಿಫಲ ಎನ್ನುವ ಅರ್ಥಬಂದಿದೆ. ಜೀವನಾಧಾರವಾದ ಹಿಟ್ಟು ದುಡಿಮೆಯ ಪ್ರತಿಫಲವಾಗಿದೆ. ದುಡಿದಿದ್ದರ ಫಲವಾಗಿ ನೀಡುವ ದಾನವನ್ನು "ಹಿಟ್ಟು ಹಾಸಿ ಕೊಟ್ಟರು'

'ಕಾಲಂಕರ್ಚಿ ಹಿಟ್ಟಂ ಹೂತಿ ಕುಡೆ ಪಡೆದು' ಎನ್ನುವ ಉಲ್ಲೇಖಗಳು ಶಾಸನಗಳಲ್ಲಿ ಕಂಡುಬರುತ್ತವೆ. ಹಿಟ್ಟುಕಾರರಿಗೆ ಭೂಮಿ ನೀಡುವುದಲ್ಲದೆ ತೆರಿಗೆಯಿಂದ ವಿನಾಯಿತಿ ನೀಡಲಾಗುತ್ತಿತ್ತು. ತಳವಾರ, ಬಡಗಿ, ಕಮ್ಮಾರ, ಅಕ್ಕಸಾಲೆ ಈ ನಾಲ್ಕು ಹಿಟ್ಟುಕಾರರಿಗೆ ಭೂಮಿಯನ್ನು ಉಂಬಳಿಯಾಗಿ ಬಿಟ್ಟ ಬಗ್ಗೆ ಹುಬ್ಬಳ್ಳಿಯ ಮಂಟೂರು ಶಾಸನ ಹೇಳುತ್ತದೆ.[೬] ಆಯವನ್ನು ಹಿಟ್ಟು ಎಂದು ಕರೆಯುವ ವಾಡಿಕೆ ಇತ್ತು ಎಂಬುದಕ್ಕೆ ಮಾಹಿತಿ ದೊರೆಯುತ್ತದೆ.

ಚಿತ್ರದುರ್ಗದ ಮೊದಲ ಅರಸ ಮತ್ತಿತಿಮ್ಮಣ್ಣ ನಾಯಕ ಆಯಾ ಗ್ರಾಮಗಳಿಗೆ ತಳವಾರ, ಬೇಗಾರ ಮೊದಲಾದ ಆಯಗಾರರನ್ನು ನೇಮಿಸಿದ್ದನು. "ಭರಮಪ್ಪನಾಯಕನು ದಿವಸದಲ್ಲಿ ಆಯಗಾರರು ಅರಮನೆಗೆ ಬಂದು ಬಿಟ್ಟಿ ಚಾಕರಿಯನ್ನು ಮಾಡಬೇಕೆಂದು ನಿರ್ಣಯ ಮಾಡಿದ್ದನು."[೭] ಅಂದರೆ ಪಾಳೆಯಗಾರರ ಕಾಲದಲ್ಲಿ ತಳವಾರಿಕೆ ಮಹತ್ವ ಪಡೆದಿತ್ತು. ಅಲ್ಲಿ ಅವರಿಗೆ ಸಂಬಳ ಇತ್ತೊ ಇಲ್ಲವೋ ಆದರೆ ಆಯ ಮಾತ್ರ ತಳವಾರನಿಗೆ ಕೊಡುವುದು ಕಡ್ಡಾಯ ಎಂಬುದು ತಿಳಿಯುತ್ತದೆ.

ಪ್ರತಿಯೊಂದು ಹಳ್ಳಿಯಲ್ಲಿ ಇಂದಿಗೂ ಆಯಗಾರಿಕೆ ಉಳಿದುಕೊಂಡು ಬಂದಿದೆ. ಅಲ್ಲಿ ಸೇವೆ ಸಲ್ಲಿಸುವ ವೃತ್ತಿಗಾರರು ಅದರಲ್ಲೂ ಮುಖ್ಯವಾಗಿ ಕುಂಬಾರ, ಕಮ್ಮಾರ, ಚಮ್ಮಾರ, ಕ್ಷೌರಿಕ, ಅಗಸ ಇವರು ಆಯಾ ಜಾತಿಗಳಿಂದಲೇ ವಂಶ ಪಾರಂಪರ್ಯವಾಗಿ ಆಯ ಮಾಡುತ್ತಿದ್ದಾರೆ. ಇನ್ನು ಗೌಡ, ಶಾನುಭೋಗ, ತಳವಾರ, ಮಾಣೆಗಾರ ಮುಂತಾದವರು ಇಂಥದೇ ಜಾತಿಯವರು ಇರಬೇಕೆಂಬ ನಿಯಮವಿಲ್ಲ. ಆದರೂ ಕೆಲವು ಕಡೆ ವಂಶ ಪಾರಂಪರ್ಯವಾಗಿ ಈ ವೃತ್ತಿಯನ್ನು ಮುಂದುವರೆಸಿಕೊಂಡು ಬಂದ ಉದಾಹರಣೆಗಳು ನಮಗಿಂದು ದೊರೆಯುತ್ತವೆ.

ಆಯ ಮಾಡಿಸಿಕೊಳ್ಳುವ ರೈತ ಆಯಗಾರರಿಗೆ ನಿಗದಿಪಡಿಸಿದ ದವಸ ಧಾನ್ಯಗಳನ್ನು ಸುಗ್ಗಿಯ ಕಾಲದಲ್ಲಿ ಕಣದಲ್ಲೇ ಹಂಚುತ್ತಿದ್ದರು. ರಾಶಿಯ ತುದಿಭಾಗ ಪೂಜಾರಿಗೆ, ನಂತರ ಬಡಗಿ, ಕಮ್ಮಾರ, ಅಗಸ ಹೀಗೆ ಕ್ರಮವಾಗಿ ನೀಡುತ್ತಿದ್ದರು. ಆದರೆ ಯಾವುದೇ ಪ್ರತಿಫಲಗಳನ್ನು ಬಯಸದೇ ಗ್ರಾಮಸೇವೆಯಲ್ಲಿ ನಿರತರಾಗಿದ್ದ ತಳವಾರ, ಕೋಲುಕಾರರು ಸರ್ಕಾರದ ಪ್ರತಿನಿಧಿಗಳಾಗಿದ್ದ ರಿಂದ ಇವರು ಪರೋಕ್ಷ ಆಯಗಾರರಾಗಿದ್ದಾರೆ. ಇವರಿಗೆ ಸರಕಾರದ ಇನಾಂ, ವತನಿ ಭೂಮಿಗಳಿವೆ. ಈ ಕಾರಣದಿಂದ ಇವರಿಗೆ ಧವಸ ಧಾನ್ಯ ನೀಡುವ ಪದ್ಧತಿ ಇರಲಿಲ್ಲ. ಆದರೂ ಕೆಲವು ಕಡೆ ತಳವಾರ ಮತ್ತು ಕೋಲುಕಾರನಿಗೆ ಅವರ ಸೇವಾ ನಿಷ್ಠತೆಗೆ ಅನುಗುಣವಾಗಿ ಆಯ ನೀಡುತ್ತಿದ್ದ ಉದಾಹರಣೆಗಳು ಅಲ್ಲಲ್ಲಿ ದೊರೆಯುತ್ತದೆ.

ತಳವಾರ ಆಯಗಾರರಲ್ಲಿ ಒಬ್ಬನಾಗಿದ್ದಾನೆ. ಈತನು ಆಯಾ ಊರಿನ ಗೌಡನ ಬಲಗೈ ಬಂಟನಾಗಿದ್ದ. ಗೌಡ ಊರಿನ ಮುಖಂಡನಾದರೆ, ತಳವಾರ ಅವನ ಆದೇಶಗಳನ್ನು ಜಾರಿಗೆ ತರುವ ಕಾರ್ಯದರ್ಶಿಯಾಗಿದ್ದ. ಎಲ್ಲಾ ಸಾರ್ವಜನಿಕ ಕೆಲಸಗಳಲ್ಲಿಯೂ ಈತನು ಭಾಗಿಯಾಗಿ

ಎಲ್ಲರ ಸ್ನೇಹ, ಸೌಹಾರ್ದತೆಗೆ ಪಾತ್ರನಾಗಿರುತ್ತಿದ್ದನು. ಗೌಡ ಕಂದಾಯ ವಸೂಲಿಗೆ ತೆರಳಬೇಕಾದರೆ ಅಲ್ಲಿ ತಳವಾರನಿಗೆ ಮೊದಲ ಆಹ್ವಾನ ಇರುತ್ತದೆ. ಊರಲ್ಲಿ ಕಳ್ಳತನವಾದರೆ, ಯಾರಾದರೂ ಆತ್ಮಹತ್ಯೆ ಮಾಡಿಕೊಂಡರೆ ಅಲ್ಲಿ ತಳವಾರನ ಉಪಸ್ಥಿತಿ ಮುಖ್ಯವಾಗಿರುತ್ತದೆ. ಕಂದಾಯ ವಸೂಲಿ ಮಾಡುವಾಗ ಗೌಡನ ವಸೂಲಿಯಲ್ಲಿ ಸಹಕರಿಸುತ್ತಿದ್ದ. ಕಂದಾಯ ಕೊಡದವರ ಮನೆ ಬಾಗಿಲಲ್ಲಿ ತನ್ನ ಬಡಿಗೆಯನ್ನು ಇಟ್ಟು ಬರುತ್ತಿದ್ದ. ಅದು ಅವರಿಗೆ ಕೊನೆಯ ಎಚ್ಚರಿಕೆಯ ಸಂದೇಶವಾಗಿರುತ್ತಿತ್ತು. ಅದಕ್ಕೆ ತಪ್ಪಿದಲ್ಲಿ ತಳವಾರನ ಶಿಕ್ಷೆಗೆ ಗುರಿಯಾಗಬೇಕಾಗಿತ್ತು. ಊರಿಗೆ ಯಾವುದೇ ಅಧಿಕಾರಿ ಬಂದರೂ ಅವರ ಯೋಗಕ್ಷೇಮ ನೋಡಿಕೊಳ್ಳುವುದರ ಜೊತೆಗೆ, ಅವರಿಗೆ ಬೇಕಾದ ಮಾಹಿತಿ ಒದಗಿಸುವ ಕೆಲಸ ಈತನದಾಗಿತ್ತು. ಊರಲ್ಲಿ ಗಸ್ತು ತಿರುಗುವುದು. ಕಂದಾಯ ಹಣ ಮತ್ತು ದವಸ ಧಾನ್ಯಗಳನ್ನು ತಾಲೂಕು ಕಛೇರಿಗೆ ಸಾಗಿಸುವುದು ಈತನ ಕರ್ತವ್ಯವಾಗಿತ್ತು. ಹಾಗೂ ಊರಿನಲ್ಲಿ ಯಾವುದೇ ಹಬ್ಬ ಜಾತ್ರೆಗಳು ನಡೆದರೂ ಅಲ್ಲಿ ಅಹಿತಕರ ಘಟನೆಗಳು ನಡೆಯದಂತೆ ನೋಡಿಕೊಳ್ಳುವ ಮೇಲುಸ್ತುವಾರಿಯನ್ನು ಇದೇ ತಳವಾರನು ವಹಿಸಿಕೊಳ್ಳುತ್ತಿದ್ದ. ಹೀಗೆ ತನ್ನ ಪ್ರಾಮಾಣಿಕತೆ, ಸೇವಾ ಮನೋಭಾವ ಮತ್ತು ಊರ ಜನತೆಯ ಮರ್ಜಿಯನ್ನು ಕಾಯ್ದುಕೊಂಡಿದ್ದ ತಳವಾರ ಆಯಗಾರನಾಗಿ ತಾನು ಪಾಲು ಪಡೆಯುತ್ತಿದ್ದ ಎಂಬುದು ತಿಳಿದುಬರುತ್ತದೆ.

ಗೌಡ ಶಾನುಭೋಗರ ಆಜ್ಞಾಪಾಲಕನಾಗಿದ್ದ ತಳವಾರ ಗ್ರಾಮ ಕಾರ್ಯಗಳಲ್ಲಿ ಅವರಿಗೆ ನೆರವಾಗುತ್ತಾ, ಊರಿಗೆ ಕಾವಲಾಗಿರುತ್ತಿದ್ದ. ಊರಿಗೆ ಯಾರೇ ಹೊಸಬರು ಬಂದರೂ ಅವರ ಮೇಲೆ ಕಣ್ಣಿಡುತ್ತಿದ್ದ. ಇನ್ನು ಭಿಕ್ಷೆ ಬೇಡಲು ಬರುವ ಮೊಂಡರು, ಅಡವಿ ಚೆಂಚರು, ವೇಷಗಾರರು, ಈತನ ಅಪ್ಪಣೆಯಿಲ್ಲದೆ ಊರು ಪ್ರವೇಶಿಸುವಂತಿರಲಿಲ್ಲ. ತಳವಾರನ ಅಧಿಕೃತ ಅಪ್ಪಣೆ ಸಿಕ್ಕ ನಂತರ ಆತನ ಕಣ್ಗಾವಲಿನಲ್ಲಿಯೇ ಭಿಕ್ಷೆ ಪಡೆದು ಊರಿಂದ ಆಚೆ ಹೋಗಬೇಕಾಗಿತ್ತು. ಈ ಸಂದರ್ಭದಲ್ಲಿ ತಳವಾರ ಬಡಿಗೆ ಹಿಡಿದು ಅವರ ಹಿಂದೆಯೇ ತಿರುಗಿ ಊರ ಅಗಸಿಯನ್ನು ದಾಟಿಸಿ ಬರುತ್ತಿದ್ದ. ಇದಕ್ಕೆ ಅವರಲ್ಲಿ ಮಾಟ, ಮಂತ್ರ, ಕಳ್ಳತನ, ದರೋಡೆ, ಸುಳ್ಳು, ಮೋಸಗಾರರು ಇರುತ್ತಿದ್ದರಿಂದ ಅವರಿಂದ ಜನರ ರಕ್ಷಣೆಗಾಗಿ ಈ ಕಾರ್ಯ ಮಾಡುತ್ತಿದ್ದ ಮತ್ತು ಇದು ಆತನ ಕರ್ತವ್ಯ ಕೂಡ ಆಗಿತ್ತು. ಈ ಕಾರಣದಿಂದಲೂ ಆತನಿಗೆ ಆಯ ಕೊಡುವ ಪದ್ಧತಿ ಹುಟ್ಟಿಕೊಂಡಿರಬಹುದು.

ಒಂದು ಊರಿನಲ್ಲಿ ಎಷ್ಟೇ ತಳವಾರ ಮನೆತನಗಳಿದ್ದರೂ ಒಂದು ಮನೆತನಕ್ಕೆ ಮಾತ್ರ ವೃತ್ತಿ ಮಾಡುವ ಅವಕಾಶವಿದ್ದುದರಿಂದ ಇನಾಂ ಭೂಮಿಗಳು ಕಡಿಮೆ ಪ್ರಮಾಣದಲ್ಲಿ ದೊರೆತಿವೆ. ಈ ಭೂಮಿಯಿಂದ ಅಧಿಕ ಆದಾಯ ಪಡೆಯುವುದು ಕಷ್ಟಸಾಧ್ಯವಾದ್ದರಿಂದ ಅನಿವಾರ್ಯವಾಗಿ ಕೃಷಿ, ಪಶುಪಾಲನೆಯಂತಹ ಉದ್ಯೋಗಗಳನ್ನು ಅವಲಂಬಿಸಿದ್ದಾರೆ. ಇತ್ತೀಚೆಗೆ ಇವರಲ್ಲಿ ಆಯಕ್ಕೆ ಹೋಗುವುದು ತುಂಬಾ ಕಡಿಮೆ. ಆದರೂ ಕೆಲವು ಜನ ಕಣಕ್ಕೆ ಹೋಗಿ ಕಾಳು ತರುತ್ತಾರೆ.

ಹಿಂದೆ ಮದುವೆಯ ಸಂದರ್ಭದಲ್ಲಿ ವೀಳ್ಯೆ ಮತ್ತು ಚಾಜ ಪಡೆಯುತ್ತಿದ್ದ ಇವರು ಮದುವೆ ಮುಗಿಯುವವರೆಗೂ ಅವರ ಜೊತೆಗಿದ್ದು ಕಾರ್ಯಗಳಿಗೆ ವಿಘ್ನ ಬರದಂತೆ ನೋಡಿಕೊಳ್ಳುತ್ತಿದ್ದ. ಅದಕ್ಕೆ ಪ್ರತಿಯಾಗಿ ಅವರು ಕೊಡುವ ಅಲ್ಪಕಾಣಿಕೆ, ಬಟ್ಟೆ, ಕಾಳುಗಳನ್ನು ಪಡೆಯುತ್ತಿದ್ದ. ಆದರೆ ಇಂದು ಜನರ ಇವರ ಅವಶ್ಯಕತೆ ಅಷ್ಟಾಗಿ ತೋರುತ್ತಿಲ್ಲವಾದ್ದರಿಂದ ಈ ಕಾರ್ಯಕ್ಕೂ ತಿಲಾಂಜಲಿ ಇಟ್ಟಿದ್ದಾರೆ. ಹಿಂದಿನಂತಿದ್ದ ವೃತ್ತಿ ಕಾರ್ಯಗಳನ್ನು ಅಷ್ಟಾಗಿ ಕೈಗೊಳ್ಳದೆ ಸ್ವಾಭಿಮಾನದಿಂದ ಸ್ವ ಉದ್ಯೋಗದಲ್ಲಿ ತಮ್ಮ ಜೀವನ ನಿರ್ವಹಿಸುತ್ತಿದ್ದಾರೆ.

ಒಟ್ಟಾರೆಯಾಗಿ ಆಯಗಾರರು ಒಂದು ಪ್ರದೇಶದ ಸಾಮಾಜಿಕ, ರಾಜಕೀಯ ಹಾಗೂ ಧಾರ್ಮಿಕ ವ್ಯವಸ್ಥೆಯು ಸುಗಮವಾಗಿ ಸಾಗಲು ಇವರ ಅವಶ್ಯಕತೆ ಇತ್ತು. ಇವರು ಬರೀ ಕಾರ್ಮಿಕರಾಗಿರದೇ ಒಬ್ಬ ಜವಾಬ್ದಾರಿಯುತ ವ್ಯಕ್ತಿಯಾಗಿ, ವೃತ್ತಿಗೆ ತಕ್ಕ ಬಾಬುದಾರರಾಗಿದ್ದರು. ಗ್ರಾಮೀಣ ಪರಿಸರದ ನಿತ್ಯ ಚಟುವಟಿಕೆಯಲ್ಲಿ ಇತರ ಆಯಗಾರರಂತೆ ತಳವಾರರಿಗೂ ಮಹತ್ವದ ಸ್ಥಾನವಿತ್ತು.

## ೪.೨. ತಳವಾರಿಕೆ

ತಳವಾರಿಕೆ ಎನ್ನುವುದು ತಲಾರಿಕೆ, ತಳವಾರಿಕೆ, ತಳಾರಿಕೆ ಇತ್ಯಾದಿ ರೂಪಗಳಲ್ಲಿ ಬಳಕೆಯಾಗುತ್ತದೆ. ಎಲ್ಲಾ ರೂಪಗಳಿಗೆ ಸಾಮಾನ್ಯವಾಗಿ ಒಂದೇ ಅರ್ಥ ಅದು 'ಗ್ರಾಮ ರಕ್ಷಕ', 'ಕಾವಲುಗಾರ', ಖಡ್ಗ ಹಿಡಿದು ಗ್ರಾಮವನ್ನು ರಕ್ಷಿಸುವವನೇ ತಳವಾರ, ಕಳ್ಳಕಾಕರಿಂದ ಊರನ್ನು ರಕ್ಷಿಸುವ ಜವಾಬ್ದಾರಿಯನ್ನು ಹೊತ್ತ ತಳವಾರ ಗ್ರಾಮದ ಸಕಲ ವಿಚಾರಗಳನ್ನು ತಿಳಿದುಕೊಳ್ಳುತ್ತಿದ್ದ. ಈ ಮೂಲಕವಾಗಿ ಅನೈತಿಕ ಚಟುವಟಿಕೆಗಳು ನಡೆಯದಂತೆ ಕಾವಲಿರುತ್ತಿದ್ದ. ಈ ವೃತ್ತಿಯನ್ನು ವಂಶಪಾರಂಪರ್ಯವಾಗಿ ಒಪ್ಪಿಗೊಂಡು ಬಂದ ಸಂತತಿಯವರಿಗೆ ತಳವಾರರು ಎಂದು ಕರೆಯಲಾಗುತ್ತದೆ. ಈತನು ಕಾರ್ಯನಿರ್ವಹಿಸುವ ಸ್ಥಳಕ್ಕೆ 'ತಳವಾರ ಗಟ್ಟೆ' ಅಥವಾ 'ಕೊತವಾಲನ ಚಾವಡಿ' ಎಂದು ಕರೆಯಲಾಗುತ್ತದೆ.

ತಳವಾರನಿಗೆ ತಲೈ, ಮುಖ್ಯಸ್ಥ ಅಥವಾ ಮುಖ್ಯ ಕಾವಲುಗಾರ, ರಕ್ಷಣಾ ಅಧಿಕಾರಿ ಎಂದು ಕರೆಯಲಾಗುತ್ತಿತ್ತು. ಇತನೊಬ್ಬ ಇಲಾಖೇತರ ಪೊಲೀಸ್ ಅಧಿಕಾರಿಯಾಗಿದ್ದ. ಊರಲ್ಲಿ ಯಾರಾದರೂ ಅಪರಾಧಿ ಕೃತ್ಯಗಳಲ್ಲಿ ಭಾಗವಹಿಸಿದರೆ ಅವರನ್ನು ಊರಿನ ಚಾವಡಿಗೆ ಕರೆತಂದು ಮುಖಂಡರ ಮುಂದೆ ನಿಲ್ಲಿಸುತ್ತಿದ್ದ. ಹಾಗೇನೆ ಕೆಲವು ಕ್ಷುಲ್ಲಕ ಘಟನೆಗಳು ನಡೆದಾಗ ಅದಕ್ಕೆ ಕಾರಣ ಮತ್ತು ಪರಿಣಾಮಗಳನ್ನು ತಿಳಿದು ಮುಖಂಡರಿಗೆ ವಿವರಿಸುತ್ತಿದ್ದನು. ಅದೇ ರೀತಿ ಕಂದಾಯ ಪಾವತಿಸದವರ ಚರ ಮತ್ತು ಸ್ಥಿರ ಆಸ್ತಿಗಳನ್ನು ದಸ್ತಿ ಮಾಡುವ ಕಾರ್ಯ ತಳವಾರನದಾಗಿತ್ತು. ಚಿಕ್ಕ ಚಿಕ್ಕ ಊರುಗಳಲ್ಲಿ ಒಬ್ಬ ತಳವಾರನಿದ್ದರೆ, ದೊಡ್ಡ ಊರುಗಳಲ್ಲಿ ಎರಡರಿಂದ ನಾಲ್ಕು ಜನ ತಳವಾರರಿರುತ್ತಿದ್ದರು.

ತಳವಾರಿಕೆ ವಂಶಪಾರಂಪರೆಯಿಂದ ಬರುವುದೇ ಹೆಚ್ಚು. ಪ್ರಾಚೀನ ಕಾಲದಿಂದಲೂ ತಳವಾರಿಕೆ ಈ ನೆಲದಲ್ಲಿತ್ತು. ವಂಶಪರಂಪರೆಯಿಂದ ಅಂದರೆ ತಾತ, ತಂದೆ, ಮಗ, ಮೊಮ್ಮಗನಿಗೆ ತಳವಾರಿಕೆಯ ಹಕ್ಕುಗಳು ರವಾನೆಯಾಗುತ್ತಿದ್ದವು. "ವಿಜಯನಗರ ಕಾಲಕ್ಕೆ ಇದು ಉನ್ನತ ಹುದ್ದೆಯಾಗಿತ್ತು. ತಳವಾರಿಕೆ ಪರಂಪರೆಯಲ್ಲಿಯೇ ಕುಮಾರರಾಮ, ಕೃಷ್ಣದೇವರಾಯರು ಗುರುತಿಸಿಕೊಳ್ಳುವುದು. ವೃತ್ತಿ ಮತ್ತು ಜಾತಿ ಅಭಿಮಾನದಿಂದಲೇ ಹೊರತು ಬೇರೆ ಅಲ್ಲ. ಇವರು ಬೇಡರು ಆಗಿರುವುದರಿಂದ ತಳವಾರ ಸೇರಿದಂತೆ ಬಹುಪಾಲು ಜನರು ಇವರಿಗೆ ಪ್ರೋತ್ಸಾಹ ಕೊಟ್ಟಿದ್ದರು"[೮] ಎಂಬುದು ಪೂಜಾರಹಳ್ಳಿಯವರ ಅಭಿಪ್ರಾಯವಾಗಿದೆ. ಪ್ರಾಚೀನ ಕಾಲದಿಂದಲೂ ಸೈನಿಕ ವೃತ್ತಿಯನ್ನಲ್ಲದೇ ಸೈನಿಕ ವೃತ್ತಿಯ ಸಮೀಪದ ಇತರ ವೃತ್ತಿಗಳಾದ ಅಂಗರಕ್ಷಣೆ, ನಗರ, ಗ್ರಾಮ ರಕ್ಷಣೆ, ಕೋಟೆ ಕೊತ್ತಲಗಳ ಕಾವಲು ಕೆಲಸ, ಗಸ್ತು ತಿರುಗುವುದು, ಕಾಡು ಮೃಗಗಳನ್ನು ಬೇಟೆಯಾಡುವುದನ್ನು ತಳವಾರರು ನಿರ್ವಹಿಸಿಕೊಂಡು ಬಂದಿದ್ದಾರೆ.

ರಾಜಕೀಯ, ಸಾಮಾಜಿಕವಾಗಿ ಕೊನೆ ಸ್ಥಾನದಲ್ಲಿದ್ದ ತಳವಾರರು ತಮ್ಮ ವೃತ್ತಿ ಮತ್ತು ಜವಾಬ್ದಾರಿಯಿಂದ ಶ್ರೇಷ್ಠರಾಗಿದ್ದರು. ಆರ್ಥಿಕವಾಗಿ, ಶೈಕ್ಷಣಿಕವಾಗಿ ಹಿಂದುಳಿದಿದ್ದರೂ ಪ್ರಾಚೀನ ಕಾಲದ ರಾಜಪ್ರಭುತ್ವದಲ್ಲಿ ದ್ವಾರಪಾಲಕ, ಅರಮನೆ ಕಾವಲುಗಾರನಾಗಿ ಸೇವೆ ಸಲ್ಲಿಸುತ್ತಿದ್ದ ಇವರಿಗೆ ಇನಾಂ ಭೂಮಿಗಳನ್ನು ನೀಡಲಾಗಿತ್ತು. ಗ್ರಾಮಾಡಳಿತದ ಗೌಡ, ಶಾನುಭೋಗರಿಗೆ ಈತ ಕೊಂಡಿಯಾಗಿದ್ದ. ಪಂಚಾಯಿತಿಕಟ್ಟೆ, ಚಾವಡಿ, ದೇವಾಲಯಗಳ ಸಂರಕ್ಷಣೆಯ ಹೊಣೆ ಈತನದಾಗಿತ್ತು. ಸದಾ ಖಡ್ಗಧಾರಿಯಾಗಿದ್ದ ಇವರು ವೃತ್ತಿಯಿಂದ ಯುದ್ಧಕ್ಕಾಗಿ ಹೋರಾಡುವ ಸೈನಿಕರು ಆಗಿದ್ದರು. ವಿವಿಧ ರಾಜರ ಆಸ್ಥಾನಗಳಲ್ಲಿ ತಳವಾರ, ಮಹಾತಳವಾರ, ನಾಡ ತಳವಾರ, ಓಲೆಕಾರ ಹುದ್ದೆಗಳನ್ನು ನಿರ್ವಹಿಸಿಕೊಂಡು ಬಂದಿದ್ದಾರೆ. ನಾಯಕತನ ಮತ್ತು ತಳವಾರಿಕೆಗೆ ಅಂದಿನ ರಾಜರಿಂದ ವಿಶೇಷ ಮನ್ನಣೆ ಇತ್ತು. ನಗರ, ಉಪನಗರ ನಾಡು, ಗ್ರಾಮ, ಹಳ್ಳಿಗಳಲ್ಲಿ ಸ್ಥಳೀಯ ಆಡಳಿತ ಘಟಕಗಳು ಹುಟ್ಟಿಕೊಂಡಿದ್ದವು. ಇದರಲ್ಲಿ ಗೌಡ, ಶಾನುಭೋಗ, ತಳವಾರ, ತೋಟಿ ಎಂಬಂತಹ ಆಡಳಿತದ ವಿವಿಧ ಹುದ್ದೆಗಳನ್ನು ವಿಂಗಡಿಸಲಾಯಿತು.

"ವಿಜಯನಗರ ಕಾಲದಲ್ಲಿದ್ದ ತಳವಾರಿಕೆ ಆನಂತರದಲ್ಲಿ ಮುಂದುವರೆಯಿತಲ್ಲದೇ ತಳವಾರರಿಗೆಲ್ಲಾ ಪಾಳೆಯಗಾರಿಕೆಗೆ ಬಡ್ತಿ ದೊರೆತಿದ್ದು ಸ್ವಾಗತಾರ್ಹ. ಹೀಗೆ ಸುಮಾರು ೭೭ ಪಾಳೆಯಗಾರರು ಮತ್ತು ೯೯ ಸಂಸ್ಥಾನಿಕರಲ್ಲಿ ಮುಕ್ಕಾಲು ಭಾಗ ತಳವಾರಿಕೆಯಿಂದಲೇ ವಿಕಾಸವಾದರು. ತಳವಾರರಿಗೆ ಸ್ವಾಭಿಮಾನ ಮತ್ತು ಸ್ವಾತಂತ್ರವಾಗಿ ಆಳುವ ಅವಕಾಶ ಸಿಕ್ಕಿದ್ದು ಆಗಲೇ. ಹಾಗಾಗಿ ಮಧ್ಯಕಾಲೀನ ನಂತರ ಪರಿವರ್ತನೆಯಲ್ಲಿ ತಳವಾರರು ಜನಪ್ರಿಯಗೊಂಡರು"[೯] ಈ ಮೂಲಕವಾಗಿ ನಾಡಿನ ಜನ, ಧರ್ಮ, ಭಾಷೆ, ಸಂಸ್ಕೃತಿಗಾಗಿ ತಮ್ಮನ್ನು ಅರ್ಪಿಸಿಕೊಂಡರು. ಕರ್ನಾಟಕ

ಕೈಫಿಯತ್ತುಗಳಲ್ಲಿ ತಳವಾರರ ಉಲ್ಲೇಖ ವ್ಯಾಪಕವಾಗಿ ಉಲ್ಲೇಖಗೊಂಡಿದೆ. ವಿಜಯನಗರದ ಅರಸರು ಬೇಡನಾಯಕರಿಗೆ ೧೫ ಗ್ರಾಮಗಳನ್ನು ಕಾವಲು ತಳವಾರಿಕೆಗೆ ಕೊಟ್ಟ ಸಂಗತಿ ತಿಳಿಯುತ್ತದೆ.

ಬ್ರಿಟೀಷರ ಆಳ್ವಿಕೆಯಲ್ಲಿ ತಳವಾರಿಕೆ ಬಹುಮುಖ್ಯವಾದ ಹುದ್ದೆಯಾಗಿತ್ತು. ತಳವಾರರು ಗ್ರಾಮದ ಸುದ್ಧಿ, ಸಮಾಚಾರಗಳನ್ನು ಒಂದು ಕಡೆಯಿಂದ ಮತ್ತೊಂದು ಕಡೆಗೆ ತಿಳಿಸುವವನಾಗಿದ್ದನು. ಅದಕ್ಕಾಗಿ ಈತನನ್ನು ಓಲೇಕಾರನೆಂದೂ ಕರೆಯುತ್ತಿದ್ದರು. ಗ್ರಾಮ ರಕ್ಷಣೆಯಲ್ಲಿ ನಿಪುಣರಾದ ಬೇಡ ನಾಯಕ ಸಮುದಾಯದವರನ್ನೇ ಹೆಚ್ಚಾಗಿ ಈ ಹುದ್ದೆಗೆ ನೇಮಿಸುವ ಪದ್ಧತಿ ಇತ್ತು. ಇದಕ್ಕೆ ಅವರ ದೈಹಿಕ ಬಲಿಷ್ಠತೆ, ಸಾಹಸಿ ಗುಣ ಹಾಗೂ ಪ್ರಾಮಾಣಿಕತೆಯಿಂದಾಗಿ ಈ ಸಮುದಾಯದವರನ್ನೇ ಹೆಚ್ಚಾಗಿ ನೇಮಿಸುತ್ತಿದ್ದರು. ವಂಶಪಾರಂಪರ್ಯದಿಂದ ಬಂದ ಆಯುಧಗಳು ನಿಶಸ್ತ್ರೀಕರಣ ಕಾಯ್ದೆಯಿಂದಾಗಿ ಅವುಗಳನ್ನು ಕಳೆದುಕೊಳ್ಳಬೇಕಾಯಿತು. ಬ್ರಿಟೀಷರು ಇವರಿಗೆ ಹಿತ್ತಾಳೆ ಪಟ್ಟಿ ಮತ್ತು ಲಾಠಿಗಳನ್ನು ನೀಡಿ, ಗ್ರಾಮಕ್ಕೊಬ್ಬ ವಿಲೇಜ್ ಮುನ್ಸಿಸ್(VM)ನನ್ನು ನೇಮಿಸಿ ಅವನ ಹತ್ತಿರ ತಳವಾರ ಕಾರ್ಯನಿರ್ವಹಿಸುವಂತೆ ಮಾಡಿದ್ದರು. ಬ್ರಿಟೀಷರ ವಶದಲ್ಲಿದ್ದ ಭಾರತವು ಕೆಲವು ಸ್ಥಳೀಯ ಆಡಳಿತ ಪದ್ಧತಿಗಳನ್ನು ಜಾರಿಗೆ ತಂದಿತು. ಇದನ್ನು ತಂಜವೂರು ಜಿಲ್ಲಾ ಗ್ಯಾಸೆಟೆರಿಯರ್(೧೯೦೬) ಅಧಿಕೃತಗೊಳಿಸುತ್ತದೆ. "Rom the earliest years of the british occupation of the country, fees were paid to the talaiyari or village watchman. He was probaly survival of a state of society in which kavalgars did not exist and his duties were, it seems, to look ofter the villagers fields and threshing floors, At any rate, he continued in existence even after the abolition of the kaval system."[೧೦] ಇಲ್ಲಿ ತಳವಾರ ಗ್ರಾಮ ರಕ್ಷಕನಾಗಿ, ಕಂದಾಯ ವಸೂಲಿಗಾರನಾಗಿ, ಕಾವಲುಗಾರನಾಗಿ ಇಂತಿಷ್ಟು ಸಂಬಳಕ್ಕೆ ದುಡಿದಿದ್ದಾರೆ. ಹಾಗೂ ಊರಲ್ಲಿ ಆಯಗಾರರಾಗಿ ರೈತರಿಂದ ಧವಸ ಧಾನ್ಯಗಳನ್ನು ಪಡೆದಿದ್ದಾನೆ.

ದೇಶದಲ್ಲಿ ಪೊಲೀಸ್ ಅಧಿನಿಯಮ ಜಾರಿಗೆ ಬಂದ ನಂತರ ಇವರನ್ನು ಸೇವೆಯಿಂದ ಕೈಬಿಡಲಾಯಿತು. ಯಾವಾಗ ಇನ್ಸ್‌ಪೆಕ್ಟರ್ ಅಥವಾ ಜನಲರ್ ಪೊಲೀಸ್ ಅಧಿಕಾರ ವಹಿಸಿಕೊಂಡ ನಂತರ ತಳವಾರರ ಜನಪ್ರಿಯತೆ ಕಡಿಮೆಯಾಗಿ ಇವರ ಅಸ್ತಿತ್ವ ಇಲ್ಲದಂತಾಯಿತು. ಆದರೂ ಮುಂದೆಯೂ ಸಹ ತಳವಾರಿಕೆ ಒಂದು ಪೊಲೀಸ್ ಹುದ್ದೆಯಂತೆ ಗೌಣ ಹುದ್ದೆಯಾಗಿ ಮುಂದುವರೆಯಿತು.

ಸ್ವಾತಂತ್ರ್ಯಪೂರ್ವ ಮತ್ತು ಆನಂತರದವರೆಗೂ ಈ ವ್ಯವಸ್ಥೆ ಹಾಗೆಯೇ ಇತ್ತು. ದೇವರಾಜ ಅರಸು ಅವಧಿಯಲ್ಲಿ(೧೯೭೨-೭೮) ವಂಶಪಾರಂಪರೆಯಾಗಿ ಬಂದ ತಳವಾರಿಕೆಗೆ ಕಡಿವಾಣ ಬಿತ್ತು. ಗ್ರಾಮಾಡಳಿತ ಪದ್ಧತಿ ಕಾಯ್ದೆಯಿಂದಾಗಿ ತಳವಾರಿಕೆಯನ್ನು ಸರ್ಕಾರ ರದ್ದುಪಡಿಸಿತು.

ಇದಕ್ಕೆ ಕಾರಣ ಊಳಿಗಮಾನ್ಯ ವ್ಯವಸ್ಥೆ, ಗುಲಾಮತನ ಮತ್ತು ಶೋಷಣೆಯಿಂದ ತಳವಾರರನ್ನು ರಕ್ಷಿಸುವ ಉದ್ದೇಶವಿರಬಹುದು. ಆದರೆ ಈ ಕಾಯ್ದೆಯಿಂದಾಗಿ ಕೆಲವರು ಇನಾಂ ಭೂಮಿಯನ್ನು ಕಳೆದುಕೊಳ್ಳಬೇಕಾಯಿತು. ಇದರ ಜೊತೆಗೆ ಇವರಿಗೆ ನೀಡಿದ್ದ ಕೆಲವು ವಿಶೇಷ ಅಧಿಕಾರ, ಹಕ್ಕುಗಳನ್ನು ಕಸಿದುಕೊಳ್ಳಲಾಯಿತು. ಅನಂತರದಲ್ಲಿ ವಂಶಪಾರಂಪರ್ಯವಾಗಿ ಬಂದ ವೃತ್ತಿಯನ್ನು ಚಾಕರಿಗೆ ಇಳಿಸಲಾಯಿತು. ಸ್ವಾಭಿಮಾನಿಗಳಾದ ಕೆಲವು ನಾಯಕರು ಈ ವೃತ್ತಿಯನ್ನು ತ್ಯಜಿಸಿದರು. ಅನಂತರ ಇವರ ಸ್ಥಾನಕ್ಕೆ ಬೇರೆ ಬೇರೆ ಜಾತಿಯವರನ್ನು ನೇಮಿಸಲಾಯಿತು.

ತಳವಾರಿಕೆಯನ್ನು ಪ್ರಾಚೀನ ಕಾಲದಿಂದಲೂ ಗಟ್ಟಿಮುಟ್ಟಾದ ಬೇಡ ನಾಯಕ ಸಮುದಾಯದವರೇ ಕೈಗೊಳ್ಳುತ್ತಾ ಬಂದಿದ್ದಾರೆ. ಇತ್ತೀಚಿಗೆ ಈ ವೃತ್ತಿಯಲ್ಲಿ ಬೇರೆ ಬೇರೆ ಸಮುದಾಯದವರೂ ಕಂಡುಬರುತ್ತಾರೆ. ಪ್ರಾಚೀನ ಕಾಲದಲ್ಲಿ ತಳವಾರರು ಮಾಡಬೇಕಾದ ಕಾರ್ಯಗಳು ಅನೇಕ. ಖಡ್ಗ ಹಿಡಿದು, ಕೋಟೆ ಮತ್ತು ದ್ವಾರ ಬಾಗಿಲನ್ನು ಕಾಯುತ್ತಿದ್ದ ತಳವಾರ, ವೈರಿಗಳ, ಕಳ್ಳ ಕಾಕರ ಸುಳಿವು ಹಿಡಿಯುತ್ತಿದ್ದ. ಊರಿನ ಗುಪ್ತಚರ ಮಾಹಿತಿಗಳನ್ನು ಸಂಗ್ರಹಿಸಿ ರಾಜನಿಗೆ ತಿಳಿಸುತ್ತಿದ್ದ. ಹಾಗೇನೇ ನಗರ ಶಾಂತಿ ಕಾಪಾಡಲು ಗಸ್ತು ತಿರುಗುತ್ತಿದ್ದ. ಕಾಲಂತರದಲ್ಲಿ ಕೋಟೆ, ಅರಮನೆ, ರಾಜರು ನಾಶವಾದ ಮೇಲೆ ಗ್ರಾಮಾಡಳಿತಕ್ಕೆ ಸೀಮಿತನಾದ. ಗೌಡ, ಕುಲಕರ್ಣಿಯವರು ತಾಲೂಕು ಕಚೇರಿಗೆ ಕಂದಾಯದ ಹಣ ತುಂಬಲು ತೆರಳುವಾಗ ಅವರಿಗೆ ರಕ್ಷಕನಾಗಿ ಖಡ್ಗ ಹಿಡಿದು ಹೋಗುತ್ತಿದ್ದ. ಅಮಲ್ದಾರನು ಹೇಳಿದ ಕಾರ್ಯಗಳನ್ನು ಮಾಡುವುದು. ಸಮಾಜದ ಮಂಗಳಕಾರ್ಯ, ಜಾತ್ರೆ, ಉತ್ಸವ, ಹಬ್ಬ ಹರಿದಿನಗಳಲ್ಲಿ ಸಕ್ರೀಯವಾಗಿ ಪಾಲ್ಗೊಂಡು ಜನರಿಗೆ ರಕ್ಷಣೆ ಒದಗಿಸುವುದು ಈತನ ಪ್ರಮುಖ ಕಾರ್ಯವಾಗಿತ್ತು. ನಾಟಕ, ಬಯಲಾಟಗಳಲ್ಲಿ ಶಾಂತಿ ಕದಡದಂತೆ ನೋಡಿಕೊಂಡಿರುತ್ತಿದ್ದ. ಜನನ, ಮರಣದ ಸುದ್ದಿಗಳನ್ನು ಗೌಡ-ಕುಲಕರ್ಣಿಗಳಿಗೆ ಚಾಚುತಪ್ಪದೆ ಮುಟ್ಟಿಸುತ್ತಿದ್ದ. ಗೌಡ, ಕುಲಕರ್ಣಿಯರು ಕಂದಾಯ ವಸೂಲಿಗೆ ಹಳ್ಳಿಗೆ ಬಂದರೆ ಅವರ ಜೊತೆಗಿದ್ದು ಸಹಕರಿಸುತ್ತಿದ್ದ. ಕುಲಕರ್ಣಿ ಹೇಳಿದವರನ್ನು ಊರಲ್ಲಿ ತಿರುಗ್ಯಾಡಿ ಕರೆತಂದು ಚಾವಡಿಯ ಮುಂದೆ ನಿಲ್ಲಿಸುತ್ತಿದ್ದ. ಹೀಗೆ ಹತ್ತಾರು ಕಾರ್ಯಗಳಲ್ಲಿ ತಳವಾರ ನಿರತನಾಗಿರುತ್ತಿದ್ದರು ಎಂಬುದು ಕ್ಷೇತ್ರಕಾರ್ಯದಿಂದ ತಿಳಿದುಬರುತ್ತದೆ.

ಊರಿನ ಪ್ರತಿಯೊಂದು ಕಾರ್ಯಕ್ಕೂ ತಳವಾರ ಬೇಕು. ಸದಾ ವಿಲೇಜ್ ಅಕೌಂಟೆಂಟ್, ಜಿಲ್ಲೆದಾರ, ತಹಶೀಲ್ದಾರರ ಹತ್ತಿರ ಇರುತ್ತಿದ್ದ ತಳವಾರ ಅವರೊಂದಿಗೆ ಭೂಮಿ ಸರ್ವೆ ಮಾಡುವುದು, ಸಣ್ಣಪುಟ್ಟ ನ್ಯಾಯ ತೀರ್ಮಾನಗಳನ್ನು ಮಾಡುವುದು, ಜಮೀನು ವಿವಾದಗಳನ್ನು ಬಗೆ ಹರಿಸುವುದು, ದೇವರ ಕಾರ್ಯಗಳಲ್ಲಿ ಭಾಗವಹಿಸುವುದು, ಊರು ಕಾರ್ಯ ಮಾಡಿದಾಗ ಚೆರಗ ಚೆಲ್ಲಲು ತಳವಾರಬೇಕು. ಅಲ್ಲದೇ ವಿಜಯನಗರದ ಹಂಪಿಯಲ್ಲಿ ವಿರೂಪಾಕ್ಷನ ತೇರು ತಳವಾರನಿಲ್ಲದೆ ಸಾಗುವುದಿಲ್ಲ. ಅಲ್ಲಿ ತಳವಾರನಿಗೆ ವಿಶೇಷ ಪ್ರಾತಿನಿಧ್ಯವಿದೆ. ತಳವಾರ ಬಂದು ವಿಶೇಷ ಪೂಜೆ ಸಲ್ಲಿಸಿದ ನಂತರವೇ ತೇರು ಸಾಗುತ್ತದೆ. ಇದು ಹಿಂದಿನಿಂದಲೂ ನಡೆದುಕೊಂಡು

ಬಂದ ಪದ್ಧತಿಯಾಗಿದೆ. ಇದಕ್ಕೆ ಕುರುಹಾಗಿ ಇಂದಿಗೂ ವಿರುಪಾಕ್ಷ ದೇವಸ್ಥಾನದ ಆವರಣದಲ್ಲಿ ಸು. ೩–೪ ಅಡಿ ಎತ್ತರದ ಕಲ್ಲು ಇದೆ. ಇದಕ್ಕೆ ತಳವಾರಪ್ಪನ ಕಲ್ಲು ಎಂದು ಕರೆಯುತ್ತಾರೆ. ಹೀಗೆ ರಾಜ ಮಹಾರಾಜರು ತಮ್ಮ ಪೂಜೆ, ಪುನಸ್ಕಾರಗಳಲ್ಲಿ ತಳವಾರರನ್ನು ಸಕ್ರೀಯವಾಗಿ ಪಾಲ್ಗೊಳ್ಳುವಂತೆ ಮಾಡುತ್ತಿದ್ದರು. ಅದಕ್ಕೆ ಉದಾಹರಣೆ ದುರ್ಗಾಷ್ಟಮಿಯ ದಿವಸ ಪ್ರತಿಗ್ರಾಮದಲ್ಲೂ ಆಯುಧ ಪೂಜೆ, ಬನ್ನಿಮಂಟಪದ ಬಳಿ ತಮ್ಮ ಖಡ್ಗದಿಂದ ಅಂಬು ಹೊಡೆಯುವ ಮೂಲಕ ಬನ್ನಿ ಮುರಿಯುವ ಪವಿತ್ರ ಕಾರ್ಯವನ್ನು ತಳವಾರರು ಇಂದಿಗೂ ಮಾಡಿಕೊಂಡು ಬರುತ್ತಿದ್ದಾರೆ.

ಹಾಸನದ ಅಧಿದೇವತೆಯಾದ ಹಾಸನಾಂಬದೇವಿಯ ಸನ್ನಿಧಿಯಲ್ಲಿ ತಳವಾರ ಮನೆತನದವರಿಂದ ಬಾಳೆಕಂದಿಗೆ ಪೂಜೆ ಕೈಗೊಂಡು, ನಂತರ ತಮ್ಮ ಖಡ್ಗದಿಂದ ಅದನ್ನು ಛೇದ ಮಾಡಿದ ನಂತರವೇ ದೇವಸ್ಥಾನದ ಬಾಗಿಲು ತೆರೆಯುತ್ತಾರೆ. ಈ ಹಾಸನಾಂಬೆಗೆ ಮೂರ್ತಿ ರೂಪವಿಲ್ಲ. ಸಪ್ತಮಾತೃಕೆಯ ತಾಣವಾದ ಇಲ್ಲಿ ವರ್ಷಕ್ಕೆ ಒಮ್ಮೆ ಮಾತ್ರ ದೇವಿಗೆ ಪೂಜೆ ನಡೆಯುತ್ತದೆ. ವರ್ಷದವರೆಗೂ ಹಚ್ಚಿದ ದೀಪ, ಅಲಂಕರಿಸಿದ ಹೂವುಗಳು ಹಾಗೆ ಇರುತ್ತದೆ ಎಂಬ ಪ್ರತೀತಿ ಇದೆ. ಇಂತಹ ದೇವಸ್ಥಾನಕ್ಕೆ ವಿಜಯದಶಮಿಯ ಮೂರನೇ ದಿನದಿಂದ ಬಾಗಿಲು ತೆರೆಯಲು ತಳವಾರಿಕೆಯವರು ಬೇಕು. ನಂತರವೇ ಬಾಗಿಲು ತೆರೆಯಲು ಅವಕಾಶವಿದೆ. ಪ್ರಾಚೀನ ಕಾಲದಲ್ಲಿದ್ದ ಬೇಟೆ ಪದ್ಧತಿಯು ಮುಂದುವರೆದ ಭಾಗದಂತೆ ಪ್ರಾಣಿಯ ಬದಲಾಗಿ ಬಾಳೆಕಂದಿಯನ್ನು ಛೇದಿಸುವ ಕಾರ್ಯ ನಾಯಕರಾದ ತಳವಾರರೇ ಇಂದಿಗೂ ಮಾಡುತ್ತಿದ್ದಾರೆ.

ಗ್ರಾಮಶಾಂತಿ ಮತ್ತು ಊರ ರಕ್ಷಣೆಯ ಭಾರ ಹೊತ್ತ ತಳವಾರರು ತಾನೊಂದು ಗುರುತರ ಕಾರ್ಯ ನಿರ್ವಹಿಸುತ್ತಿದ್ದೇನೆಂಬ ಹೆಮ್ಮೆ, ಅಭಿಮಾನಗಳು ಅಂದಿನ ಕಾಲದಲ್ಲಿತ್ತು. ಗ್ರಾಮಾಡಳಿತ ವ್ಯವಸ್ಥೆಯಲ್ಲಿ ಗೌಡ, ಕುಲಕರ್ಣಿಗಳಿಗಿರುವ ಅಧಿಕಾರಕ್ಕಿಂತ ರಕ್ಷಣೆಗಿರುವ ಮಹತ್ವ ಹೆಚ್ಚೆನಿಸುತ್ತದೆ. ಇಂದಿನ ಪೊಲೀಸ್‌ರಂತೆ ಕಾರ್ಯನಿರ್ವಹಿಸುತ್ತಿದ್ದ ತಳವಾರರು, ಕೋಟೆಗಳು ಉರುಳಿ, ಅಗಸಿಯ ಬಾಗಿಲುಗಳು ಬಿದ್ದ ಮೇಲೆ ಇವರ ಜೀವನವೂ ಹೀನಾಯವಾಯಿತು. ಬರುಬರುತ್ತಾ ಗೌಡನ, ಕುಲಕರ್ಣಿಯ, ಅಮಲದಾರನ ಚಾಕರಿ ಆಳಾಗ ಬೇಕಾಯಿತು. ಅರಸನ ಭರಾಟೆ ಕಡಿಮೆಯಾದ ನಂತರ ಪೊಲೀಸ್ ಕಾರ್ಯವ್ಯಾಪ್ತಿ ವಿಸ್ತರಿಸಿ, ತಳವಾರಿಕೆಗೆ ಹಿಂದೆ ಇದ್ದ ಮಹತ್ವ ಕಡಿಮೆಯಾಯಿತು. ಇಂದು ಈ ವೃತ್ತಿಯವರಲ್ಲಿ ಕೆಲವರು ಕಂದಾಯ ಇಲಾಖೆಯ ಗ್ರಾಮ ಲೆಕ್ಕಾಧಿಕಾರಿ ಹತ್ತಿರ ಗ್ರಾಮ ಸಹಾಯಕ ಎಂಬ ಗೌರವ ಸಂಭಾವನೆಯ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿರುವುದನ್ನು ಕಾಣಬಹುದು.

ಇತ್ತೀಚೆಗೆ ತಳವಾರರಲ್ಲಿ 'ಚಾಕರಿ ತಳವಾರರು' ಎಂಬ ಮತ್ತೊಂದು ವೃತ್ತಿ ಕೆಲವು ಹಳ್ಳಿಗಳಲ್ಲಿ ಹುಟ್ಟಿಕೊಂಡಿದೆ. ಊರಲ್ಲಿ ಯಾವುದೇ ಶುಭ, ಅಶುಭ ಕಾರ್ಯ ನಡೆದರೂ ಅಲ್ಲಿ ಈ

ಚಾಕರಿ ತಳವಾರನಿರುತ್ತಾನೆ. ಊರಲ್ಲಿ ಯಾವುದೇ ಮೇಲ್ವರ್ಗದ ಮದುವೆ ನಡೆದರೂ ಅಲ್ಲಿ ಚಾಕರಿಗಾಗಿ(ಸೇವೆ) ತಳವಾರರನ್ನು ಆಹ್ವಾನಿಸುತ್ತಾರೆ. ಮದುವೆ ನಿಶ್ಚಯವಾದ ದಿನದಿಂದ ಅವರ ಮನೆಯಲ್ಲಿ ಕಾಳು ಹಸನುಮಾಡುವ, ಬೀಸುವ ಕಾರ್ಯ ಮಾಡುತ್ತಾರೆ. ಮದುವೆಯ ಮುನ್ನ ದಿನ ಇವರಿಗೆ ಚಾಜ ನೀಡುತ್ತಾರೆ. ನಂತರದಲ್ಲಿ ಮದುವೆ ಹಂದರಕ್ಕೆ ಮಾವಿನ ತಳಿರು ತೋರಣ ಕಟ್ಟುವ ಕೆಲಸ ಮಾಡುತ್ತಾರೆ. ಊರ ಜನರಿಗೆ ಊಟಕ್ಕೆ ಹೇಳಿ ಬರುವ, ಅಡುಗೆ ಪಾತ್ರೆಗಳನ್ನು ತೊಳೆಯುವ ಕೆಲಸವನ್ನು ಇವರೇ ಮಾಡುತ್ತಾರೆ. ಮದುವೆಯ ಮುನ್ನ ದಿನ ತಳವಾರರ ಮನೆಯ ಹೆಣ್ಣು ಮಕ್ಕಳು ಅದರಲ್ಲೂ ಅವರ ಮನೆಯ ದೇವದಾಸಿಯ ಕೈಯಿಂದ ತಾಳಿಯ ಕರಿಮಣಿ ಪೋಣಿಸುವ ಕಾರ್ಯ ಮಾಡುತ್ತಾರೆ. ಏಕೆಂದರೆ ದೇವದಾಸಿ ನಿತ್ಯ ಸುಮಂಗಲೆ ಅವರಿಂದ ತಾಳಿ ಪೋಣಿಸಿದರೆ ತಮ್ಮ ಮಗಳೂ ದೀರ್ಘಸುಮಂಗಲೆಯಾಗಿರುತ್ತಾಳೆ ಎಂಬ ನಂಬಿಕೆ ಕಾರಣವಾಗಿರಬಹುದು. ಮದುವೆ ಮುಗಿದ ನಂತರ ಇವರಿಗೆ ಸೀರೆ, ಕುಪ್ಪಸ, ಟವೆಲ್, ಪಂಚೆ ನೀಡಿ ಸತ್ಕರಿಸುತ್ತಾರೆ. ಹಾಗೂ ಮದುಮಕ್ಕಳಿಂದ ಕುಸಿ ಪಡೆಯುತ್ತಾರೆ. ಇವರನ್ನು ತಳವಾರರು ಎಂದು ಕರೆದರೂ ಇವರಲ್ಲಿ ಮೂಲದಿಂದ ಈ ವೃತ್ತಿ ಮಾಡಿದವರು ಸಿಗುವುದು ವಿರಳ. ಅಷ್ಟಕ್ಕೂ ಈ ವೃತ್ತಿಯಲ್ಲಿ ಕಬ್ಬಲಿಗ ಅಥವಾ ಬಾರಿಕೇರ, ಗಂಗಮತಸ್ಥ ಸಮುದಾಯದವರು ಕಂಡುಬರುತ್ತಾರೆ.

ಹೀಗೆ ಒಂದು ಕಾಲದಲ್ಲಿ ರಾಜಕೀಯ, ಸಾಮಾಜಿಕವಾಗಿ ಜೀವನದಲ್ಲಿ ಗಣ್ಯಸ್ಥಾನ ಪಡೆದಿದ್ದ ತಳವಾರನ ಸ್ಥಿತಿ ಇಂದು ಶೋಚನೀಯವಾಗಿದೆ. ಬದಲಾದ ಪ್ರಜಾಪ್ರಭುತ್ವದಲ್ಲಿ ತಳವಾರಿಕೆಗೆ ಮಾನ್ಯತೆ ಉಳಿದಿಲ್ಲ. ನಮ್ಮ ರಕ್ಷಣೆಗೆ ಪೊಲೀಸ್ ಇಲಾಖೆ ಇದೆ. ಇಂದಿನ ಯಾಂತ್ರಿಕ ಜೀವನದಲ್ಲಿ ರೈತ ಹಾಗೂ ಗ್ರಾಮದವರು ಈತನನ್ನು ಅವಲಂಬಿಸುತ್ತಿಲ್ಲ. ಇದರಿಂದಾಗಿ ತಳವಾರನಿಗೂ ಕೆಲಸವಿಲ್ಲ. ಗ್ರಾಮದ ಹೋಳಿ, ಮೊಹರಂ, ವಿಜಯದಶಮಿ ಹಬ್ಬಗಳಲ್ಲಿ ಕೈಯಲ್ಲೊಂದು ಕೋಲು ಅಥವಾ ಖಡ್ಗ ಹಿಡಿದು ದೇವರ ಕಾರ್ಯ ನೆರವೇರಿಸಿ ಮೆರವಣಿಗೆ ಮುಂದೆ ಸಾಗುವ ಕಾರ್ಯ ಮಾಡುತ್ತಾನೆ. ಊರಲ್ಲಿ ಗೌರವ್ವ, ಸೀಗವ್ವರನ್ನು ಕೂಡಿಸುವಾಗ ಸಹಕರಿಸುವುದು. ಊರಲ್ಲಿ ಡಂಗುರ ಹೊಡೆಸುವುದು ಮುಂತಾದ ಕೆಲಸಗಳನ್ನು ಮಾಡುತ್ತಿದ್ದಾರೆ. ಹಿಂದೆ ಸರ್ಕಾರ ಕೊಟ್ಟ ಕೃಷಿ ಭೂಮಿ ಇಂದು ಚಿಕ್ಕ ಹಿಡುವಳಿಗಳಾಗಿವೆ. ಇದರಿಂದ ಜೀವನಕ್ಕಾಗಿ ಕೃಷಿ ಕೂಲಿ, ಪಶುಪಾಲನೆ, ಸಣ್ಣ ಅಂಗಡಿಗಳನ್ನು ಹಾಕಿಕೊಂಡು ಜೀವನ ನಡೆಸುತ್ತಿದ್ದಾರೆ. ಇನ್ನು ಕೆಲವರು ನಗರ, ಪಟ್ಟಣಗಳತ್ತ ವಲಸೆ ಹೋಗಿದ್ದಾರೆ. ಮತ್ತೆ ಕೆಲವರು ದುರ್ಗವ್ವ, ಆಂಜನೇಯನ ಪೂಜೆ ಮಾಡುವ ಪೂಜಾರಿಗಳಾಗಿದ್ದಾರೆ. ಹೀಗಾಗಿ ಇವರಲ್ಲಿ ಹಿಂದಿನ ತಳವಾರಿಕೆ ಬಗೆಗಿನ ಆಸಕ್ತಿ ಉಳಿದಿಲ್ಲವೆಂದೇ ಹೇಳಬೇಕಾಗುತ್ತದೆ.

## ೪.೩. ಬೇಡ ನಾಯಕ ತಳವಾರರು

ವ್ಯಕ್ತಿ ತಾನು ಬದುಕಲು ಯಾವುದಾದರೊಂದು ವೃತ್ತಿಯನ್ನು ಕೈಗೊಳ್ಳಬೇಕು. ಪ್ರತಿಯೊಬ್ಬರಲ್ಲಿಯೂ ವೃತ್ತಿಯ ಆಯ್ಕೆಯಲ್ಲಿ ಬೌದ್ಧಿಕ ಮತ್ತು ದೈಹಿಕ ಸಾಮರ್ಥ್ಯವು ಪ್ರಮುಖ ಪಾತ್ರವಹಿಸುತ್ತದೆ. ಜೊತೆಗೆ ಅವರವರ ಆಸಕ್ತಿ-ಶ್ರದ್ಧೆ ಮತ್ತು ನಿಷ್ಠೆಯೂ ಪ್ರಮುಖವಾಗಿರುತ್ತದೆ. ಜೀವನಾವಶ್ಯಕತೆಯ ಪರಿಣಾಮವಾಗಿ ಹುಟ್ಟಿದ ವೃತ್ತಿಗಳು ಒಂದು ಕಡೆಯಾದರೆ, ಸೇವೆ ಮತ್ತು ರಕ್ಷಣಾ ಜವಾಬ್ದಾರಿ ಹೊತ್ತ ವೃತ್ತಿಗಳು ಮತ್ತೊಂದು ಕಡೆ ನಿಲ್ಲುತ್ತವೆ. ಮನುಷ್ಯರ ಸಹ ಜೀವನ ಪದ್ಧತಿ ಹಾಗೂ ಪರಸ್ಪರ ಸಹಾಯ, ಸಹಕಾರದ ವೃತ್ತಿಗಳು ನಮ್ಮ ನಾಡಿನಲ್ಲಿ ಬೆಳೆದು ಬಂದಿವೆ. ಈ ನಿಟ್ಟಿನಲ್ಲಿ 'ತಳವಾರಿಕೆ'ಯ ವೃತ್ತಿಯನ್ನು ಹಲವಾರು ಸಮುದಾಯದವರು ಕೈಗೊಂಡಿರುವುದನ್ನು ಕಾಣಬಹುದಾಗಿದೆ.

ತಳವಾರಿಕೆ ವೃತ್ತಿಯ ಮೂಲವನ್ನು ಕಾಣುವಲ್ಲಿ ಅವರ ಹಿನ್ನಲೆ, ವಂಶ, ಕುಲ, ಪರಂಪರೆಯನ್ನು ಗಮನಿಸಬೇಕಾಗುವುದು ಅವಶ್ಯಕವಾಗಿದೆ. ಪ್ರಾಚೀನಸಾಹಿತ್ಯ, ಶಾಸನ, ಜನಪದ ಸಾಹಿತ್ಯದಲ್ಲಿ ಉಲ್ಲೇಖಗೊಂಡ ಈ ವೃತ್ತಿಯು ಮೂಲದಲ್ಲಿ ಒಂದು ಸಮುದಾಯಕ್ಕೆ ಸಂಬಂಧಪಟ್ಟ ಕಾಲಂತರದಲ್ಲಿ ವಿವಿಧ ಸಮುದಾಯದವರಲ್ಲಿ ವಿಸ್ತರಿಸಿರುವುದನ್ನು ಕಾಣಬಹುದಾಗಿದೆ. ಇದೇನೇ ಇದ್ದರೂ ಒಂದು ವೃತ್ತಿಯಿಂದ ಏರ್ಪಟ್ಟ ಸಮುದಾಯ ಮತ್ತೆ ಕೆಲವು ಉಪಜಾತಿಗಳಾಗಿ, ಒಳಪಂಗಡಗಳಾಗಿ, ಆಚಾರ-ವಿಚಾರ, ಆಚರಣೆಗಳಲ್ಲಿ ಭಿನ್ನತೆಯನ್ನು ಹೊಂದಿರುವುದನ್ನು ಕಾಣಬಹುದಾಗಿದೆ. ತಳವಾರಿಕೆಯನ್ನು ಜನಾಂಗದಿಂದ ಜನಾಂಗಕ್ಕೆ, ರೂಪಿಸಿಕೊಂಡು ಬಂದ ಕುಟುಂಬಗಳು ತಳವಾರಿಕೆಯ ವೃತ್ತಿಯನ್ನು ಕೇವಲ ವೃತ್ತಿಯನ್ನಾಗಿ ನೋಡದೆ, ಒಂದು ಕುಲಜಾತಿಯ ಸಂಕೇತವಾಗಿ ಮಾರ್ಪಟ್ಟರುವುದನ್ನು ಕಾಣಬಹುದಾಗಿದೆ. ಇದರಲ್ಲಿ ಬೇಡ ನಾಯಕ ಮತ್ತು ಇತರೆ ಸಮುದಾಯದ ತಳವಾರರು ಇರುವುದನ್ನು ಕಾಣಬಹುದಾಗಿದೆ.

ತಳವಾರರು ಆದಿಯಲ್ಲಿ ಬೇಡ ಸಮುದಾಯದವರೇ ಆಗಿದ್ದರು. ಭಾರತವು ಬಹುಭಾಷೆ, ಜನಾಂಗ, ಧರ್ಮಗಳಿಂದ ಕೂಡಿದ ವೈವಿಧ್ಯಮಯವಾದ ದೇಶ. ಇಂಥ ಸಂಪ್ರದಾಯ ಶೀಲ ರಾಷ್ಟ್ರದಲ್ಲಿ ತಳವಾರನ ಪಾತ್ರ ಸೌಹಾರ್ದ ಹಾಗೂ ಸಾಮರಸ್ಯದಿಂದ ಕೂಡಿತ್ತು. ಸಾಮಾನ್ಯವಾಗಿ ತಳವಾರನೆಂದರೆ ಒಂದು ಸ್ಥಳದ ರಕ್ಷಣಾ ಅಧಿಕಾರಿ. ಇಂತಹ ಒಂದು ಜವಾಬ್ದಾರಿಯುತ ಹುದ್ದೆ ನಿರ್ವಹಿಸಲು ಬೇಟೆಯ ವೃತ್ತಿಯಲ್ಲಿ ಪರಿಣತಿಯನ್ನು ಹೊಂದಿದ್ದ ಬೇಡ ನಾಯಕರಿಗೆ ವಹಿಸಲಾಗಿತ್ತು. ಗ್ರಾಮದಲ್ಲಿ ಕಳ್ಳತನ ಹಾದರತನ ನಡೆಯದಂತೆ ಕಾವಲು ಕಾಯುತ್ತಿದ್ದ, ಜೊತೆಗೆ ಕಂದಾಯವನ್ನು ವಸೂಲಿ ಮಾಡುತ್ತಿದ್ದ. ಒಂದು ಸ್ಥಳದ ರಕ್ಷಣೆಯ ಜೊತೆ ಜೊತೆಗೆ ಅಲ್ಲಿಯ ಉತ್ಪತ್ತಿಯ ಮೇಲೆ ಹತೋಟಿ ಸಾಧಿಸುವ ಉದ್ದೇಶದಿಂದ ನಾಯಕರನ್ನೇ ತಳವಾರರನ್ನಾಗಿ ನೇಮಿಸಲಾಗಿತ್ತು.

ನಾಯಕರೆಂದರೆ ಧೈರ್ಯ, ಸಾಹಸ, ಪರಾಕ್ರಮಗಳಿಗೆ ಹೆಸರಾದವರು. ಇವರು ಯಾರಿಗೂ ಅಂಜದವರು ಮತ್ತು ಹೆದರದವರು. ಹಗಲು-ರಾತ್ರಿ ಊರನ್ನು ಗಸ್ತು ತಿರುಗುವ, ರಕ್ಷಿಸುವ ಮತ್ತು ಕಾವಲುಗಾರನಾಗಿ ಊರಿನ ಸಮಸ್ತ ಆಗು-ಹೋಗುಗಳ ಪರಿಜ್ಞಾನ ಹೊಂದಿರುತ್ತಿದ್ದ ತಳವಾರ ಊರಿನ ಪ್ರಮುಖ ವ್ಯಕ್ತಿಗಳಲ್ಲಿ ಒಬ್ಬನಾಗಿದ್ದನು. ತನ್ನ ನಿಪುಣ, ಚಾಣಾಕ್ಷತನಗಳಿಂದ ಊರಿನ ದೈನಂದಿನ ಚಟುವಟಿಕೆಗಳನ್ನು ತನ್ನ ಮೇಲಾಧಿಕಾರಿಗಳಿಗೆ ವರದಿ ಮಾಡುವುದು ಮತ್ತು ಮಾಹಿತಿ ಸಂಗ್ರಹಿಸುವ ಗುಪ್ತಚಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದನು.

ಬೇಡ ನಾಯಕ ಸಮುದಾಯದಲ್ಲಿ ಹೆಚ್ಚಾಗಿರುವ ತಳವಾರರು ತಮ್ಮನ್ನು ನಾನಾ ಹೆಸರುಗಳಿಂದ ಗುರುತಿಸಿಕೊಳ್ಳುತ್ತಾರೆ. ವಾಲ್ಮೀಕಿ ಸಂತತಿಯವರು ತಮ್ಮ ಪೂರ್ವಿಕರು ತಮ್ಮನ್ನು ವಾಲ್ಮೀಕಿ ಸಂತತಿಯವರೆಂದು ಕರೆದುಕೊಂಡಿದ್ದನ್ನು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ತಿಳಿದುಬಂದಿದೆ. ಕಾಡುಗಳಲ್ಲಿ ಪಶುಪಾಲನೆಯನ್ನು ಮುಖ್ಯ ವೃತ್ತಿಯನ್ನಾಗಿಸಿಕೊಂಡ ನಾಯಕರು ಈ ವೃತ್ತಿಯನ್ನು ಆಶ್ರಯಿಸಿರುವುದು ಕಂಡುಬರುತ್ತಾರೆ. ಇನ್ನು ಮೂಗ ನಾಯಕನ ಅನುಯಾಯಿಗಳು ತಮ್ಮನ್ನು ನಾಯಕರು ಎಂದು ಕರೆದುಕೊಳ್ಳುತ್ತಾರೆ. ಪಾಳೆಯಗಾರರ ಸಂತತಿಯವರು ತಮ್ಮನ್ನು ಪಾಳೆಯಗಾರರು ಅಥವಾ ದೊರೆಗಳು ಎಂದು ಕರೆದುಕೊಳ್ಳುತ್ತಾರೆ. ಹಾಗೂ ಹಗಲಿರುಳು ಗ್ರಾಮಗಳ ರಕ್ಷಣಾ ಕಾರ್ಯಕ್ಕೆ ನಿಯಮಿಸಲ್ಪಟ್ಟ ಸಂತತಿಯವರು ತಳವಾರರೆಂದು ಕರೆದುಕೊಳ್ಳುತ್ತಾರೆ. ನಾಯಕ ತಳವಾರರನ್ನು ಬೇಡ, ತಳವಾರ, ನಾಯಕ, ವಾಲ್ಮೀಕಿ, ಕಬ್ಬಲಿಗ, ಬೆಸ್ತ ಕೋಳಿ, ಗೊಂಡ, ವಾಲೇಕಾರ, ಸುಭೇದಾರ, ಸಿಪಾಯಿ, ಗುರಿಕಾರ, ತುರಾಯಿ, ಕಟ್ಟಿಮನಿಗಳೆಂಬ ವಿವಿಧ ಹೆಸರುಗಳಿಂದ ಕರೆಯಲಾಗುತ್ತದೆ.

ದಕ್ಷಿಣ ಭಾರತದಲ್ಲಿ ಆಳ್ವಿಕೆ ಮಾಡಿದ ಹಲವಾರು ರಾಜವಂಶಗಳ ಅಧೀನದಲ್ಲಿ ಬೇಟೆಯಾಡಲು ಹಾಗೂ ಸೈನಿಕ ಸೇವೆಯಲ್ಲಿ ಹೆಚ್ಚಾಗಿ ಬೇಡ ನಾಯಕರೇ ಇರುತ್ತಿದ್ದರೆಂಬ ಅಭಿಪ್ರಾಯವಿದೆ. ನಿಜಾಮರ ಕಾಲದಲ್ಲಿ ಜಹಗೀರುಪದ್ಧತಿಯು ಜಾರಿಯಲ್ಲಿದ್ದ ಕಾರಣ ಇವರಿಗೆ ಗ್ರಾಮ ತಳವಾರರಾಗಿಯೂ ಹಾಗೂ ಓಲೆಕಾರರಾಗಿಯೂ ಕೆಲಸ ನಿರ್ವಹಿಸಲು ಅವಕಾಶ ದೊರೆಯಿತೆಂದು ಹೇಳಲಾಗಿದೆ. ತಳವಾರಿಕೆಯಲ್ಲಿ ಶೇ.೯೦ರಷ್ಟು ಜನರು ಬೇಡ ನಾಯಕ ತಳವಾರ ಇದ್ದಾರೆ ಎಂಬುದು ಕ್ಷೇತ್ರಕಾರ್ಯದ ಮಾಹಿತಿಯಿಂದ ತಿಳಿದುಬರುತ್ತದೆ.

ರಾಷ್ಟ್ರಕೂಟರ ಕಾಲದ ತಳವಾರರಿಗೆ ನಾಯಕ ಎಂದು ಉಪನಾಮವಿದ್ದುದನ್ನು ಕಾಣಬಹುದು. ಎರಡನೇಯ ಕೃಷ್ಣ ಅಕಾಲವರ್ಷ ಶುಭತುಂಗನ ಆಳ್ವಿಕೆಯಲ್ಲಿ ರಾಷ್ಟ್ರಕೂಟರ ರಾಜಧಾನಿಯಾದ ಮಾನ್ಯಖೇಡ ನಗರದ 'ತಳಾಜಿ'ನು ಹೊರೆಯಮ ನಾಯಕನೆಂಬುವನು ಎಂದಿದೆ. ಇಲ್ಲಿ ನಾಯಕ ಎಂಬ ಪದವು ಅಂದಿನ ಕಾಲಕ್ಕೆ ಇನ್ನು ಜಾತಿಸೂಚಕವಾಗಿ ಬಳಕೆಯಲ್ಲಿದ್ದಿಲ್ಲ. ಅದು ಕೇವಲ ಗೌರವ ನಾಮಧೇಯ ಮಾತ್ರವಾಗಿದ್ದಿತು ಎಂಬುದನ್ನು ನಾವು ಖಚಿತಪಡಿಸಿಕೊಳ್ಳಬೇಕು.

ಅದಕ್ಕೆ ಆ ಕಾಲದ ಬೇಡನಾಯಕ ಜನಾಂಗದ ತಳಾಜಿರುಗಳ ಹೆಸರುಗಳ ಕೊನೆಯಲ್ಲಿ ನಾಯಕ ಎಂಬ ಉಪನಾಮವಿದೆ. ಉದಾಹರಣೆಗೆ ತಳಾರ/ತಳವಾರ ನಾಯಕಂ ಎಂಬ ಪದ ಪ್ರಯೋಗ ಕಂಡುಬರುತ್ತದೆ. ಇದರಿಂದ ತಳವಾರಿಕೆಯಲ್ಲಿದ್ದ ಬೇಡರಿಗೆ 'ತಳಾಜಿ' ಚಾಕರಿಯನ್ನು ವಂಶಪಾರಂಪರ್ಯವಾಗಿ ಮಾಡಿಕೊಂಡು ಬರುತ್ತಿದ್ದವರಿಗೆ ಗೌರವ ಸೂಚಕವಾಗಿ ನಾಯಕ ಎಂದು ಪರ್ಯಾಯವಾಗಿ ಕರೆದಿರಬಹುದು.

ಪ್ರತಿಯೊಂದು ಊರಲ್ಲಿ ಒಂದು ಚಾವಡಿ ಇರುತ್ತಿತ್ತು. ಇದೇ ತಳವಾರನ ಕಛೇರಿಯಾಗಿತ್ತು. ಗೌಡ, ಕುಲಕರ್ಣಿ, ಪೋಲಿಸ್ ಪಾಟೀಲರು ಕರೆ ಕಳುಹಿಸಿದರೆ ಅಲ್ಲಿಂದ ಹೋಗುತ್ತಿದ್ದರು. ಊರಲ್ಲಿ ಏನಾದರೂ ನ್ಯಾಯ ಪಂಚಾಯ್ತಿ ಇದ್ದರೆ ಜನರನ್ನು ಕರೆದುಕೊಂಡು ಬರುತ್ತಿದ್ದ ತಳವಾರ ಪೋಲಿಸರಂತೆ ಕೆಲಸವನ್ನು ಮಾಡುತ್ತಿದ್ದ. ಈತ ಊರಿನ ಎಲ್ಲಾ ಸಮಾರಂಭಗಳಿಗೂ ಮೇಲ್ವಿಚಾರಕ ಹಾಗೂ ಗೂಢಚಾರಿಯಾಗಿರುತ್ತಿದ್ದ. ಊರಲ್ಲಿ ಯಾವುದೇ ಲಗ್ನ, ಮುಹೂರ್ತ, ಉತ್ಸವ ನಡೆದರೂ ಅಲ್ಲಿ ತಳವಾರನ ಉಪಸ್ಥಿತಿ ಇರಲೇಬೇಕಾಗಿತ್ತು. ಹಾಗೂ ಊರಲ್ಲಿ ಯಾರಾದರೂ ಜಗಳ ಮಾಡಿದರೆ ಇಲ್ಲವೇ ಸತ್ತರೇ ಅವರ ಶವ ಸಂಸ್ಕಾರ ಮಾಡುವವರೆಗೂ ಈತ ಅಲ್ಲೇ ಇರುತ್ತಿದ್ದ ಕೆಲವು ಗಣ್ಯರು ತೀರಿಕೊಂಡರೆ ಅವರ ಶವಯಾತ್ರೆಯ ಮುಂದೆ ಖಡ್ಗ ಹಿಡಿದು ಮುಂದೆ ಸಾಗುತ್ತಿದ್ದ ಪದ್ಧತಿ ಇಂದಿಗೂ ಗದಗ, ಬಾಗಲಕೋಟೆ, ಕೊಪ್ಪಳ ಜಿಲ್ಲೆಯಲ್ಲಿದೆ. ಹೀಗೆ ತಳವಾರರು ಸರಕಾರಿ ಅಧಿಕಾರಿಗಳ ಮಾರ್ಗದರ್ಶಿಗಳಾಗಿದ್ದರು. ಸಕಲ ವ್ಯಾಜ್ಯಗಳು ಹಾಗೂ ಗ್ರಾಮ ರಕ್ಷಣೆಯಲ್ಲಿ ತಳವಾರನಿಗೆ ಆದ್ಯ ಕರ್ತವ್ಯವಾಗಿತ್ತು. ಗ್ರಾಮಕ್ಕೆ ಬರುವ ಅನ್ಯರ ಬಗ್ಗೆ ನಿಗಾ ಇಡುತ್ತಿದ್ದ ತಳವಾರ, ಕಳ್ಳ ಕಾಕರ ಸುಳಿವಿಲ್ಲದಂತೆ ನೋಡಿಕೊಂಡಿರುತ್ತಿದ್ದ. ಇಂತಹ ಹುದ್ದೆಯನ್ನು ಅಲಂಕರಿಸಿದವರಲ್ಲಿ ಶೇ.೯೦ರಷ್ಟು ಜನರು ಬೇಡ ನಾಯಕರೇ ಎಂಬುದು ವಿಶೇಷ. ಉತ್ತರ ಕರ್ನಾಟಕದ ಬಳ್ಳಾರಿ, ಕೊಪ್ಪಳ, ರಾಯಚೂರು, ಗದಗ, ಹಾವೇರಿ, ಬೆಳಗಾವಿ ಜಿಲ್ಲೆಗಳಲ್ಲಿ ನಾಯಕ ತಳವಾರರೇ ಅಧಿಕವಾಗಿದ್ದಾರೆ. ಇನ್ನುಳಿದ ಜಿಲ್ಲೆಗಳಲ್ಲಿ ಪೂರ್ವದಲ್ಲಿ ಈ ವೃತ್ತಿಯನ್ನು ಕೈಗೊಂಡಿದ್ದ ನಾಯಕರೊಂದಿಗೆ ಇಂದು ಬೇರೆ ಬೇರೆ ಸಮುದಾಯವರು ಇರುವುದನ್ನು ಕಾಣಬಹುದಾಗಿದೆ.

### ೪.೪. ಇತರೆ ಸಮುದಾಯದ ತಳವಾರರು

ತಳವಾರಿಕೆ ಎನ್ನುವುದು ವೃತ್ತಿ ಮೂಲವಾಗಿರುವುದರಿಂದ ಇಲ್ಲಿ ಪಂಗಡದ ಪ್ರಶ್ನೆ ಬರುವುದಿಲ್ಲವಾದರೂ, ಈ ವೃತ್ತಿಯಲ್ಲಿ ತೊಡಗಿಕೊಂಡವರ ಬಗೆಗಿನ ಮಾಹಿತಿ ಕಲೆ ಹಾಕುವುದು ಉಪಯುಕ್ತವೆನಿಸುತ್ತದೆ. ಆಯಾ ಜಾತಿಯಲ್ಲಿ ಕೆಲವು ವೃತ್ತಿಗಳ ಆಧಾರದಿಂದ ಉಪಪಂಗಡಗಳು ನಿರ್ಮಾಣಗೊಳ್ಳುತ್ತವೆ. ಉದಾಹರಣೆಗೆ ಬೇಡನಾಯಕರಲ್ಲಿ ತಳವಾರರು, ಕೋಲುಕಾರರು. ಅದೇ ರೀತಿ ಕುರುಬ, ಬಾರಿಕ, ಬೆಸ್ತ ಜನಾಂಗದವರಲ್ಲಿ ವಾಲೇಕಾರರು, ಹಳಬರು, ತಳವಾರರು ಎಂದು ಕರೆಯುವ ವಾಡಿಕೆ ಇದೆ.

ಕ್ರಿ.ಶ.೧೯೬೧ರ ಗ್ರಾಮ ನೌಕರರ ರದ್ಧತಿ ಅಧಿನಿಯಮಕ್ಕೆ ಮುಂಚಿತವಾಗಿ ಬೇಡ ನಾಯಕ ಸಮುದಾಯಕ್ಕೆ ಸೇರಿದ ತಳವಾರರೇ ಶೇ.೬೦ರಷ್ಟು ಇದ್ದರೆಂಬ ಮಾಹಿತಿ ಇದೆ. ಈ ಅಧಿನಿಯಮದಂತೆ ವಂಶಪಾರಂಪರ್ಯವಾಗಿ ಬಂದಿದ್ದ ತಳವಾರಿಕೆ ವೃತ್ತಿಯನ್ನು ಕೆಲವು ನಾಯಕರು ತೊರೆಯ ಬೇಕಾಯಿತು. ಇದಕ್ಕೆ ನಿಶ್ಯಸ್ತ್ರೀಕರಣ ಕಾಯ್ದೆಯೂ ಕಾರಣವಾಯಿತು ಎನ್ನಲಾಗಿದೆ. ಕ್ರಿ.ಶ.೧೯೭೮ರಲ್ಲಿ ಅಂದಿನ ಸರ್ಕಾರ ಜಾರಿಗೆ ತಂದ ಗ್ರಾಮಾಡಳಿತದ ಅನುಕೂಲಕ್ಕಾಗಿ 'ಗ್ರಾಮ ಸಹಾಯಕ' ಎಂಬ ಹುದ್ದೆಯನ್ನು ಸೃಷ್ಟಿಸಲಾಯಿತು. ಇವರು ಗ್ರಾಮ ಲೆಕ್ಕಿಗನ ಮತ್ತು ಕೆಲವು ಅಧಿಕಾರಿಗಳ ಸಹಾಯಕನಾಗಿ, ಸಂದೇಶ ವಾಹಕನಾಗಿ(ಓಲೆಕಾರ), ದಪ್ತರಗಂಟು ಸಾಗಿಸುವ, ಭೂಮಿ ಅಳತೆಯ ಸರಪಣಿ ಮುಂತಾದ ಸಲಕರಣೆಗಳನ್ನು ಸಾಗಿಸುವ, ಗ್ರಾಮ ಸಹಾಯಕ ಎಂಬ ಚಾಕರಿ ಹುದ್ದೆ ಯನ್ನು ಸೃಷ್ಟಿಸಲಾಯಿತು. ಇವರ ಈ ಕಾರ್ಯಕ್ಕೆ ಇಂತಿಷ್ಟು ಮಾಸಿಕ ಭತ್ಯೆ ಹಾಗೂ ಚಾಕರಿಗಾಗಿ ಇನಾಂ ಭೂಮಿಗಳನ್ನು ನೀಡಲಾಯಿತು. ಸ್ವಾಭಿಮಾನಿ ನಾಯಕರು ಇಂತಹ ಚಾಕರಿ ಹುದ್ದೆ ಮಾಡದೆ ಬಿಟ್ಟುಕೊಟ್ಟ ಕಾರಣಕ್ಕಾಗಿ ಇತರೆ ಸಮುದಾಯದವರಾದ ಕುರುಬ, ಬಾರಿಕ, ಮುಸ್ಲಿಂ, ಹರಿಜನ, ತಳವಾರಿಕೆ ವೃತ್ತಿಯನ್ನು ಅವಲಂಬಿಸಬೇಕಾಯಿತು. ಇವರನ್ನು ಸಾಮಾನ್ಯವಾಗಿ ಹಳಬ, ಓಲೆಕಾರ ಎಂದು ಕರೆಯುತ್ತಾರೆ.

ಕಲೆಕ್ಟರ್ ಆಡಳಿತ ಕಾಲದಲ್ಲಿ ಕಂದಾಯ ವಸೂಲಿ ಮಾಡುವ ಸಲುವಾಗಿ ಕೆಲವು ದಕ್ಷ ಪ್ರಮಾಣಿಕ ವ್ಯಕ್ತಿಗಳನ್ನು ಈ ಕಾರ್ಯಕ್ಕಾಗಿ ನೇಮಿಸಿಕೊಂಡರು. ಆಡಳಿತದ ಅನುಕೂಲಕ್ಕೆ ತಕ್ಕಂತೆ ಒಂದೊಂದು ಊರಿಗೆ ಓಲೆಕಾರ, ತಳವಾರ, ಕೋಲುಕಾರ, ನೀರಗಂಟಿ ಎಂಬ ೫-೬ ಜನರನ್ನು ನೇಮಿಸುತ್ತಿದ್ದರು. ರಕ್ಷಣೆಗಾಗಿ ಪೊಲೀಸ್ ವ್ಯವಸ್ಥೆಯನ್ನು ಅಭಿವೃದ್ಧಿಪಡಿಸಿದರು. ಅದರಲ್ಲೂ ಕೆಳವರ್ಗದ ಪಾಳೆಯಗಾರ ವಂಶಸ್ಥರಿಗೆ ತಳವಾರಿಕೆ ನೀಡಿದ್ದರು. ದಣಿಕರಿಗೆ ಮೇಲ್ಮಟ್ಟದ ಗೌಡ, ಪಾಟೀಲ, ಕುಲಕರ್ಣಿ ಹುದ್ದೆಯನ್ನು ನೀಡಿದ್ದರು. ಇದೆಲ್ಲ ಕೇವಲ ಆಡಳಿತದ ಅನುಕೂಲಕ್ಕೆ ತಕ್ಕಂತೆ ವಿಂಗಡಿಸಿಕೊಂಡಿದ್ದರೇ ವಿನಃ ಜನ ಸಾಮಾನ್ಯರ ಹಿತದೃಷ್ಟಿಯಿಂದಲ್ಲ. ಇಂತಹ ಆಡಳಿತ ವ್ಯವಸ್ಥೆಯಲ್ಲಿ ಬರುವ ತಳವಾರ, ವಾಲೇಕಾರ, ಹಳಬ, ಈ ಎಲ್ಲವೂಗಳ ಅರ್ಥ ಒಂದೇ ಅದು ಗ್ರಾಮ ರಕ್ಷಕ, ಸಹಾಯಕ ಎಂಬುದಾಗಿದೆ. ಇವುಗಳನ್ನು ಪ್ರಾದೇಶಿಕವಾಗಿ ಬೇರೆ ಬೇರೆ ಕಡೆ ತಳವಾರರನ್ನು ಬೇರೆ ಬೇರೆ ಹೆಸರುಗಳಿಂದ ಕರೆಯಲಾಗುತ್ತದೆ. ಬಳ್ಳಾರಿ, ಕೊಪ್ಪಳ, ರಾಯಚೂರು, ಗದಗ, ಹಾವೇರಿ, ಪರಿಸರದಲ್ಲಿ ತಳವಾರರು/ಓಲೆಕಾರರು ಎಂದು ಕರೆದರೆ ಬಿಜಾಪುರ, ಬೆಳಗಾಂ, ಬಾಗಲಕೋಟೆ, ಧಾರವಾಡ ಪರಿಸರದಲ್ಲಿ ವಾಲೇಕಾರ, ಹಳಬ, ಹಡದೆಯವರು ಹಿಟ್ಟಿನವರು ಎಂದು ಕರೆಯಲಾಗುತ್ತದೆ.

ನಾಯಕೇತರ ತಳವಾರರನ್ನು ಮುಖ್ಯವಾಗಿ ಓಲೆಕಾರರು ಎಂದು ಕರೆಯಲಾಗುತ್ತದೆ. ಈ 'ಓಲೆಕಾರ' ಎನ್ನುವುದು ಪ್ರಾಚೀನ ಕಾಲದಲ್ಲಿ ಒಂದು ದೊಣ್ಣೆಗೆ ಗೆಜ್ಜೆ ಕಟ್ಟಿಕೊಂಡು ಅದನ್ನು ಕೈಯಲ್ಲಿಡಿದು ಒಂದು ಊರಿನಿಂದ ಮತ್ತೊಂದು ಊರಿಗೆ ಕಾಗದ ಪತ್ರಗಳನ್ನು ಓಡುತ್ತಾ ಹೋಗಿ ಮುಟ್ಟಿಸಬೇಕಿತ್ತು. ಈ ಕೆಲಸಕ್ಕೆ ಗಟ್ಟಿಮುಟ್ಟಾದ, ಸಾಹಸಿ, ಪ್ರಮಾಣಿಕರನ್ನು ನೇಮಿಸಲಾಯಿತು.

ಅದರಲ್ಲಿ ನಾಯಕರೊಂದಿಗೆ ಕುರುಬ, ಮುಸ್ಲಿಂ, ಕಬ್ಬಲಿಗ, ಟೋಕ್ರಿಕೋಳಿ, ಜನಾಂಗದ ಯುವಕರನ್ನು ಸೇರಿಸಿಕೊಳ್ಳಲಾಯಿತು. ಈ ಓಲೆಕಾರಿಕೆ ಮಾಡುತ್ತಿದ್ದವರ ವಂಶಸ್ಥರಿಗೆ ವಾಲೇಕಾರರು ಎಂದು ಕರೆಯುತ್ತಾರೆ.

ಅಂದಿನ ಕಾಲದಲ್ಲಿ ಗ್ರಾಮದಲ್ಲಿ ಪ್ರಮುಖವಾಗಿ ಮೂರು ಜನ ಮುಖಂಡರಿರುತ್ತಿದ್ದರು. ಅದರಲ್ಲಿ ಮಾಲಿಗೌಡ ಊರಿನ ಹೊಲದ ಲೆಕ್ಕ ಪತ್ರಗಳನ್ನು ನೋಡಿಕೊಂಡರೆ ಕುಲಕರ್ಣಿ ಲೆಕ್ಕ ಪತ್ರಗಳನ್ನು ಇಡುತ್ತಿದ್ದ. ಪೊಲೀಸ್ ಪಾಟೀಲ ಊರಿನ ರಕ್ಷಣೆಯ ಜವಾಬ್ದಾರಿಯನ್ನು ಹೊಂದಿದ್ದ. ಈ ಮೂರು ಜನರಿಗೆ ಆಪ್ತ ಸಹಾಯಕನಾಗಿ ತಳವಾರ/ಓಲೆಕಾರ ಕೆಲಸ ಮಾಡುತ್ತಿದ್ದ. ಇಲ್ಲಿ ತಳವಾರ ಕಾರ್ಯಾಂಗವಾದರೆ, ಗೌಡರು–ರಾಜ್ಯಾಂಗ, ಕುಲಕರ್ಣಿ ನ್ಯಾಯಾಂಗ ಎಂಬ ರೀತಿಯಲ್ಲಿ ಊರಲ್ಲಿ ಏನೇ ಕೆಲಸ ಆದರೂ ಗೌಡ, ಕುಲಕರ್ಣಿ ತಳವಾರರ ಉಪಸ್ಥಿತಿ ಮುಖ್ಯವಾಗಿರುತ್ತಿತ್ತು. ಗೌಡ, ಕುಲಕರ್ಣಿಯವರು ತಳವಾರನಿಗೆ ಆಜ್ಞೆ ಮಾಡುತ್ತಿದ್ದರು. ಆತ ಅದನ್ನು ನಡೆಸುತ್ತಿದ್ದ ಊರಲ್ಲಿ ಯಾವುದೇ ಉತ್ಸವ, ಜಾತ್ರೆ, ಹಬ್ಬ–ಹರಿದಿನಗಳು, ಪೂಜೆ ಏನೇ ಇರಲಿ ಡಂಗುರ ಹೊಡೆಸಿ, ಊರಿನ ಜನರನ್ನು ಸೇರಿಸಿ, ಗೌಡರ ಸಂದೇಶಗಳನ್ನು ಊರೂರಿಗೆ ಮುಟ್ಟಿಸುತ್ತಿದ್ದ. ದೇವರ ಉತ್ಸವಕ್ಕೆ ಬೇಕಾದ ಹಣ, ದವಸ ಧಾನ್ಯ ಎತ್ತುವುದು, ಊಟದ ವ್ಯವಸ್ಥೆ ಮಾಡುವುದು, ತಳವಾರನ ಕರ್ತವ್ಯವಾಗಿತ್ತು. ದಿನದಿಂದ ದಿನಕ್ಕೆ ಜನಸಂಖ್ಯೆ ಹೆಚ್ಚಳದಿಂದ ಗ್ರಾಮ ನಗರಗಳಾಗಿದೆ. ನಗರ ದೊಡ್ಡ ಮಹಾನಗರಗಳಾಗಿವೆ. ಇದರಿಂದಾಗಿ ಪ್ರಾಚೀನ ಕಾಲದಲ್ಲಿ ಊರಿಗೆ ಒಬ್ಬನೇ ಗೌಡ, ಕುಲಕರ್ಣಿ, ತಳವಾರ ಇರುವಂತೆ ಕಾಲಾನಂತರದಲ್ಲಿ ಆಡಳಿತದ ಅನುಕೂಲಕ್ಕಾಗಿ, ೫–೬ ಜನ ವಾಲೇಕಾರರನ್ನು ನೇಮಿಸಲಾಯಿತು. ತಳವಾರಿಕೆ ವೃತ್ತಿಯನ್ನವಲಂಬಿಸಿದ ಬೇರೆ ಸಮುದಾಯದವರು ಕೈಗೊಂಡ ವೃತ್ತಿ ಒಂದೇ ಬಗೆಯದಾದರೂ ಅವರಿಗೂ ಮತ್ತು ಬೇಡರಿಗೂ ಮದುವೆ ರೀತಿ ರಿವಾಜುಗಳು, ಜಾತಿ–ಜಾತಿಯೊಂದಿಗಿನ ಕೆಲವು ಸಂಪ್ರದಾಯ, ಆಚರಣೆಗಳು ಬೇರೆ ಬೇರೆಯಾಗಿವೆ. ಇಲ್ಲಿ ಆಯಾ ಪಂಗಡ, ಜಾತಿ, ವ್ಯವಸ್ಥೆಯಲ್ಲೇ ಮದುವೆ ಮುಂಜಿಗಳು ನಡೆಯುತ್ತವೆ.

ಹೀಗೆ, ಬೇಡ ನಾಯಕ ಮತ್ತು ಇತರೆ ಸಮುದಾಯದವರು 'ತಳವಾರಿಕೆ' ವೃತ್ತಿಯನ್ನು ಕೈಗೊಂಡಿರುವುದನ್ನು ಕಾಣಬಹುದು. ಇದೇನೇ ಇದ್ದರೂ ಇವರ ಕಾರ್ಯ ಮತ್ತು ಕರ್ತವ್ಯ ಹಾಗೂ ಸೇವೆಗಳಲ್ಲಿ ಏಕರೂಪತೆ ಇರುವುದು ಸ್ಪಷ್ಟವಾಗಿದೆ.

**ಕೊನೆ ಟಿಪ್ಪಣಿಗಳು**

೧. ವೀರೇಶ ಬಡಿಗೇರ 'ಶಾಸನಗಳಲ್ಲಿ ಆಯಗಾರಿಕೆ', ೨೦೧೦, ಪು.೧.

೨. ಅದೇ, ಪು.೧.

೩. ನರಸಿಂಹಗೌಡ ನಾರಣಾಪುರ, 'ಜಾನಪದ ವಿಹಾರ', ೨೦೦೭, ಪು.೭೮.

೪. ವಿರೂಪಾಕ್ಷಿ ಪೂಜಾರಹಳ್ಳಿ, 'ಕರ್ನಾಟಕದಲ್ಲಿ ತಳವಾರಿಕೆ', ೨೦೦೭, ಪು.೪೬.

೫. ಪಂಚಮುಖಿ ಆರ್.ಎಸ್.(ಸಂ), 'ಕರ್ನಾಟಕ ಇನ್‌ಸ್ಕ್ರಿಷಶನ್ II' ಪು.೧೦-೩೭.

೬. ವೀರೇಶ ಬಡಿಗೇರ, 'ಶಾಸನಗಳಲ್ಲಿ ಆಯಗಾರಿಕೆ', ೨೦೧೦, ಪು.೬

೭. ಪುಟ್ಟಣ್ಣ ಎಂ.ಎಸ್., 'ಚಿತ್ರದುರ್ಗ ಪಾಳೆಯಗಾರರು', ಪು.೩೧.

೮. ವಿರುಪಾಕ್ಷಿ ಪೂಜಾರಹಳ್ಳಿ, 'ಕರ್ನಾಟಕದಲ್ಲಿ ತಳವಾರಿಕೆ', ೨೦೦೭, ಪು.೩೯.

೯. ಅದೇ, ಪು.೪೪.

೧೦. Edgar Thurston K.Rangachari, 'Caste and Tribes of Soutnern India', 1987, VoI-AFS, p.2-3.

# ಅಧ್ಯಾಯ ಐದು

# ತಳವಾರರ ಸಾಮಾಜಿಕ ಮತ್ತು ಕೌಟುಂಬಿಕ ಜೀವನ

## ಅಧ್ಯಾಯ ಐದು

# ತಳವಾರರ ಸಾಮಾಜಿಕ ಮತ್ತು ಕೌಟುಂಬಿಕ ಜೀವನ

ಯಾವುದೇ ಒಂದು ಸಮಾಜ ಮೇಲ್ನೋಟಕ್ಕೆ ಸರಳವಾಗಿ ಕಂಡರೂ ಅಂತರಂಗದಲ್ಲಿ ಅದು ಸಂಕೀರ್ಣ ವ್ಯವಸ್ಥೆಯನ್ನೊಳಗೊಂಡಿರುತ್ತದೆ. ಸ್ವ ರಕ್ಷಣೆ, ಭದ್ರತೆ, ಸುಗಮ ನಿರ್ವಹಣೆ ಮುಂತಾದ ಉದ್ದೇಶಗಳಿಗಾಗಿ ಸಮಾಜದಲ್ಲಿ ಹಲವು ಶ್ರೇಣಿಗಳು ನಿರ್ಮಾಣಗೊಂಡಿರುತ್ತವೆ. ಕರ್ನಾಟಕದ ಸೇವಕ ವರ್ಗದಲ್ಲಿ ಒಂದಾದ ತಳವಾರರು ಶ್ರೇಣೀಕರಣ ವ್ಯವಸ್ಥೆಯಲ್ಲಿ ತೀರ ಕೆಳಗಿನವರಾಗಿ ಕಾಣದೆ, ತೀರ ಮೇಲ್ವರ್ಗಕ್ಕೆ ಒಳಪಡದೆ ಮಧ್ಯಮ ಸ್ಥಾನದಲ್ಲಿದ್ದಾರೆ. ಇತ್ತೀಚಿನ ದಿನಗಳಲ್ಲಿ ಇವರ ಸೇವೆ ಕೆಲವೇ ವರ್ಗಗಳಿಗೆ ಸೀಮಿತವಾಗಿದೆ. ಸಮಾಜದ ಸಕಲ ಸಮುದಾಯಕ್ಕೆ ಇವರ ಸೇವೆಯ ಅಪೇಕ್ಷೆ ಇದೆ. ಇವರ ಈ ಸೇವೆಯು ಸಾಮಾಜಿಕ ಸಂಬಂಧಗಳ ಬೆಸೆಯುವ ಮತ್ತು ಒಂದು ಸಂಸ್ಕೃತಿಯ ಅಂಗವಾಗಿ ಉಳಿಯುವ ಇವರ ಕಾಯಕ ತಳವಾರಿಕೆ ವೃತ್ತಿಯೊಂದಿಗೆ ಪರಂಪರೆಯಿಂದ ಬೆಳೆದು ಬಂದಿದೆ.

## ೫.೧. ಸಾಮಾಜಿಕ ಜೀವನ

ಗ್ರಾಮದಲ್ಲಿ ನಡೆಯುವ ಸಮಸ್ತ ಕಾರ್ಯಗಳಿಗೂ ತಳವಾರನ ಉಪಸ್ಥಿತಿ ಮುಖ್ಯವಾಗಿರುತ್ತದೆ. ಹುಟ್ಟು, ಸಾವು, ಮದುವೆ, ಹಬ್ಬ, ಹರಿದಿನ, ಉತ್ಸವ, ಜಾತ್ರೆಗಳಲ್ಲಿ ತಳವಾರರ ಸೇವೆ ಅಪೂರ್ವವಾದುದು. ಇದಕ್ಕಾಗಿ ಇವರಿಗೆ ವಿಶೇಷ ಆಹ್ವಾನ ಹಾಗೂ ಮಾನ್ಯತೆ ಮತ್ತು ವಿಳ್ಯೆ ನೀಡಲಾಗುತ್ತದೆ. ಸಾಮಾಜಿಕ ಜೀವನದಲ್ಲಿ ತಳವಾರನ ಮುಖ್ಯ ಕರ್ತವ್ಯಗಳೆಂದರೆ ಗ್ರಾಮದಲ್ಲಿ ಶಾಂತಿ, ಸುವ್ಯವಸ್ಥೆಯನ್ನು ಕಾಪಾಡುವುದು, ಗೌಡ ಕುಲಕರ್ಣಿಯರು ಹೇಳಿದ ಕೆಲಸವನ್ನು ಮಾಡುವುದು, ಗ್ರಾಮಕ್ಕೆ ಬರುವ ಅಪರಿಚಿತ ವ್ಯಕ್ತಿಗಳ ಮೇಲೆ ಗಮನಹರಿಸುವುದು, ಜನನ-ಮರಣ ಮಾಹಿತಿಯನ್ನು ಗೌಡ ಇಲ್ಲವೆ ಗ್ರಾಮಾಧಿಕಾರಿಗೆ ತಿಳಿಸುವುದು, ಹಬ್ಬ-ಹರಿದಿನ, ಉತ್ಸವಗಳಲ್ಲಿ ಶಾಂತಿ ಸುವ್ಯವಸ್ಥೆಯನ್ನು ಕಾಪಾಡುವುದು, ಗ್ರಾಮಕ್ಕೆ ಭೇಟಿ ನೀಡುವ ಅಧಿಕಾರಿಗಳಿಗೆ ಊಟೋಪಚಾರ ವ್ಯವಸ್ಥೆ ಹಾಗೂ ಮಾಹಿತಿಯನ್ನು ಒದಗಿಸುವುದು ಮುಂತಾದ ಗುರುತರವಾದ

ಜವಾಬ್ದಾರಿ ಹೊಂದಿದ ತಳವಾರರಿಗೆ ಸಾಮಾಜಿಕವಾಗಿ ವಿಶೇಷ ಮನ್ನಣೆ ಇದೆ. ಸಮಾಜವು ಸಂಘಟನೆಯ ಫಲವಾದುದರಿಂದ ಇಲ್ಲಿ ಅವರ ಸೇವೆ ಅವಶ್ಯಕವೆನಿಸಿದೆ. ಮೇಲು-ಕೀಳೆಂಬ ಭಾವನೆ ಸರಿಯಲ್ಲದಿದ್ದರೂ ಆಯಾ ಕುಲವೃತ್ತಿ ಮತ್ತು ಕಾಯಕದಿಂದ ಇವರ ಮೇಲಿನ ಗೌರವ, ನಂಬಿಕೆಗಳು ವೃದ್ಧಿಸುತ್ತವೆ. ಈ ನಿಟ್ಟಿನಲ್ಲಿ ತಳವಾರರು ತಮ್ಮ ವೃತ್ತಿಯಿಂದ ಜನರ ಸೇವೆಯ ಜೊತೆಗೆ ಸಾಮಾಜಿಕ ಸಂಬಂಧವನ್ನು ಗಾಢವಾಗಿ ಏರ್ಪಡಿಸಿಕೊಂಡಿರುವುದನ್ನು ಕಾಣಬಹುದು.

ಮಾನವನ ಜನನದಿಂದ ಮರಣದವರೆಗಿನ ಬಹುತೇಕ ಶುಭ-ಅಶುಭ ಕಾರ್ಯಗಳನ್ನು ತಳವಾರರು ನಿರ್ವಹಿಸುವ ಪಾತ್ರ ಅಪೂರ್ವವಾದುದು. ಗ್ರಾಮದಲ್ಲಿ ಯಾರಾದರೂ ಸತ್ತರೆ ಆ ವಿಷಯವನ್ನು ಮೊದಲು ತಳವಾರನಿಗೆ, ನಂತರ ಅವನಿಂದ ಊರ ಗೌಡನಿಗೆ ತಿಳಿಯುತ್ತಿತ್ತು. ಅದೇ ರೀತಿ ಜನನ ಮಾಹಿತಿಯೂ ಮೊದಲು ತಳವಾರನಿಗೆ ತಿಳಿಯುತ್ತಿತ್ತು. ಜಾತ್ರೆ, ಉತ್ಸವ ಸಂದರ್ಭದಲ್ಲಿ ಪಂಜು ಹಿಡಿದು, ಕೈಯಲ್ಲೊಂದು ಬಡಿಗೆ ಹಿಡಿದು, ಮೆರವಣಿಗೆಯ ಮುಂದೆ ಸಾಗುವುದು ತಳವಾರನ ಕರ್ತವ್ಯವಾಗಿತ್ತು. ಊರಿನ ದೈವಾಚರಣೆಯಲ್ಲಿ ಅದರಲ್ಲೂ ವಿಶೇಷ ಹಬ್ಬಗಳಲ್ಲಿ ನಡೆಯುವ ಬಲಿಯನ್ನು ತಳವಾರರೇ ಕಡಿಯುತ್ತಿದ್ದರು. ದೇವರಿಗಾಗಿ ಅರ್ಪಿಸಿದ ಬಲಿಯನ್ನು ಇಲ್ಲವೆ ಅದರ ಒಂದು ಪಾಲನ್ನು ತಳವಾರರಿಗೆ ಮೀಸಲಿಡಲಾಗುತ್ತದೆ.

ಗ್ರಾಮದಲ್ಲಿ ಯಾವುದೇ ಮದುವೆ ನಡೆದರೂ ಅಲ್ಲಿ ತಳವಾರನಿರಬೇಕು. ಮದುವೆ ಚಪ್ಪರ ಹಾಕಿದಂದಿನಿಂದ ಮದುಮಗಳು ತವರು ಮನೆಗೆ ಹೊರಡುವವರೆಗೂ ತಳವಾರ ಅವರ ಜೊತೆಗಿದ್ದು ರಕ್ಷಣೆ ಒದಗಿಸುತ್ತಿದ್ದನು. ಜೊತೆಗೆ ಮದುವೆ ಚಪ್ಪರ ಹಾಕಿಸುವುದು, ಹಾಲುಗಂಭ ನೆಡೆಸುವುದು, ಹಂದರಕ್ಕೆ ತಳೀರು ತೋರಣ ಕಟ್ಟುವುದು, ಊರಿನ ಗುರು ಹಿರಿಯರನ್ನು ಆಹ್ವಾನಿಸುವುದು, ನಿಬ್ಬಣ ಹೊರಡಿಸುವುದು ಮುಂತಾದ ಸಾಂಸ್ಕೃತಿಕ ಚಟುವಟಿಕೆಗಳಿಗೆ ತಳವಾರನು ಸಹಕಾರಿಯಾಗಿದ್ದು, ಅವುಗಳ ಸುಗಮ ಆಚರಣೆಗೆ ಸಹಕಾರಿಯಾಗಿರುತ್ತಿದ್ದನು. ಕೆಲವು ಕಡೆ ತಳವಾರರು ಮದುಮಕ್ಕಳ ಜೊತೆಯಲ್ಲೆ ಖಡ್ಗ ಹಿಡಿದು ಅವರಿಗೆ ರಕ್ಷಣೆ ಒದಗಿಸುವುದು ಮತ್ತು ಮೆರವಣಿಗೆಯ ಸಂದರ್ಭದಲ್ಲಿಯೂ ಅವರ ರಕ್ಷಕನಾಗಿ ಮುಂದೆ ಸಾಗುವುದನ್ನು ಇಂದಿಗೂ ಕಾಣಬಹುದಾಗಿದೆ. ಹಾಗೆಯೇ ಊರಿನ ಗಣ್ಯ ವ್ಯಕ್ತಿಗಳು ತೀರಿಕೊಂಡಾಗ ಅವರ ಶವಯಾತ್ರೆಯ ಮುಂದೆಯೂ ಖಡ್ಗ ಹಿಡಿಯುವ ಸಂಪ್ರದಾಯವಿದೆ. ಹೀಗೆ ಸಮಾಜ ಮತ್ತು ಸಂಸ್ಕೃತಿಯೊಂದಿಗೆ ತಳವಾರರು ತಮ್ಮ ವೃತ್ತಿ ಮತ್ತು ಕರ್ತವ್ಯದಿಂದಾಗಿ ಸಮಾಜದೊಂದಿಗೆ ಅವಿನಾಭಾವ ಸಂಬಂಧವನ್ನು ಹೊಂದಿ ಆ ಮೂಲಕ ಒಂದು ಸಮಾಜದ ಅಭಿವೃದ್ಧಿ ಕೆಲಸವನ್ನು ಮಾಡುತ್ತಾನೆ.

### ೫.೨. ಕೌಟುಂಬಿಕ ವ್ಯವಸ್ಥೆ

ಕರ್ನಾಟಕದ ತಳವಾರರಿಗೆ ಹಲವಾರು ಜಾತಿ ಸಮುದಾಯದ ಪಾಲುದಾರಿಕೆ ಇದೆ. ಅದರಲ್ಲಿ ಮುಖ್ಯವಾಗಿ ಬೇಡ ನಾಯಕ ಸಮುದಾಯಕ್ಕೆ ಸೇರಿದ ತಳವಾರರ ಜಾತಿ ಮತ್ತು

ಸಮುದಾಯಕ್ಕೆ ಸಂಬಂಧಪಟ್ಟಂತೆ ಹೇಳುವುದಾದರೆ ಬೇಟೆ ಪದ್ಧತಿಯೊಂದಿಗೆ ವೃತ್ತಿ ಆರಂಭಿಸಿದ ಬೇಡರನ್ನು ವಿವಿಧ ಹೆಸರುಗಳಿಂದ ಕರೆಯುತ್ತಾರೆ. ನಾಯಕ, ನಾಯಕ ಮಕ್ಕಳು, ಬೇಡ, ತಳವಾರ, ವಾಲ್ಮೀಕಿ, ರಾಮೋಶಿ ಪರಿವಾರ ಎಂಬ ಹೆಸರುಗಳಿಂದ ಗುರುತಿಸುತ್ತಾರೆ. ಇವರಲ್ಲಿ ತಳವಾರ ಎಂಬುದು ಮೂಲತಃ 'ತಲಕಾರ' ಎಂಬುದರಿಂದ ಬಂದುದು. ಇದರರ್ಥ ರಕ್ಷಕ, ಕಾವಲುಗಾರ ಎಂಬುದು ಈಗಾಗಲೇ ಖಚಿತವಾಗಿದೆ. ಇಂತಹ ತಳವಾರರಲ್ಲಿ ಹಲವಾರು ಪಂಗಡಗಳಿವೆ. ಬೆಡಗುಗಳಿವೆ ಹಾಗೂ ಜೀವನಾವರ್ತನಾ ಆಚರಣೆಗಳಿವೆ. ಹಿಂದೂ ಸಂಸ್ಕೃತಿಯ ಎಲ್ಲ ಬಗೆಯ ಸಂಪ್ರದಾಯ, ಆಚರಣೆಗಳನ್ನು ತಳವಾರರು ಆಚರಿಸುತ್ತಾರೆ. ಬೇಟೆ ಮತ್ತು ಸೈನಿಕ ವೃತ್ತಿಯಿಂದ ಬಂದಿರುವ ನಾಯಕರು ದೊಡ್ಡ ದೊಡ್ಡ ಸಾಮ್ರಾಜ್ಯಗಳಲ್ಲಿ ತಳವಾರ, ನಾಡತಳವಾರ, ಮಹಾನಾಡ ತಳವಾರರಾಗಿ ಸೇವೆ ಸಲ್ಲಿಸಿದ್ದಾರೆ. ಊರಿನ ಆರಕ್ಷಣೆಯ ಜವಾಬ್ದಾರಿಯನ್ನು ಹೊತ್ತಿದ್ದ ತಳವಾರ ಹಗಲು ರಾತ್ರಿ ಗಸ್ತು ತಿರುಗುತ್ತಿದ್ದರು.

ತಳವಾರರು ಕೌಟುಂಬಿಕ ಜೀವನದ ಕಡಗೆ ಅಷ್ಟಾಗಿ ಗಮನಹರಿಸುತ್ತಿದ್ದಿಲ್ಲವೆಂದೇ ಹೇಳಬಹುದು. ಇದಕ್ಕೆ ಅವರ ವೃತ್ತಿ ನಿಷ್ಠೆ ಮತ್ತು ಕರ್ತವ್ಯ ಕಾರಣವಾಗಿತ್ತು. ಪ್ರಾಚೀನ ಕಾಲದಲ್ಲಿ ತಳವಾರರು ಹೆಚ್ಚಾಗಿ ಅವಿಭಕ್ತ ಕುಟುಂಬಕ್ಕೆ ಹೆಚ್ಚು ಆದ್ಯತೆ ನೀಡಿದ್ದರು. ಪ್ರಸ್ತುತ ದಿನಮಾನದಲ್ಲಿ ಈ ವ್ಯವಸ್ಥೆ ಮಾಯವಾಗುತ್ತಿದೆ. ಎಲ್ಲರೂ ಒಟ್ಟಿಗೆ ವಾಸವಾಗಿರುವುದನ್ನು ಆಶಿಸದೆ ಸ್ವತಂತ್ರ ಜೀವನ ನಡೆಸುವಲ್ಲಿ ಮುಂದಾಗಿದ್ದಾರೆ. ಇಂತಹ ಸಾಮಾಜಿಕ ವ್ಯವಸ್ಥೆಯಲ್ಲಿ ಒಂದು ವೃತ್ತಿಯ ಹಿನ್ನೆಲೆಯೊಂದಿಗೆ ತಳವಾರರು ಜೀವಿಸುತ್ತಾ ಬಂದಿದ್ದಾರೆ.

ಭಾರತೀಯ ಸಮಾಜ ಸಂದರ್ಭದಲ್ಲಿ ಸಾಂಪ್ರದಾಯಿಕವಾಗಿ ಕುಟುಂಬ ಎಂಬ ಪದವೂ ಅವಿಭಕ್ತ ಕುಟುಂಬವನ್ನು ಸೂಚಿಸುತ್ತದೆ. ಅವಿಭಕ್ತ ಕುಟುಂಬವು ಭಾರತೀಯ ಜೀವನಧಾರೆಯ ಒಂದು ಮಹತ್ತರವಾದ ಲಕ್ಷಣವೆಂದು ಪರಿಗಣಿಸಲ್ಪಡುತ್ತದೆ. ಈ ದೃಷ್ಟಿಯಲ್ಲಿ ಭಾರತದಲ್ಲಿ ಅವಿಭಕ್ತ ಕುಟುಂಬವು ಸಾಂಪ್ರದಾಯಿಕ ಜೀವನದ ಉಸಿರೇ ಆಗಿತ್ತು. ಆದರೆ ಔದ್ಯೋಗಿಕರಣ, ನಗರೀಕರಣ, ಸಂಸ್ಕೃತೀಕರಣದ ಪ್ರಭಾವದಿಂದಾಗಿ ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಜೀವನ ಕ್ರಮದಲ್ಲಿ ಸಾಕಷ್ಟು ಬದಲಾವಣೆಗಳಾಗಿವೆ. ವಂಶಪಾರಂಪರ್ಯದಿಂದ ಬಂದ ತಳವಾರಿಕೆ, ಕಾವಲುಗಾರಿಕೆ, ಓಲೆಕಾರಿಕೆಯೂ ಆಯಾ ಆಡಳಿತಪದ್ಧತಿ ಅನುಗುಣವಾಗಿ ವೃತ್ತಿ ಮಾಡಿಕೊಂಡು ಬಂದಿದ್ದಾರೆ. ಅವಿಭಕ್ತ ಕುಟುಂಬ ಹೊಂದಿದ್ದ ಇವರಲ್ಲಿ ತಂದೆ ತೀರಿಕೊಂಡ ಬಳಿಕ ಹಿರಿಯ ಮಗನಿಗೆ ತಳವಾರಿಕೆಯನ್ನು ನೀಡುತ್ತಿದ್ದರು. ಜೀವನಾಧಾರಕ್ಕೆ ಒಂದಿಷ್ಟು ವತನಿ, ಇನಾಂ ಭೂಮಿಗಳನ್ನು ನೀಡಲಾಗಿತ್ತು. ಜೊತೆಗೆ ಆಯಗಾರಿಕೆಯಲ್ಲಿ ಸ್ಥಾನವನ್ನು ಪಡೆದು ಸಮಾಜದ ಒಂದು ಗೌರವಾನ್ವಿತ ಹುದ್ದೆಯನ್ನು ಅಲಂಕರಿಸಿದ್ದರು.

ತಳವಾರರಲ್ಲಿ ಮನೆಯ ಯಜಮಾನನಾಗಿ ಪುರುಷನಿದ್ದರೆ, ಹೆಂಗಸರು ಮನೆಯ ಕೆಲಸ, ಅಡುಗೆ ಮುಂತಾದ ಕಾರ್ಯಕ್ಷೇತ್ರಗಳಲ್ಲಿ ಭಾಗವಹಿಸುತ್ತಿದ್ದರು. ಇವರಲ್ಲಿ ಏಕಪತ್ನಿತ್ವ ವ್ಯವಸ್ಥೆಯಿದೆ.

ಇದರಿಂದ ಒಂದು ಸಂಸ್ಕೃತಿ ಮತ್ತು ಮೌಲ್ಯಗಳನ್ನು ಮುಂದಿನ ಪೀಳಿಗೆಗೂ ಉಳಿಸಿ ಬೆಳೆಸುವ ಕಾರ್ಯವನ್ನು ತಳವಾರರು ಸತತವಾಗಿ ಮಾಡಿಕೊಂಡು ಬಂದಿದ್ದಾರೆ. ತಳವಾರರು ಕೋಟೆ ಬಾಗಿಲು ಇಲ್ಲವೆ ಎತ್ತರದ ಪ್ರದೇಶದಲ್ಲಿ ಮನೆಗಳನ್ನು ಹೊಂದಿರುತ್ತಿದ್ದರು. ಇವರದು ಪಿತೃಪ್ರಧಾನ ಕುಟುಂಬ. ತಂದೆಯ ನಂತರ ಮನೆಯ ಹಿರಿಯ ಮಗನಿಗೆ ಮನೆಯ ಯಜಮಾನಿಕೆ ನೀಡ ಲಾಗುತ್ತಿತ್ತು. ರಕ್ತ ಸಂಬಂಧಗಳಲ್ಲಿ ಹೆಚ್ಚಿನ ವಿವಾಹವಾಗಿರುವುದು ಕಂಡುಬರುತ್ತದೆ. ತಳವಾರರು ಗ್ರಾಮದ ರಕ್ಷಣೆ ಮತ್ತು ಉಸ್ತುವಾರಿಯನ್ನು ಹೊಂದಿದ್ದರಿಂದ ಇವರು ತಮ್ಮ ವೈಯಕ್ತಿಕ ಕುಟುಂಬಕ್ಕೆ ಅಷ್ಟಾಗಿ ಮಾನ್ಯತೆ ನೀಡದಿರುವುದನ್ನು ಕಾಣಬಹುದು. ಮನೆಯ ಆಗು ಹೋಗುಗಳಲ್ಲಿ ತಳವಾರನ ಹೆಂಡತಿ ಮತ್ತು ಮಕ್ಕಳ ಪಾತ್ರವೇ ವಿಶೇಷವಾಗಿತ್ತು. ಒಟ್ಟಿನಲ್ಲಿ ಊರಿನ ಸಮಸ್ತ ಜನ ಸಮುದಾಯದೊಂದಿಗೆ ಅವಿನಾಭಾವ ಸಂಬಂಧ ಹೊಂದಿ, ಎಲ್ಲರೊಂದಿಗೆ ಕೂಡಿ ಬಾಳುವ ಕುಟುಂಬ ತಳವಾರನದಾಗಿತ್ತು.

### ೫.೩. ಆರ್ಥಿಕ ವ್ಯವಸ್ಥೆ

ಸ್ವಾತಂತ್ರ್ಯನಂತರದ ಭಾರತದ ಆರ್ಥಿಕ ಪರಿಸ್ಥಿತಿಯಲ್ಲಿ ಗಂಭೀರ ಬದಲಾವಣೆಯಾಯಿತು. ಅಂದಿನಿಂದ ಇಂದಿನವರೆಗೆ ವಿಜ್ಞಾನ, ತಂತ್ರಜ್ಞಾನ, ಕೈಗಾರಿಕಾ ಕ್ರಾಂತಿಯಿಂದಾಗಿ ಜಗತ್ತಿನ ಆರ್ಥಿಕ ವ್ಯವಸ್ಥೆ ವಿಶಾಲವಾಗಿದೆ. ತಂತ್ರಜ್ಞಾನ ಮತ್ತು ವಿಜ್ಞಾನದ ಬೆಳವಣಿಗೆಯ ನಡುವೆಯೂ ಭಾರತದ ಹಳ್ಳಿಗಳು ಇಂದಿಗೂ ಬಡತನದಿಂದ ಬಳಲುತ್ತಿವೆ. ಇದಕ್ಕೆ ಗ್ರಾಮೀಣ ಅರ್ಥವ್ಯವಸ್ಥೆಯು ಸಂಪೂರ್ಣ ಹಳೆಯ ಪದ್ಧತಿ ಮತ್ತು ದೇಸಿಯ ಹಿನ್ನೆಲೆಯ ಮಾರ್ಗದಲ್ಲಿಯೇ ಸಾಗುತ್ತಿರುವುದು ಕಾರಣವಾಗಿರಬಹುದು.

ಕರ್ನಾಟಕದ ಸಾಂಸ್ಕೃತಿಕ ಪರಿಸರದಲ್ಲಿ ತಳವಾರರು ತಮ್ಮ ವೃತ್ತಿಕಾಯಕದ ಮೂಲಕ ಭವ್ಯ ಪರಂಪರೆಯನ್ನು ಹೊಂದಿದ್ದಾರೆ. ತಳವಾರರು ಕರ್ನಾಟಕದ ಬಹುತೇಕ ಎಲ್ಲಾ ಜಿಲ್ಲೆಗಳಲ್ಲಿ ವಾಸವಾಗಿದ್ದಾರೆ. ಇವರ ವೃತ್ತಿ ಮೊದಲು ಒಂದು ಗೌರವಯುತವಾದ ಹುದ್ದೆಯಾಗಿತ್ತು. ಒಂದು ಕಾಲದಲ್ಲಿ ಆಡಳಿತಗಾರರಾಗಿದ್ದ ಇವರು ಇಂದು ಆರ್ಥಿಕವಾಗಿ, ಸಾಮಾಜಿಕವಾಗಿ ತೀರ ಕೆಳಮಟ್ಟಕ್ಕೆ ತಳ್ಳಲ್ಪಟ್ಟಿದ್ದಾರೆ. ಪ್ರಾಚೀನ ಕಾಲದಿಂದ ತಮ್ಮ ವೃತ್ತಿ ಸೇವೆಯ ಪ್ರತಿಫಲವಾಗಿ 'ಆಯಗಾರ' ವ್ಯವಸ್ಥೆಯಡಿ ದವಸ, ಧಾನ್ಯ ಮತ್ತು ಇನ್ನಿತರೆ ಸೌಲಭ್ಯಗಳನ್ನು ಪಡೆದುಕೊಂಡಿದ್ದರು. ಆದರೆ ಈ ವ್ಯವಸ್ಥೆ ಇಂದು ಮರೆಮಾಚಿದೆ.

ತಳವಾರರು ಹೆಚ್ಚಾಗಿ ಗ್ರಾಮೀಣ ಪ್ರದೇಶದಲ್ಲಿಯೇ ಇದ್ದಾರೆ. ಈಗ ಇವರ ಆರ್ಥಿಕ ಪರಿಸ್ಥಿತಿ ಮುಂಚಿನಂತಿಲ್ಲ. ಈ ಹಿಂದೆ ಇವರ ಸೇವೆಗಾಗಿ ಇನಾಂ ಭೂಮಿಗಳಿದ್ದವು. ರಾಜ ಮಹಾರಾಜರಿಂದ ದೇಣಿಗೆ, ಆಯ, ದವಸ, ಧಾನ್ಯಗಳನ್ನು ಪಡೆದುಕೊಂಡಿದ್ದರು. ಇಂತಹ ಒಂದು ಸೌಲಭ್ಯಗಳನ್ನು ಪಡೆದಿದ್ದ ತಳವಾರರು ಬರಬರುತ್ತಾ ಆರ್ಥಿಕವಾಗಿ ದುರ್ಬಲರಾಗಿದ್ದಾರೆ.

ಕಾರಣ ಇವರ ದುಡಿಮೆಗೆ ತಕ್ಕ ಪ್ರತಿಫಲ ಸಿಗದೇ ಇರುವುದು. ಇವರಿಗೆ ಈ ಹಿಂದೆ ನೀಡಿದ್ದ ಇನಾಂ ಭೂಮಿಗಳೆಲ್ಲಾ ಮಳೆ ಆಶ್ರಿತ ಭೂಮಿಗಳಾಗಿದ್ದು, ಅವುಗಳು ಜನಸಂಖ್ಯೆ ಬೆಳೆದಂತೆ ಚಿಕ್ಕ ಚಿಕ್ಕ ಹಿಡುವಳಿಗಳಾಗಿವೆ ಹಾಗೂ ಅದರಿಂದ ಬರುವ ಆದಾಯ ಕೂಡ ಅಷ್ಟಕಷ್ಟೆಯಾಗಿದೆ. ಈ ಕಾರಣದಿಂದ ತಳವಾರರು ಆಯಗಾರಿಕೆ, ಚಾಕರಿಕೆಯಂತಹ ವೃತ್ತಿಯನ್ನು ಅವಲಂಬಿಸಿರುವುದು ಅನಿವಾರ್ಯವಾಗಿದೆ.

ತಳವಾರರಿಗೆ ಹಿಂದೆ ಅವರ ಸೇವೆಯ ಪ್ರತಿಫಲವಾಗಿ ವತನಿ(ಇನಾಂ) ಭೂಮಿಗಳನ್ನು ನೀಡಲಾಗಿತ್ತು. ಇವುಗಳಿಗೆ ತೆರಿಗೆ ವಿನಾಯಿತಿಯನ್ನು ನೀಡಲಾಗಿತ್ತು. ಆದರೆ ಕ್ರಿ.ಶ.೧೯೬೬ರ ನಂತರ ಅಂದಿನ ಸರ್ಕಾರ ಇವುಗಳಿಗೆ ಪಟ್ಟು(ತೆರಿಗೆ) ತುಂಬಿಸಿಕೊಂಡು ಇನಾಂ ಭೂಮಿಗಳನ್ನು ರೈತವಾರಿ ಭೂಮಿಗಳಾಗಿ ಪರಿವರ್ತಿಸಲಾಯಿತು. ಈ ಭೂಮಿಗಳೇ ಇವರ ಪ್ರಮುಖ ಆದಾಯದ ಕೇಂದ್ರಗಳಾಗಿದ್ದವು. ಮಳೆಯಾಶ್ರಿತ ಭೂಮಿಗಳಾಗಿದ್ದ ಇವುಗಳಲ್ಲಿ ಜೋಳ, ರಾಗಿ, ಸಜ್ಜೆ, ಹುರುಳಿ, ನವಣೆ, ಮೆಕ್ಕೆಜೋಳದಂತಹ ಬೆಳೆಗಳನ್ನು ಬೆಳೆದು ತಮ್ಮ ಉಪಜೀವನ ನಿರ್ವಹಿಸುತ್ತಿದ್ದರು. ಬರಬರುತ್ತಾ ಇದು ಕಠಿಣವಾಗಿ ಪಶುಪಾಲನೆಯಲ್ಲಿ ತೊಡಗಿಕೊಂಡಿದ್ದಾರೆ.

ಬ್ರಿಟಿಷರು ಭಾರತಕ್ಕೆ ಬಂದು ಇಲ್ಲಿನ ಜನರ ಶಿಕ್ಷಣಕ್ಕಾಗಿ ಹಲವಾರು ಸುಧಾರಣೆಗಳನ್ನು ಜಾರಿಗೆ ತಂದರೂ ತಳವಾರರು ಮಾತ್ರ ಈ ಶಿಕ್ಷಣದಿಂದ ವಂಚಿತರಾಗಿದ್ದಾರೆ. ಇದರಿಂದ ಇವರು ಸರ್ಕಾರದ ಉದ್ಯೋಗ, ಸೌಲಭ್ಯಗಳಿಂದ ವಂಚಿತರಾಗಿ, ಪಾರಂಪರಿಕ ವೃತ್ತಿಯ ಘನತೆಯನ್ನು ಕಳೆದುಕೊಂಡರು. ಆನಂತರದಲ್ಲಿ ಗೌಡ, ಕುಲಕರ್ಣಿಯರ ಸಹಾಯಕರಾಗಿ, ಸೇವಕನಾಗಿ ದುಡಿಯಬೇಕಾದ ಅನಿವಾರ್ಯತೆ ಒದಗಿ ಬಂದಿತು. ೧೯೭೮ರಲ್ಲಿ ಗ್ರಾಮ ಸಹಾಯಕ ಎಂಬ ಹುದ್ದೆಯನ್ನು ಸರ್ಕಾರ ಸೃಷ್ಟಿಸಿ ಕಂದಾಯ ಇಲಾಖೆಯು ಗ್ರಾಮ ಲೆಕ್ಕಾಧಿಕಾರಿಯ ಸಹಾಯಕನಾಗಿ ಗೌರವ ಧನದ ಮೇಲೆ ಸೇವೆ ಸಲ್ಲಿಸಲು ತಳವಾರರನ್ನು ನೇಮಿಸಲಾಯಿತು. ಇವರ ಈ ಹುದ್ದೆ ಇಂದಿಗೂ ತಾತ್ಕಾಲಿಕವಾಗಿದ್ದು ಯಾವುದೇ ಸರ್ಕಾರಿ ಸೌಲಭ್ಯಗಳಿಲ್ಲದೆ ವಂಚಿತರಾಗಿದ್ದಾರೆ.

ಸಾಂಪ್ರದಾಯಿಕ ವೃತ್ತಿಯೊಂದಿಗೆ ಕೃಷಿ, ಕೂಲಿನಾಲಿ ಮಾಡಿಕೊಂಡಿದ್ದ ತಳವಾರರು ಇಂದು ಬಡತನ, ದಾರಿದ್ರ, ಶೋಷಣೆಯಿಂದ ಬಳಲುತ್ತಿದ್ದಾರೆ. ಅನಿಷ್ಠ ಪದ್ಧತಿ, ದುಶ್ಚಟಗಳಿಗೆ ಬಲಿಯಾದ ಇವರು ಇರುವ ಆಸ್ತಿಪಾಸ್ತಿಗಳನ್ನು ಮಾರಿಕೊಂಡಿದ್ದಾರೆ. ಮತ್ತೆ ಕೆಲವರು ನಗರ ಪಟ್ಟಣಗಳಿಗೆ ವಲಸೆ ಹೋಗಿದ್ದಾರೆ. ಈ ಎಲ್ಲಾ ಕಾರಣದಿಂದ ತಳವಾರರು ನಿಶ್ಚಿತ ಪ್ರಮಾಣದಲ್ಲಿ ಆಹಾರ, ವಸತಿ, ಶಿಕ್ಷಣ, ಆರೋಗ್ಯ ಮುಂತಾದ ಮೂಲಭೂತ ಸೌಲಭ್ಯಗಳನ್ನು ಹೊಂದಿರದೆ ಕಡುಬಡತನವನ್ನು ಅನುಭವಿಸುತ್ತಿದ್ದಾರೆ. ಈ ಕಾರಣದಿಂದ ಇವರ ವೃತ್ತಿ ಸಾಮಾಜಿಕವಾಗಿ ಪ್ರಬಲವಾದರೂ, ಆರ್ಥಿಕವಾಗಿ ಉತ್ತಮವಾಗಿಲ್ಲವೆಂದೇ ಹೇಳಬಹುದು.

### ೫.೪. ಕುಲಗೋತ್ರಗಳು

ಒಂದು ಜನಾಂಗ ಒಂದೇ ಭೌಗೋಳಿಕ ಪರಿಸರದಲ್ಲಿ ಒಟ್ಟಿಗೆ ಕೂಡಿ ಇದ್ದಾಗ ಅವರಲ್ಲಿ ವೈವಿಧ್ಯತೆಗಳು ಉಂಟಾಗುವುದಿಲ್ಲ. ಭೌಗೋಳಿಕ, ಸಾಮಾಜಿಕ, ಆರ್ಥಿಕ ಕಾರಣದಿಂದಾಗಿ ಒಂದೇ ಜನಾಂಗದ ಬೇರೆ ಬೇರೆ ಗುಂಪುಗಳು ವಿಭಿನ್ನ ಪರಿಸರದಲ್ಲಿ ವಾಸಿಸಲು ಪ್ರಾರಂಭಿಸಿದಾಗ ಭಿನ್ನತೆಗಳು ಗೋಚರಿಸುತ್ತವೆ. ಕಾಲಾಂತರದಲ್ಲಿ ಈ ಭಿನ್ನತೆಗಳ ಪರಿಣಾಮವಾಗಿ ಅವೇ ಉಪ ಪಂಗಡಗಳೆನಿಸುತ್ತವೆ. ಹೊರನೋಟಕ್ಕೆ ಈ ಉಪಪಂಗಡಗಳಲ್ಲಿ ಭಿನ್ನತೆಗಳಿದ್ದು, ಅವು ಮೂಲತಃ ಕೆಲವು ಸಾಮಾನ್ಯ ಅಂಶಗಳನ್ನು ಒಳಗೊಂಡಿರುತ್ತದೆ. ಬೇಡ-ನಾಯಕ ತಳವಾರರಲ್ಲಿ ಈ ಕೆಳಗಿನ ಉಪ ಪಂಗಡಗಳನ್ನು ಗುರುತಿಸಬಹುದು.

ಬೇಡ ನಾಯಕ ತಳವಾರರ ಮೂಲವನ್ನು ಕೆದಕಿದಾಗ ಅವರು ವಾಲ್ಮೀಕಿ, ನಾಯಕ, ತಳವಾರ, ಪರಿವಾರ, ನಾಯಕವಾಡಿ, ಬೇರದ್, ವೇದನ್, ಬೊಯಾ, ರಾಮೋಶಿ ಎಂಬ ವಿವಿಧ ಉಪ ಪಂಗಡಗಳಿಂದ ಕೂಡಿದ ವಾಲ್ಮೀಕಿ ನಾಯಕ ಸಮುದಾಯಕ್ಕೆ ಸೇರಿದವರಾಗಿದ್ದಾರೆ. ಇವರು ಪಂಜಾಬಿನ ಗಿರಿಶಿಖರಗಳಿಂದ ಕರ್ನಾಟಕದೆಡೆ ಬಂದವರೆಂದು, ಇವರಿಗೆ ಬಿಲ್ಲರು, ನಾಯಕರು, ಬೇರಾದ್ ಎಂದು ಕರೆಯುತ್ತಿದ್ದರೆಂದು ಕೆಲವು ವಿದ್ವಾಂಸರ ಅಭಿಪ್ರಾಯವಿದೆ. ಅದರಂತೆ ಮಧ್ಯ ಪ್ರದೇಶದಲ್ಲಿರುವ ನಾಯಕರು ಮತ್ತು ಮುಂಬೈ, ಸಿಂಧೂ ದೇಶ, ಗುಜರಾತ್, ಮಹಾರಾಷ್ಟ್ರಗಳಲ್ಲಿರುವ ರಾಮೋಶಿಗಳು ಹಾಗೂ ಡೆಕ್ಕನ್ ಭೂಮಿ, ಉತ್ತರ ಇಂಡಿಯಾದಲ್ಲಿರುವ ಬಾಲಮಿಕಿ ನಾಯಕರು ಒಂದೇಯಾಗಿದ್ದರೆಂಬುದು ಹಲವರ ಸ್ಪಷ್ಟ ವಿಚಾರವಾಗಿದೆ. ಬೇಡರಲ್ಲಿ ಕವಲೊಡೆದ ಅನೇಕ ಪಂಗಡಗಳು ಮುಂದೆ ಬಹು ಭಾವಪೂರ್ಣವಾಗಿ ಬೆಳೆದವು. ಇವು ಬೇಡರ ವಿಕಾಸದ ಪ್ರಮುಖ ಘಟ್ಟವೆಂದೇ ಗುರುತಿಸಬೇಕಾಗುತ್ತದೆ. ಅಂಥವುಗಳಲ್ಲಿ ವಾಲ್ಮೀಕಿ, ತಳವಾರ, ಪರಿವಾರ ಮುಂತಾದವು ಮುಖ್ಯವಾಗಿವೆ. ಈ ಎಲ್ಲಾ ಉಪಪಂಗಡಗಳಲ್ಲಿ ಅವರದೇ ಆದ ಗೋತ್ರ, ಬೆಡಗುಗಳಿದ್ದು, ಅವುಗಳಿಂದಲೇ ಅವರ ಮೂಲವನ್ನು ಹೇಳುತ್ತಾರೆ.

ಆರಂಭದಲ್ಲಿ ತಳವಾರ ಗ್ರಾಮರಕ್ಷಕನಾಗಿ, ಕಾವಲುಗಾರನಾಗಿ, ನಾಡ ತಳವಾರನಾಗಿ ಸೇವೆ ಸಲ್ಲಿಸಿದ ಉದಾಹರಣೆಗಳಿವೆ. ತದನಂತರದಲ್ಲಿ ಸುದ್ದಿ ಮತ್ತು ಪತ್ರಗಳನ್ನು ತಲುಪಿಸುವ ಓಲೆಕಾರ ವೃತ್ತಿಗೆ ಸೀಮಿತವಾಗುತ್ತ ಬಂದಿದ್ದಾನೆ. ಆಳರಸರ ಮಾನಪಾನ ಕಾಪಾಡುವುದರೊಂದಿಗೆ ಅವರ ಅಂಗ ರಕ್ಷಕನಾಗಿ ದುಡಿದಿದ್ದಾನೆ. ನಾಡಿನ ಹಸು, ಕುದುರೆ, ಧನ-ಸಂಪತ್ತನ್ನು ಶತ್ರುಗಳಿಂದ ರಕ್ಷಿಸಿದ್ದಾರೆ. ಇವರ ಸ್ವಾಮಿನಿಷ್ಠೆ ಮತ್ತು ಕರ್ತವ್ಯಗಳನ್ನು ಗಮನಿಸಿ ಇವರಿಗೆ ರಾಯ, ವೀರ, ಗಾವುಂಡ, ನಾಯಕ, ಡಣ್ಣಾಯಕ ಇತ್ಯಾದಿ ಬಿರುದುಗಳನ್ನು ನೀಡಿ ಗೌರವಿಸಲಾಗಿದೆ. ಹೀಗೆ ತಳವಾರರು ವೀರ, ಶೌರ್ಯ, ಪರಾಕ್ರಮ ಲಕ್ಷಣಗಳಿಂದ ಪ್ರಸಿದ್ಧರಾಗಿ ಸಾವಿರಾರು ವರ್ಷಗಳಿಂದ ಬೇಟೆ-ಪಶುಪಾಲನೆಯೊಂದಿಗೆ ತಳವಾರರಾಗಿ ಸೈನಿಕರಾಗಿ ದುಡಿದಿದ್ದಾರೆ.

## ೫.೫. ಬೆಡಗುಗಳು

ಒಂದು ಜನಾಂಗದಲ್ಲಿರುವ ವಿಶಿಷ್ಟ ಉಪಘಟಕಗಳಿಗೆ ಬೆಡಗುಗಳೆನ್ನುವರು. ಈ ಬೆಡಗುಗಳ ಹುಟ್ಟಿಗೆ ನಿರ್ದಿಷ್ಟ ಕಾರಣ ಹೇಳಲು ಸಾಧ್ಯವಿಲ್ಲ. ಒಂದೇ ಜನಾಂಗಕ್ಕೆ ಸೇರಿದ ಜನಸಮುದಾಯವು ಸಂಸ್ಕೃತಿ, ಭೌಗೋಳಿಕ ಪರಿಸ್ಥಿತಿಯಿಂದಾಗಿ ಬೇರೆ ಬೇರೆ ಕಡೆ ವಾಸಿಸಲು ಪ್ರಾರಂಭಿಸಿದಾಗ ಅಂಥ ಒಂದೊಂದು ಗುಂಪು ಒಂದೊಂದು ಬೆಡಗು ಆಗಿರಬೇಕು. ತಳವಾರಿಕೆಯಲ್ಲಿ ಬೇರೆ ಬೇರೆ ಸಮುದಾಯದವರಿದ್ದರೂ ಬೇಡ ನಾಯಕರು ಅಧಿಕ ಸಂಖ್ಯೆಯಲ್ಲಿರುವುದರಿಂದ ಇವರ ಬೆಡಗುಗಳನ್ನು ಕುರಿತು ಚರ್ಚಿಸಲಾಗಿದೆ.

ಬೇಡ ನಾಯಕರಲ್ಲಿ ಊರನಾಯಕ, ಮ್ಯಾಸನಾಯಕ ಎಂಬ ಎರಡು ಪ್ರಮುಖ ಪಂಗಡಗಳಿವೆ. ಅದರಲ್ಲಿ ಊರನಾಯಕರಲ್ಲಿ ಕಂಡುಬರುವ ತಳವಾರರ ಬೆಡಗುಗಳು ಪ್ರಕೃತಿ, ಪ್ರಾಣಿ, ಬಿರುದು, ಮರಣ, ಗೋಪಾಲಕ, ಗುಣಶೀಲ, ಸೂರ್ಯ, ಚಂದ್ರ ಮೊದಲಾದ ಹೆಸರುಗಳನ್ನಿಟ್ಟುಕೊಂಡಿರುವುದನ್ನು ಗಮನಿಸಬಹುದಾಗಿದೆ. ಕನ್ನಡ-ತೆಲುಗು ಭಾಷೆಯ ಮಿಶ್ರಿತ ಬೆಡಗುಗಳಿವೆ. ಉತ್ತರ ಕರ್ನಾಟಕದ ತಳವಾರರ ಪ್ರಮುಖ ಬೆಡಗುಗಳೆಂದರೆ ಗುಜ್ಜಲರ್, ಗೋಸಲರ್, ಮೀನಗಲರ್, ಜಂಪಲರ್, ಬಿಲ್ಲರ್, ಮುಮ್ಮಡಲವರ್, ಪೊಲೇರು, ಗೊರಲಾರ, ಮೀನುಗೋತ್ರ, ಹೊನ್ನ ಗೋಸಲರವರ, ಮಸಗಲ್ಲರ, ತಳಗಲ್ಲ, ಗವಲೇರ್, ಮಂದಲೋರು, ಅಜ್ಜಡ್ಲೋರು, ಕವಲವರು, ಕವಾರಿಕಾರರು, ಗುಮ್ಮಟದವರು, ಕತ್ತಿಯವರು, ಗೋಲೇರು, ಈಟಿಯವರು, ಬಾಲನಾಯಕರು, ಮಳ್ಳೇಲವರು, ಡಾಕೆಲವರು, ಮಲ್ಲೊರು, ಮಿಳ್ಳೇಲವರು, ವಾಲ್ಮೀಕಿ ಮೂಡಲದವರು ಮುಂತಾದ ಬೆಡಗುಗಳನ್ನು ಹೊಂದಿರುವ ತಳವಾರರು ಕಂಡುಬರುತ್ತಾರೆ. ಈ ಬೆಡಗುಗಳಲ್ಲಿ ಒಂದೇ ಬೆಡಗಿನವರು ಅಣ್ಣ ತಮ್ಮಂದಿರು ಎಂಬ ಭಾವನೆ ಇದೆ. ಅದಕ್ಕಾಗಿ ಸ್ವಗೋತ್ರದ ವಿವಾಹ ನಿಷಿದ್ದ, ಆಕಸ್ಮಾತ್ ಅಂತಹ ಮದುವೆ ನಡೆಯಲೇಬೇಕಾದ ಅನಿವಾರ್ಯತೆ ಇದ್ದಲ್ಲಿ ಮಾತ್ರ ಬೇರೆ ಗೋತ್ರದ ದಂಪತಿಗಳು ಧಾರೆಯೆರೆದು ಕೊಡಬೇಕಾಗುತ್ತದೆ. ಇವರ ಮದುವೆ ಏನಿದ್ದರೂ ಬೇರೆ ಬೆಡಗು ಮತ್ತು ಗೋತ್ರದವರೊಂದಿಗೆ ನಡೆಸುವುದು ವಿಶೇಷವಾಗಿದೆ.

## ೫.೬. ಆಹಾರ

ಕನ್ನಡ ನಾಡಿನಲ್ಲಿ ತಳವಾರರು ಐತಿಹಾಸಿಕ, ಸಾಂಸ್ಕೃತಿಕ ಭವ್ಯ ಪರಂಪರೆಯನ್ನು ಹೊಂದಿದ್ದಾರೆ. ಉತ್ತರ ಕರ್ನಾಟಕದ ಬಹುತೇಕ ಜಿಲ್ಲೆಗಳಲ್ಲಿ ಯಥೇಚ್ಚವಾಗಿರುವ ತಳವಾರರು ಹೆಚ್ಚಾಗಿ ನಾಯಕ ಸಮುದಾಯಕ್ಕೆ ಸೇರಿದವರಾಗಿದ್ದಾರೆ. ಬೇಡ ನಾಯಕರು ಪ್ರಾಚೀನ ಕಾಲದಲ್ಲಿ ಅರಣ್ಯ ಪ್ರದೇಶಗಳಲ್ಲಿ ತಮ್ಮದೇ ಆದ ಆಚಾರ-ವಿಚಾರ ಸಂಪ್ರದಾಯಗಳನ್ನು ರೂಢಿಸಿಕೊಂಡು, ಜೀವನಾಧಾರಕ್ಕೆ ಪಶು ಸಂಗೋಪನೆ, ಬೇಟೆ, ಕೃಷಿಯನ್ನು ಅವಲಂಬಿಸಿ ಜೀವನ ನಡೆಸಿರುವುದು ಸ್ಪಷ್ಟ. ಅರಣ್ಯಗಳು ನಾಶ ಹೊಂದಿದಂತೆಲ್ಲ ಬೇಡರು ನಾಡಿನೊಂದಿಗೆ ಸಂಪರ್ಕ ಬೆಳೆಸಿಕೊಂಡು

ಬದುಕುವುದು ಅನಿವಾರ್ಯವಾಯಿತು. ವೃತ್ತಿ ಕೌಶಲ್ಯತೆ ಫಲವಾಗಿ ನಾಡಿನಲ್ಲಿ ತಳವಾರಿಕೆ, ಕಾವಲುಗಾರಿಕೆ, ಸೈನಿಕರಂತಹ ವೃತ್ತಿಗಳು ಇವರನ್ನು ಕೈಬೀಸಿ ಕರೆದವು. ಅಂದಿನ ತಮ್ಮ ಜೀವನಾಧಾರಕ್ಕೆ ಇಂತಹ ವೃತ್ತಿಗಳನ್ನು ಅವಲಂಬಿಸುವುದು ಅನಿವಾರ್ಯವಾಗಿತ್ತು.

ಮನುಷ್ಯನ ವಿವಿಧ ಪ್ರವೃತ್ತಿಗಳಲ್ಲಿ ಹಸಿವು ಒಂದು, ಆತ ಬದುಕಬೇಕಾದರೆ ಆಹಾರ ಮತ್ತು ಪಾನೀಯದಂತಹ ಜೀವನಾಧಾರ ಸಾಮಗ್ರಿ ಅವಶ್ಯಕ. ಅವನು ತನ್ನ ಹಸಿವನ್ನು ನೀಗಿಸಿಕೊಳ್ಳುವ ಉದ್ದೇಶದಿಂದ ಅನೇಕ ಬಗೆಗಳಲ್ಲಿ ಕ್ರಿಯಾಶೀಲನಾಗಿದ್ದಾನೆ. ಅದಕ್ಕಾಗಿ ಆಹಾರದಲ್ಲಿ ಅನೇಕ ಬಗೆಯ ಬದಲಾವಣೆಗಳನ್ನು ತರಲು ಪ್ರಯತ್ನಿಸುತ್ತಿದ್ದಾನೆ. ತಳವಾರರ ಆಹಾರ ಪದ್ಧತಿಯೂ ವೈವಿಧ್ಯತೆಯಿಂದ ಕೂಡಿದೆ. ತಳವಾರರಲ್ಲಿ ಹಿಂದುಳಿದ ತಳ ಸಮುದಾಯಕ್ಕೆ ಸೇರಿದವರೇ ಅಧಿಕ ಸಂಖ್ಯೆಯಲ್ಲಿರುವುದರಿಂದ ಇವರು ಮಾಂಸಹಾರಿ ಮತ್ತು ಸಸ್ಯಹಾರಿ ಎರಡೂ ಆಹಾರ ಪದ್ಧತಿಗಳನ್ನು ರೂಢಿಸಿಕೊಂಡಿರುವುದು ಸಾಮಾನ್ಯವಾದ ಅಂಶವಾಗಿದೆ. ಅಂದರೆ ಮೂಲತಃ ಬೇಟೆ ಪ್ರವೃತ್ತಿಯಿಂದ ಬಂದಿರುವ ತಳವಾರರು ಆದಿಮ ಸಂಸ್ಕೃತಿಯ ಹಿನ್ನೆಲೆಯವರೇ ಮಾಂಸಹಾರಕ್ಕೆ ಮಹತ್ವ ನೀಡಿದ್ದಾರೆ. ಕರ್ನಾಟಕದಾದ್ಯಂತ ಇರುವ ತಳವಾರರಲ್ಲಿ ಕೆಲವರು ಮಾತ್ರ ಅದರಲ್ಲೂ ದೇವರ ಪೂಜಾರಿಕೆ ವಹಿಸಿಕೊಂಡವರು ಮಾಂಸಹಾರ ತ್ಯಜಿಸಿ ಸಸ್ಯಹಾರಿಗಳಾಗಿದ್ದಾರೆ. ಹಳ್ಳಿಗಳಲ್ಲಿ ನಡೆಯುವ ವಿವಿಧ ಉತ್ಸವ ಜಾತ್ರೆಗಳಲ್ಲಿ ಕೊಡುವ ಬಲಿಯ ಒಂದು ಪಾಲು ತಳವಾರನಿಗೆ ಸೇರುತ್ತದೆ. ತಳವಾರರು ಹೆಚ್ಚಾಗಿ ಕುರಿ, ಕೋಳಿ, ಮೊಲ, ಕಾಡುಹಂದಿ, ಮೀನು ಹಾಗೂ ಕೆಲವು ಹಕ್ಕಿಗಳನ್ನು ಮಾತ್ರ ತಿನ್ನುತ್ತಾರೆ. ಇವುಗಳನ್ನು ಬಿಟ್ಟು ಬೇರೆ ಮಾಂಸ ಸೇವಿಸುವುದಿಲ್ಲ.

ಇನ್ನು ಸಸ್ಯಹಾರಿಗಳಾದವರು ಜೋಳ, ಅಕ್ಕಿ, ಗೋದಿ, ನವಣೆ, ಸಜ್ಜೆ, ರಾಗಿ ಮತ್ತು ಬೇಳೆ ಕಾಳುಗಳನ್ನು ಹಾಗೂ ಎಲ್ಲ ಬಗೆಯ ತರಕಾರಿಗಳನ್ನು ಬಳಸುತ್ತಾರೆ. ಆಯಗಾರಿಕೆಯಿಂದ ಬರುವ ಎಲ್ಲ ಬೆಳೆ, ಕಾಳು, ದವಸ ಧಾನ್ಯಗಳನ್ನು ವರ್ಷವಿಡಿ ಸಂಗ್ರಹಿಸಿಟ್ಟುಕೊಂಡಿರುತ್ತಾರೆ. ಒಟ್ಟಾರೆ ತಳವಾರರಲ್ಲಿ ಕೆಲವರನ್ನು ಹೊರತುಪಡಿಸಿದರೆ ಉಳಿದವರು ಎಷ್ಟೇ ಬಡವರಾದರೂ ವಾರಕ್ಕೊಮ್ಮೆಯಾದರೂ ಮಾಂಸಾಹಾರವನ್ನು ಸೇವಿಸುತ್ತಾರೆ. ಹಗಲಿರುಳು ದುಡಿದು ದಣಿದ ದೇಹಕ್ಕೆ ಮಾಂಸಹಾರ ಪೌಷ್ಠಿಕತೆಯನ್ನು ಒದಗಿಸುತ್ತದೆ ಎಂಬ ನಂಬಿಕೆ ಇವರಲ್ಲಿ ಗಾಢವಾಗಿ ಬೇರೂರಿದೆ.

### ೫.೭. ಇತರೆ ವೃತ್ತಿಗಳು

ಕರ್ನಾಟಕದಲ್ಲಿ ತಳವಾರರು ಪ್ರಾದೇಶಿಕವಾಗಿ ವಿಭಿನ್ನ ಸಂಸ್ಕೃತಿಯನ್ನು ಹೊಂದಿದಂತೆ ವಿಭಿನ್ನ ವೃತ್ತಿಗಳನ್ನು ಹೊಂದಿದ್ದಾರೆ. ಸಮಾಜ ಬದಲಾದಂತೆ ಇವರ ವೃತ್ತಿಗಳಲ್ಲಿಯೂ ಹಲವಾರು ಬದಲಾವಣೆಗಳಾಗಿವೆ. ಆಧುನೀಕರಣ, ನಗರೀಕರಣ ಮತ್ತು ಪಾಶ್ಚಾತೀಕರಣ, ಔದ್ಯೋಗಿಕರಣ

ಪ್ರಭಾವಕ್ಕೆ ಒಳಗಾದ ಇಂದಿನ ಬೇರೆ ಬೇರೆ ವೃತ್ತಿ ಸಮುದಾಯವು ಆಧುನಿಕ ಪ್ರಭಾವದಿಂದಾಗಿ ಪಾರಂಪರಿಕ ವೃತ್ತಿಯಲ್ಲಿ ವೈಜ್ಞಾನಿಕ ಉಪಕರಣಗಳನ್ನು ಬಳಸುತ್ತಿದ್ದಾರೆ. ಅದರಂತೆ ತಳವಾರರು ಸಹ ಇವರ ವೃತ್ತಿ ಇಂದು ಅಧಿಕೃತವಾಗಿಲ್ಲದಿದ್ದರೂ ಇಂದಿನ ಗ್ರಾಮೀಣ ಪರಿಸರದಲ್ಲಿ ನ್ಯಾಯ ಪಂಚಾಯತಿ ಮತ್ತು ಹಬ್ಬ ಹರಿದಿನ, ಉತ್ಸವ, ಜನನ–ಮರಣ ವರದಿಯಲ್ಲಿ ಇವರ ಪಾತ್ರ ಇನ್ನೂ ಇರುವುದನ್ನು ಕಾಣಬಹುದು.

ಪ್ರಾಚೀನ ಕಾಲದಲ್ಲಿ ಕಾಡು ಮೇಡುಗಳಲ್ಲಿ ಜೀವಿಸುತ್ತಾ ಬಂದ ಮಾನವ, ಬೇಟೆಯ ಜೊತೆ ಜೇನು ಸಂಗ್ರಹ, ಚರ್ಮದ್ಯೋಮ, ಅಂಟು, ಆಯುರ್ವೇದ ಔಷಧಿಗಳ ಸಂಗ್ರಹ ಮುಂತಾದ ಕಾರ್ಯಗಳಿಂದ ತಮ್ಮ ಜೀವನಕ್ಕೆ ಆಧಾರ ಮಾಡಿಕೊಂಡಿದ್ದರು. ಈಗ ಇದೆಲ್ಲ ಬದಲಾಗಿ ಹೆಚ್ಚಿನ ಜನರು ಕೃಷಿ ಮತ್ತು ಕೂಲಿ ಕೆಲಸದಲ್ಲಿ ನಿರತರಾಗಿದ್ದಾರೆ. ಇನ್ನು ತಳವಾರರಿಗೆ ಸಂಬಂಧಿಸಿದಂತೆ ಹೇಳುವುದಾದರೆ ಪಾರಂಪರಿಕವಾಗಿ ಬಂದಿದ್ದ ತಳವಾರಿಕೆ ವೃತ್ತಿಯು ಕೋಟೆ, ಅಗಸೆ, ದಿಡ್ಡಿ ಬಾಗಿಲುಗಳು ನಾಶವಾದ ಮೇಲೆ ಇವರಿಗೆ ಕೆಲಸವಿಲ್ಲದಂತಾಯಿತು. ನಂತರದಲ್ಲಿ ಊರ ಗೌಡ, ಕುಲಕರ್ಣಿಯ ಸಹಾಯಕನಾಗಿ ದುಡಿದ. ಕ್ರಿ.ಶ.೧೯೬೧ರ ಗ್ರಾಮ ನೌಕರಿ ರದ್ಧತಿ ಕಾಯ್ದೆಯಿಂದಾಗಿ ಈ ಕೆಲಸವನ್ನು ಕಳೆದುಕೊಳ್ಳುವಂತಾಯಿತು. ಇದರಿಂದ ತಮ್ಮ ಉಪಜೀವನಕ್ಕಾಗಿ ಅನೇಕರು ಕೃಷಿಯನ್ನು ಮಾಡುತ್ತಿದ್ದಾರೆ. ಇನ್ನು ಕೆಲವರು ಊರಿನ ಶುಭ–ಅಶುಭ ಸಮಾರಂಭಗಳಲ್ಲಿ ಕಸ, ಮುಸುರೆ ತಿಕ್ಕುವ ಮತ್ತು ಅವರು ಎತ್ತಿಕೊಟ್ಟಿದ್ದನ್ನು ಸ್ವೀಕರಿಸುವ ಚಾಕರಿ ಸೇವೆಯಲ್ಲಿದ್ದಾರೆ.

ಉತ್ತರ ಕರ್ನಾಟಕದ ಅನೇಕ ಜಿಲ್ಲೆಗಳಲ್ಲಿ ತಳವಾರರು ತಮಗೆ ಹಿಂದೆ ನೀಡಿದ್ದ ವತನಿ ಭೂಮಿಗಳನ್ನು ನಂಬಿಕೊಂಡೇ ಜೀವನ ಸಾಗಿಸುತ್ತಿದ್ದಾರೆ. ಇವರಲ್ಲಿ ಕೆಲವರು ಈ ಭೂಮಿಯನ್ನು ಮಾರಿಕೊಂಡು ದೇಶಾಂತರ ವಲಸೆ ಹೋಗಿದ್ದಾರೆ. ಕೆಲವರು ಚಿಕ್ಕ ಚಿಕ್ಕ ಡಬ್ಬಿ ಅಂಗಡಿಗಳನ್ನು ಇಟ್ಟುಕೊಂಡು ಜೀವನ ನಡೆಸುವವರಿದ್ದಾರೆ. ಇನ್ನು ಕೆಲವರು ಕಂಬಾರಿಕೆ ವೃತ್ತಿಯಲ್ಲಿದ್ದಾರೆ. ಮತ್ತೆ ಕೆಲವರು ಸೈಕಲ್ ಶಾಪ್, ಹೊಟೇಲುಗಳನ್ನು ನಡೆಸುತ್ತಾ ಜೀವನ ಸಾಗಿಸುತ್ತಿರುವುದನ್ನು ಕಾಣಬಹುದು. ಇಂದಿನ ತಳವಾರಿಕೆಯಲ್ಲಿ ಮೇಲುವರ್ಗದ ಸೇವೆಗಾಗಿ ಇರುವ ಚಾಕರಿದಾರರಿಗೆ ತಳವಾರರು ಎಂದು ಕರೆಯುವ ರೂಢಿಯಿದೆ. ಆದರೆ ಇವರಲ್ಲಿ ಎಷ್ಟೇ ಬಡತನವಿದ್ದರೂ ಭಿಕ್ಷಾಟನೆಯನ್ನು ಮಾತ್ರ ಮಾಡುವುದಿಲ್ಲ. ಇವರಲ್ಲಿ ಅನೇಕರು ಆಂಜನೇಯ, ದುರ್ಗಮ್ಮ, ಉದ್ದಮ್ಮ, ದ್ಯಾಮವ್ವ, ಕುಮಾರ ರಾಮನ ಪೂಜಾರಿಗಳು ಆಗಿರುವುದನ್ನು ಕಾಣಬಹುದಾಗಿದೆ.

## ಅಧ್ಯಾಯ ಆರು

# ತಳವಾರರ ಸಾಂಸ್ಕೃತಿಕ ಬದುಕು, ಸಂಪ್ರದಾಯ, ಸಂಸ್ಕಾರ ಆಚರಣೆಗಳು

ಜೀವನಾವರ್ತನವು ಮನುಷ್ಯನ ಹುಟ್ಟಿನಿಂದ ಪ್ರಾರಂಭವಾಗಿ ಸಾವಿನಲ್ಲಿ ಅಂತ್ಯವಾಗುತ್ತವೆ. ಈ ಹುಟ್ಟು ಮತ್ತು ಸಾವಿನ ನಡುವೆ ಅನೇಕ ಬದಲಾವಣೆಯ ಹಂತಗಳನ್ನು ನಾವು ನೋಡಬಹುದು. ಇಂತಹ ಸಂದರ್ಭದಲ್ಲಿ ನಡೆಯುವ ಆಚರಣೆಗಳನ್ನು ಬದಲಾವಣೆಯ ಆಚರಣೆಗಳು ಅಥವಾ ಪರಿವರ್ತನಾ ವಿಧಿಗಳೆಂದು ಮತ್ತು ಸ್ಥಿತ್ಯಂತರದ ಆಚರಣೆಗಳು ಎಂದು ಕರೆಯಬಹುದು. ಇಂತಹ ವಿಧಿ-ಆಚರಣೆಗಳು ಕಾಲದಿಂದ ಕಾಲಕ್ಕೆ, ದೇಶದಿಂದ ದೇಶಕ್ಕೆ ವ್ಯತ್ಯಾಸವಾಗುತ್ತ ಹೋಗುತ್ತದೆ. ಭಾರತೀಯ ಸಂದರ್ಭವನ್ನು ಗಮನಿಸಿ ಹೇಳುವುದಾದರೆ, ಹೆಂಗಸರಲ್ಲಿ ಇಂತಹ ಸ್ಥಿತ್ಯಂತರದ ವಿಧಿಗಳೇ ಹೆಚ್ಚು. ಉದಾಹರಣೆಗೆ, ಹದಿಹರೆಯ ಮೈನೆರೆಯುವಿಕೆ, ಮದುವೆ, ಸೀಮಂತ, ಹುಟ್ಟಿನ ಆಚರಣೆ, ಸಾವಿನ ಆಚರಣೆ ಹೀಗೆ ವೈವಿಧ್ಯಮಯ ಆಚರಣೆಗಳೆಲ್ಲವೂ ಜೀವನಾವರ್ತನದ ಆಚರಣೆಗಳಾಗುತ್ತವೆ.

ಪ್ರಾದೇಶಿಕವಾಗಿ ತಳವಾರರ ಜೀವನಾವರ್ತನೆಯನ್ನು ಕ್ಷೇತ್ರಕಾರ್ಯ ಅಧ್ಯಯನ ಮೂಲಕ ಹೇಳುವುದಾದರೆ ಈ ಹೈದ್ರಾಬಾದ್ ಕರ್ನಾಟಕಕ್ಕೂ ಹಾಗೂ ಉತ್ತರ ಕರ್ನಾಟಕಕ್ಕೂ ಹೆಚ್ಚೇನು ವ್ಯತ್ಯಾಸ ಕಂಡುಬರುವುದಿಲ್ಲ. ಆದರೆ ಉತ್ತರ ಕರ್ನಾಟಕದ ಕೊಪ್ಪಳ, ಬಳ್ಳಾರಿ, ರಾಯಚೂರು, ಗದಗ, ಬೆಳಗಾವಿ, ಅಥಣಿ, ಚಿಕ್ಕೋಡಿ, ರಾಯಭಾಗ ಈ ಪರಿಸರದಲ್ಲಿ ಹೆಚ್ಚಾಗಿ ತಳವಾರಿಕೆಯ ವೃತ್ತಿಯಲ್ಲಿ ಹೆಚ್ಚಾಗಿ ಬೇಡ ಜನಾಂಗದವರೇ ಕಂಡುಬರುತ್ತಾರೆ. ಇಲ್ಲಿ ತಳವಾರರೆಂದರೆ ಬೇಡರೇ ಆಗಿರುತ್ತಾರೆ. ಆದರೆ ವಿಜಯಪುರ, ಬಾಗಲಕೋಟೆ, ಇಲಕಲ್, ಇಂಡಿ ಈ ಭಾಗದಲ್ಲಿ ಬೇರೆ ಸಮುದಾಯದವರು ತಳವಾರಿಕೆಯನ್ನು ಮಾಡುತ್ತಿರುವುದು ಕಂಡುಬಂದಿವೆ.

### ೬.೧. ತಳವಾರರ ಜೀವನಾವರ್ತನ ಆಚರಣೆಗಳು

ಮನುಷ್ಯ ತನ್ನ ಬದುಕನ್ನು ರೂಢಿಸಿಕೊಳ್ಳುವಲ್ಲಿ ಸಂಸ್ಕೃತಿಯನ್ನು ಪೋಷಿಸಿಕೊಳ್ಳುತ್ತಾ ನಾಗರೀಕತೆಯನ್ನು ಮುನ್ನಡೆಸುವಲ್ಲಿ ದೈವದ ಆರಾಧನೆಗೆ ಮಹತ್ವ ನೀಡಿದ್ದಾರೆ. ಇದರಿಂದ

ಸಮಾಜದ ಅನಿಷ್ಠಗಳು ದೂರವಾಗುತ್ತವೆಂಬ ಕಲ್ಪನೆ ಅವರಲ್ಲಿ ಮೂಡಿರಬೇಕು. ಇದರಿಂದ ಅವರು ಹಲವಾರು ರೀತಿಯ ಹರಕೆ, ಕಾಣಿಕೆ, ಪೂಜೆ, ವ್ರತ, ಪ್ರಾರ್ಥನೆ, ಜನನ, ಮರಣದ ನಂಬಿಕೆಗಳು ಮೊದಲಾದವುಗಳನ್ನು ರೂಢಿಗೆ ತಂದರು. ಇವು ಸಮಾಜದಲ್ಲಿ ಭದ್ರಗೊಂಡು ಕಾಲಕ್ರಮೇಣ ಪ್ರಮುಖ ಆಚರಣೆಗಳಾಗಿ ಮೂಡಿಬಂದಿವೆ.

"ಆಚರಣೆಗಳು ಬಹುತೇಕವಾಗಿ ಪ್ರಕೃತಿ ಮೂಲದವು. ಆದ್ದರಿಂದ ಇವುಗಳನ್ನು ದೈವೀ ಸಂಬಂಧದ ಸೃಷ್ಟಿ ಎನ್ನಬಹುದು. ಪ್ರಕೃತಿಯ ಮಡಿಲಲ್ಲಿ ಬದುಕಬೇಕಾಗಿದ್ದ ಮಾನವ ಭಯ–ಭಕ್ತಿಗಳಿಂದ ಮತ್ತು ಮನಸ್ಸಿನ ಅಸ್ಥಿರ ಭಾವನೆಗಳಿಂದ ದೈವಿಕ ನಂಬಿಕೆಗಳನ್ನು ಆಚರಣೆಯ ಕ್ರಮದಲ್ಲಿ ಉಳಿಸಿಕೊಂಡಿದ್ದಾನೆ. ಅಗೋಚರವಾದ ಶಕ್ತಿಗಳನ್ನು ವಶಪಡಿಸಿಕೊಳ್ಳಲು, ಅವುಗಳ ಕ್ರೂರ ದೃಷ್ಟಿಯಿಂದ ಪಾರಾಗಲು ಅವುಗಳ ಬಗ್ಗೆ ಇರುವ ನಂಬಿಕೆ, ಭಯಭಕ್ತಿಗಳನ್ನೊಳಗೊಂಡ ಆಚರಣೆಗಳು ಅನೇಕ ವಿಧಿಗಳಲ್ಲಿ ಅವುಗಳನ್ನು ತೃಪ್ತಿಪಡಿಸುವ ಸಲುವಾಗಿ ಬೆಳೆದುಕೊಂಡು ಬಂದಿದೆ. ಈ ಕಾರಣದಿಂದ ಇವು ನಮ್ಮ ಸಂಸ್ಕೃತಿಗೆ ತಳಪಾಯವನ್ನು ಹಾಕಿ ವಿಶಾಲಗೊಳಿಸಿವೆ."[೧] ಹೀಗೆ ಒಂದು ವಿಶಿಷ್ಠ ಸಂಸ್ಕೃತಿಯನ್ನು ತನ್ನ ಒಡಲಲ್ಲಿ ಹುದುಗಿಸಿಕೊಂಡು ಬಂದ ಬೇಡ ಸಮುದಾಯದ ತಳವಾರರ ಆಚರಣೆಗಳನ್ನು ಮುಖ್ಯವಾಗಿ ಚರ್ಚಿಸಲಾಗಿದೆ.

**ಜನನ**

ಬೇಡ ಸಮುದಾಯದ ತಳವಾರಿಕೆಯ ಕುಟುಂಬದಲ್ಲಿ ಗರ್ಭಿಣಿ ಸ್ತ್ರೀಯು ಹೇರುವ ಸಂದರ್ಭದಲ್ಲಿ ಮನೆಯಲ್ಲಿಯೇ ಹೆರಿಗೆ ಮಾಡಿಸುತ್ತಿದ್ದರು. ಇವರ ಹೆರಿಗೆಯಲ್ಲಿ ಸೂಲಗಿತ್ತಿಯ ಪಾತ್ರ ಪ್ರಮುಖವಾದುದು. ಆದರೆ ಪ್ರಸ್ತುತ ದಿನಮಾನದಲ್ಲಿ ಸೂಲಗಿತ್ತಿಯ ಅವಲಂಬನೆ ಕಡಿಮೆಯಾಗಿದೆ. ಅದಕ್ಕೆ ಇಂದಿನ ಆಧುನಿಕ ಸೌಲಭ್ಯ ಹಾಗೂ ಸುರಕ್ಷತೆ ದೃಷ್ಟಿಯಿಂದ ಆಸ್ಪತ್ರೆಗಳಲ್ಲಿ ಹೆರಿಗೆ ಮಾಡಿಸುವುದು ಸಾಮಾನ್ಯವಾಗಿದೆ. ಆದರೆ ಕೆಲವೊಂದು ಹಳ್ಳಿಗಳಲ್ಲಿ ಇನ್ನು ತಮ್ಮ ಸಾಂಪ್ರದಾಯವನ್ನು ಮುರಿಯದೆ, ಸುಲಗಿತ್ತಿಯ ಮುಖಾಂತರವೇ ಹೆರಿಗೆ ಮಾಡಿಸುತ್ತಾರೆ. ಹಿಂದಿನ ಕಾಲದಲ್ಲಿ ಸೂಲಗಿತ್ತಿಗೆ ಪ್ರಧಾನ ಸ್ಥಾನವಿತ್ತು. ಅವಳು ಬರುವ ತನಕ ಕಾಯುತ್ತಿದ್ದರು. ಅವಳು ಅನುಭವಸ್ಥರಾಗಿರುತ್ತಿದ್ದಳು. ಧೈರ್ಯದ ಮಾತುಗಳು, ಅನುಭವದ ಮಾತುಗಳು ಹೇಳಿ ನೋವನ್ನು ಮರೆಮಾಡಿಸಿ ಹೆರಿಗೆ ಮಾಡಿಸುತ್ತಿದ್ದರು.

ಮಗು ಹುಟ್ಟಿದ ತಕ್ಷಣ ಅಥಣಿ ಭಾಗದಲ್ಲಿ ಗಂಡು ಮಗುವಾದರೆ ಪೇಡ ಹಂಚುತ್ತಾರೆ. ಹೆಣ್ಣು ಮಗು ಹುಟ್ಟಿದರೆ ಜಿಲೇಬಿಯನ್ನು ಹಂಚುತ್ತಾರೆ. ನಂತರ ಸೂಲಗಿತ್ತಿಯು ಮಗು ಮತ್ತು ತಾಯಿಗೆ ಬಿಸಿ ನೀರಿನ ಸ್ನಾನ ಮಾಡಿಸುತ್ತಾರೆ. ಹಾಗೆಯೇ ಕೆಲವು ಆಯುರ್ವೇದ ತೈಲ ಹಾಗೂ ಔಷಧಗಳನ್ನು ತಯಾರಿಸಿಟ್ಟುಕೊಳ್ಳುತ್ತಿದ್ದರು. ಮಗುವಿನ ದೇಹಕ್ಕೆ ಸೂಜಿಯನ್ನು ಕಾಯಿಸಿ

ಮಕ್ಕಳ ಎದೆಯ ಕೆಳಭಾಗಕ್ಕೆ ಬರೆಗಳನ್ನು ಹಾಕುತ್ತಾರೆ. ಇದು ರಾಯಚೂರು ಹಾಗೂ ಕೊಪ್ಪಳ ಭಾಗದಲ್ಲಿ ಕಂಡುಬರುತ್ತದೆ. ಇದು ಮಗುವಿಗೆ ಜ್ವರ ಮತ್ತಿತರ ಕಾಯಿಲೆಗಳು ಬರಬಾರದೆಂಬ ನಂಬಿಕೆಯಿಂದ ಈ ರೀತಿಯ ಬರೆಗಳನ್ನು ಹಾಕುತ್ತಾರೆ. ಬಾಣಂತಿಗೆ ಬೇವಿನ ಎಲೆಯ ಸೊಪ್ಪು, ಅರಿಸಿನ ಅರೆದು ಮೈಮೇಲೆ ಹಚ್ಚಿ ಸ್ನಾನ ಮಾಡಿಸುತ್ತಾರೆ. ಮಗುವಿಗೆ ಶೀತವಾಗದಂತೆ ಪ್ರತಿದಿನ ಎಣ್ಣೆಸ್ನಾನ ಮಾಡಿಸಿ ಶಾಖ ನೀಡುತ್ತಾರೆ.

ತಳವಾರರ ಹೆರಿಗೆಯಾದ ಮನೆ ಸೂತಕ ಎಂದು ಭಾವಿಸುತ್ತಾರೆ. ೫ ದಿನಗಳ ತನಕ ಅವರು ಸೂತಕ ಆಚರಿಸುತ್ತಾರೆ. ಅವರ ಮನೆಗಳಲ್ಲಿ ಪೂಜೆ ಮಾಡುವುದಿಲ್ಲ ಹಾಗೂ ಭಿಕ್ಷುಕರಿಗೆ ಭಿಕ್ಷೆಯನ್ನು ಹಾಕುವುದಿಲ್ಲ. ಈ ಪದ್ಧತಿಯನ್ನು ಕೆಲವು ತಳವಾರರು ಮಾತ್ರ ಆಚರಿಸಿಕೊಂಡು ಬಂದಿದ್ದಾರೆ. ೫ನೆಯ ದಿನಕ್ಕೆ ಮನೆಯನ್ನು ಶುದ್ಧಿಗೊಳಿಸಿ, ಆ ದಿನ ಚಟಿಗೆಮ್ಮ(ವಿಧಿ ಬರೆಯುವವಳು) ಮಗುವಿನ ಹಣೆ ಬರಹವನ್ನು ಬರೆಯಲು ಬರುತ್ತಾಳೆಂದು ಮನೆಯಲ್ಲಿ ಪೂಜಾ ವಿಧಿಗಳನ್ನು ನೆರವೇರಿಸಿ, ಸಿಹಿ ಅಡುಗೆ ಮಾಡಿ ದೇವರಿಗೆ ನೈವೇದ್ಯ ಹಿಡಿದು ಎಲ್ಲರೂ ಊಟ ಮಾಡಿದ ನಂತರ ಉತ್ತರ ದಿಕ್ಕಿಗೆ ಬಾಣಂತಿಯ ಹೊರಸಿನ ಕೆಳಗೆ ಒಂದು ಮೊರದಲ್ಲಿ ಒಂದು ಕಲ್ಲನ್ನು ಇಟ್ಟು ಐದು ದೀಪಗಳನ್ನು ಹಚ್ಚಿ, ಕೇರು ಮತ್ತು ಒಂದು ಸೂಜಿಯನ್ನು ಇಟ್ಟು ಪೂಜಿಸುತ್ತಾರೆ. ಈ ಮೂಲಕ ವಿಧಿ ಬರಹವನ್ನು ಬರೆಯುತ್ತಾಳೆ ಎನ್ನುವ ನಂಬಿಕೆ ಕೆಲವು ತಳವಾರರ ಮನೆತನದಲ್ಲಿದೆ. ಈ ಆಚರಣೆಗಳ ಹಿನ್ನೆಲೆ ಏನೇ ಇದ್ದರೂ, ಅನಕ್ಷರಿಗಳಾಗಿದ್ದ ತಳವಾರರು ಕೆಲವು ಮೂಲ ಸಾಂಪ್ರದಾಯಿಕ ಆಚರಣೆಗಳಿಗೆ ಕಟ್ಟು ಬಿದ್ದು ಆಚರಿಸಿರುವುದುಂಟು. ಆದರೆ ಇಂದಿನ ಪ್ರಜ್ಞಾವಂತ ಸಮಾಜ ಇಂತಹ ಕೆಲವು ಆಚರಣೆಗಳನ್ನು ಕಡಿಮೆಗೊಳಿಸಿದೆ.

**ಗಂಗೆ ಪೂಜೆ**

ಹೆರಿಗೆಯಾದ ಮನೆ ಸೂತಕವೆಂದು ಆ ಸೂತಕ ಕಳೆಯಲು ಮಗು ಹುಟ್ಟಿದ ಒಂಬತ್ತನೆಯ ದಿನಕ್ಕೆ ಬಾಣಂತಿಯನ್ನು ಗಂಗಾ ಪೂಜೆಗೆಂದು ಬಾವಿಗೊ, ಹಳ್ಳಕ್ಕೊ, ನಲ್ಲಿಗೊ, ಕರೆದುಕೊಂಡು ಹೋಗಿ ಪೂಜೆ ಮಾಡಿಕೊಂಡು ಬರುತ್ತಾರೆ. ಮನೆಯ ಐದಾರು ಜನ ಹೆಣ್ಣು ಮಕ್ಕಳೊಡನೆ ಬಾಣಂತಿಯು ಅನ್ನಕ್ಕೆ ಸಕ್ಕರೆ, ತುಪ್ಪ ಹಾಕಿ ನೈವೇದ್ಯ ಮಾಡಿ ಪೂಜೆ ಮಾಡುತ್ತಾರೆ. ಬಾಣಂತಿಗೆ ಹಸಿರುಬಳೆ ಹಾಕಿ ಕುಂಕುಮವಿಟ್ಟು ಉಡಿ ತುಂಬಿ ಪೂಜೆ ಮಾಡಿ, ಅಲ್ಲಿಂದ ಕರೆದುಕೊಂಡು ಬರುತ್ತಾರೆ. ಗಂಗೆಯ ಪೂಜೆ ಮಾಡುವವರೆಗೂ ಬಾಣಂತಿಯು ಕಸಬರಗೆ ಮುಟ್ಟುವಂತಿಲ್ಲ, ಮನೆಯವರು ಯಾವುದೇ ದೇವಸ್ಥಾನಕ್ಕೆ ಹೋಗುವಂತಿಲ್ಲ. ಭಿಕ್ಷೆಯನ್ನು ಕೂಡ ಹಾಕುವಂತಿಲ್ಲ. ಅವಳ ಕೈಯಿಂದಲೇ ಪೂಜೆ ಮಾಡಿಸುತ್ತಾರೆ. ಬಹುತೇಕ ಹೆರಿಗೆಯ ಸೂತಕ ಕಳೆಯಲು ಸಾಂಕೇತವಾಗಿ ಗಂಗೆಯನ್ನು ಆರಾಧಿಸುವ ಪದ್ಧತಿ ಬಂದಂತೆ ಕಾಣುತ್ತದೆ. ಈ ಪದ್ಧತಿಯೂ ಇಂದು ಅಷ್ಟಾಗಿ ಕಾಣುವುದಿಲ್ಲ.

**ನಾಮಕರಣ**

ಹದಿನಾರನೆಯ ದಿನ ಅಥವಾ ತಿಂಗಳು ತುಂಬುವುದರೊಳಗಾಗಿ ಬಾಣಂತಿಯ ತವರು ಮನೆಯಲ್ಲಿಯೇ ಮಗುವಿಗೆ ನಾಮಕರಣ ಮಾಡುವುದು ರೂಢಿ. ಆದರೆ ಇಂದು ೩ ತಿಂಗಳಿಗೆ ಹೆಚ್ಚಾಗಿ ನಾಮಕರಣ ಮಾಡುವುದು ಕಂಡುಬಂದಿದೆ. ಅಂದು ಕುಟುಂಬಕ್ಕೆ ಸಂಬಂಧಿಸಿದ ಎಲ್ಲಾ ಬಂಧು ಬಳಗದವರು, ಅಕ್ಕ ಪಕ್ಕದವರು ನೆರೆದಿರುತ್ತಾರೆ. ಮಗುವಿನ ಸೋದರತ್ತೆ ಹಾಗೂ ಸೋದರ ಮಾವ ಈ ಶಾಸ್ತ್ರದಲ್ಲಿ ಕೇಂದ್ರ ಬಿಂದುವಾಗಿರುತ್ತಾರೆ. ತೊಟ್ಟಿಲ ಕಟ್ಟಿ ಮಗುವನ್ನು ತೊಟ್ಟಿಲಲ್ಲಿ ಹಾಕಿ ಜೋಗುಳ ಹಾಡು ಹಾಡುತ್ತಾರೆ. ತಂದೆಯ ಸಂಬಂಧಿಕರ ಅಪೇಕ್ಷೆಯಂತೆ ಮಗುವಿಗೆ ನಾಮಕರಣ ನಡೆಯುತ್ತದೆ. ಬಳ್ಳಾರಿ ಭಾಗದಲ್ಲಿ ಸೋದರತ್ತೆ ಮಗುವಿಗೆ ನಾಮಕರಣ ಮಾಡುತ್ತಾಳೆ. ಕೊಪ್ಪಳ, ಗದಗ, ರಾಯಚೂರು, ದೇವದುರ್ಗ, ಈ ಭಾಗದಲ್ಲಿ ಸೋದರಮಾವನು ಮಗುವಿಗೆ ನಾಮಕರಣ ಮಾಡುತ್ತಾನೆ. ಜೋಯಿಸರು, ಅಯ್ಯನವರು, ಬ್ರಾಹ್ಮಣರ ಮೂಲಕ ಲೆಕ್ಕಚಾರದಂತೆ ಶುಭ ಮಹೂರ್ತದಂದು ಸೋದರ ಮಾವ ೩ ಬಾರಿ ಮಗುವಿನ ಕಿವಿಯಲ್ಲಿ ಹೆಸರನ್ನು ಹೇಳುತ್ತಾನೆ. ಅಲ್ಲಿ ಸುತ್ತಾ ನೆರೆದ ಮಹಿಳೆಯರು, ಜನರು ಅವನ ಬೆನ್ನಿಗೆ ಹೊಡೆಯುತ್ತಾ ಸಂತೋಷಪಡುತ್ತಾರೆ. ನಂತರ ತಮ್ಮ ಜನಾಂಗದ ಪುರಾಣ ಪುರುಷರು, ಸಾಂಸ್ಕೃತಿಕ ವೀರರು, ಕುಲದೇವತೆ ಹಾಗೂ ಮನೆಯ ಹಿರಿಯರ ಹೆಸರುಗಳನ್ನಿಡುವುದು ಸಾಮಾನ್ಯವಾಗಿತ್ತು. ಆದರೆ ಇಂದು ಆಧುನಿಕತೆಯ ಹೆಸರಿನಲ್ಲಿ ಸಿನಿಮಾ ತಾರೆಯರ ಹೆಸರುಗಳು ಕೇಳುವಂತಾಗಿದೆ. ನಂತರ ಬಾಣಂತಿಗೂ ಮಡಿಲಕ್ಕಿ ತುಂಬಿ ಪೂಜೆ ಮಾಡುತ್ತಾರೆ. ಬಾಣಂತಿಯ ತಾಯಿಗೆ ಮತ್ತು ನಾಮಕರಣ ಮಾಡಿದ ಮಾವ, ಅತ್ತೆಯರಿಗೆ ಹೊಸ ಬಟ್ಟೆ ಕೊಡುವುದು ವಾಡಿಕೆ. ಅದೇ ರೀತಿ ೩ ತಿಂಗಳಲ್ಲಿ ಅಥವಾ ಐದು ತಿಂಗಳಲ್ಲಿ ಮಗು ಹಾಗೂ ಬಾಣಂತಿಯನ್ನು ಗಂಡನ ಮನೆಗೆ ಕಳುಹಿಸಿ ಕೊಡುವಾಗ ಮಗುವಿಗೆ ತೊಟ್ಟಿಲು, ಬೆಳ್ಳಿ ಬಟ್ಟಲು, ಚೈನು, ಓಲೆ, ಅರಿವೆ ಕೊಡಿಸಿ ಮಗಳಿಗೆ ಹೊಸ ಸೀರೆ ಉಡಿಸಿ, ಉಡಿ ತುಂಬಿ ಕಳಿಸಿ ಕೊಡುತ್ತಾರೆ. ಗಂಡನ ಮನೆಯಲ್ಲಿಯೂ ನಾಮಕರಣದ ಪದ್ಧತಿಯು ಅವರವರ ಸ್ಥಿತಿಗತಿಗನುಗುಣವಾಗಿ ನೆರವೇರುತ್ತದೆ.

**ಮುಡಿ ತೆಗೆಸುವುದು(ಜವಳ ತೆಗೆಸುವುದು)**

ತಳವಾರರು ತಮ್ಮ ಮಕ್ಕಳ ಮುಡಿಯನ್ನು ಹೆಚ್ಚಾಗಿ ತಮ್ಮ ಮನೆದೇವರ ಸನ್ನಿಧಿಯಲ್ಲಿ ತೆಗೆಸುತ್ತಾರೆ. ಮಗುವಿಗೆ ಜವಳ ತೆಗೆಸುವುದರ ಮುಖಾಂತರ ತಂದೆ, ತಾಯಿಯಂದಿರು ತಮ್ಮ ಹರಕೆಯನ್ನು ತೀರಿಸುತ್ತಾರೆ.

ಈ ಕಾರ್ಯಕ್ರಮದಲ್ಲಿ ಮಗುವಿನ ಸೋದರ ಮಾವನಿಗೆ ವಿಶೇಷ ಸ್ಥಾನಮಾನವಿರುತ್ತದೆ. ಇವನೇ ಮೊದಲು ಮಗುವಿನ ಕೂದಲು ಕತ್ತರಿಸುತ್ತಾನೆ. ನಂತರ ಉಳಿದ ಕೂದಲನ್ನು ಕ್ಷೌರಿಕನು ಕತ್ತರಿಸುತ್ತಾನೆ. ಇದು ಮನೆದೇವರ ಸಮ್ಮುಖದಲ್ಲಿ ನೇರವೇರಿಸುವುದು ವಿಶೇಷ.

ಪ್ರತಿಯಾಗಿ ಪೂಜಾರಿಗೆ ಅಕ್ಕಿ, ಬೆಲ್ಲ, ಎಲೆ, ಅಡಿಕೆ, ಕೊಬ್ಬರಿ ಮತ್ತು ದಕ್ಷಿಣೆ ಕೊಡುತ್ತಾರೆ. ಹಾಗು ಸೋದರಮಾವನಿಗೆ ಹೊಸ ಬಟ್ಟೆಯನ್ನು ಎಲೆ-ಅಡಿಕೆಯ ಜೊತೆಗೆ ಶಕ್ತಾನುಸಾರ ಹಣವನ್ನು ಕೊಡುತ್ತಾರೆ.

**ಋತುಮತಿ ಶಾಸ್ತ್ರ**

ಹೆಣ್ಣಿನ ಜೀವನದ ಮಹತ್ವದ ಘಟ್ಟಗಳಲ್ಲಿ ಮೊದಲನೆಯದು ಋತುಮತಿಯಾಗುವುದು ಮತ್ತು ಮೈನೆರೆಯುವುದು. ತಳವಾರ ಸಮುದಾಯದಲ್ಲಿ ಬಾಲಕಿಯು ಋತುಮತಿಯಾದರೆ ಆಕೆಯನ್ನು ವಾಸಸ್ಥಾನದಿಂದ ಪ್ರತ್ಯೇಕಿಸಲಾಗುತ್ತದೆ. ಬೆಳಗಾವಿ, ಅಥಣಿ ಪರಿಸರದಲ್ಲಿ ಆಕೆಯನ್ನು ಮನೆಯ ಆಯದ ಹೊರಗೆ ಹಳೆಯ ಮರದ ಹಲಗೆಯ ಮೇಲೆ ಆಕೆಯನ್ನು ಕುಳ್ಳಿರಿಸುತ್ತಾರೆ. ಮೈನೆರೆದಂದಿನಿಂದ ಸ್ನಾನದವರೆಗೂ ಅಂದರೆ ಐದು ದಿನಗಳವರೆಗೆ ಆಕೆಗೆ ಸಂಕ್ರಮಣದ ಕಾಲಾವಧಿ. ಈ ಕಾಲಾವಧಿಯಲ್ಲಿ ಆಕೆಯ ಅಪ್ಪನ ತಂಗಿಯೋ ಅಥವಾ ಅಕ್ಕ ಯಾರಾದರೂ ಸರಿ ದಿನಾಲು ಅರಿಷಿಣ ಹಚ್ಚಿ, ತಲೆಗೆ ಎಣ್ಣೆ ಹಾಕಿ ಬಿಸಿ ನೀರಿನ ಸ್ನಾನ ಮಾಡಿಸುತ್ತಾರೆ. ಈ ಸಂದರ್ಭದಲ್ಲಿ ಆಕೆಗೆ ವಿಶಿಷ್ಟ ಆಹಾರವನ್ನು ನೀಡುತ್ತಾರೆ. ಕೊಬ್ರಿ ಬೆಲ್ಲ ಮಿಶ್ರಿತ ಆಹಾರ. ಗಟ್ಟಿ ಪದಾರ್ಥಗಳನ್ನು ನೀಡುವುದಿಲ್ಲ. ಬದಲಾಗಿ ದ್ರವ ಪದಾರ್ಥವನ್ನು ಹೆಚ್ಚಾಗಿ ನೀಡುತ್ತಾರೆ. ಐದನೆಯ ದಿನ ಅಥವಾ ಒಂಭತ್ತನೆಯ ದಿನ ಸಮುದಾಯದ ಮುತ್ತೈದೆಯರೆಲ್ಲರೂ ನೀರು ಹಾಕಿ ಸ್ನಾನ ಮಾಡಿಸಿ ಗಂಗಾ ಪೂಜೆ ಮಾಡಿಸಿ ಹೊಸ್ತಿಲು ಬರುವಿಕೆ ಅಂದರೆ ಮನೆಯೊಳಗೆ ಪ್ರವೇಶ ಕಲ್ಪಿಸುತ್ತಾರೆ. ನಂತರ ದಿನ ಒಂದರಂತೆ ಹದಿನಾರು ದಿನದವರೆಗೂ ಆಕೆಯನ್ನು ಶೃಂಗಿರಿಸಿ ಕೂಡಿಸಿ, ಮುತ್ತೈದೆಯರೆಲ್ಲ ಆರತಿ ಮಾಡುತ್ತಾರೆ. ಇದೆಲ್ಲವನ್ನು ಅವಳು ಪ್ರೌಢಾವಸ್ಥೆಗೆ ಬಂದವಳೆಂದು, ಅವಳು ಮದುವೆಗೆ ಸಿದ್ಧಳೆಂಬ ಪ್ರಚಾರಕ್ಕೂ ಇದೆಲ್ಲವನ್ನು ಮಾಡುತ್ತಿದ್ದರು. ವಿಶೇಷವೆಂದರೆ ಅಥಣಿ, ಕೊಪ್ಪಳ ಜಿಲ್ಲೆ, ರಾಯಚೂರು, ಗುಲ್ಬರ್ಗ ಅಧ್ಯಯನ ಕ್ಷೇತ್ರದಿಂದ ಬೆರಳೆಣಿಕೆಯಷ್ಟು ಮಂದಿ ಮೈನೆರೆಯುವ ಮುನ್ನವೇ ಮದುವೆಯಾಗಿರುವುದು ಕಂಡುಬಂದಿದೆ. ಜನರಿಗೆ ಕಾನೂನಿನ ಅರಿವುಂಟಾಗಿ ಬಾಲ್ಯ ವಿವಾಹ ಪದ್ಧತಿ ನಿರ್ಮೂಲನೆ ಆಗಿದೆ ಎಂದು ಹೇಳಬಹುದು.

**ಒಸುಗೆ**

ಋತುಮತಿಯಾದ ಸಂದರ್ಭದಲ್ಲಿ ಸೋದರ ಮಾವನು ಅಥವಾ ಅತ್ಯಂತ ಆತ್ಮೀಯರು 'ಒಸುಗೆ' ಎಂದು ಋತುಮತಿಯಾದ ಹುಡುಗಿಗೆ ಹಸಿರುಬಳೆ, ಹಸಿರುಸೀರೆ, ಹೂವು, ಅರಿಶಿಣ, ಕುಂಕುಮ, ಸಿಹಿ ತಿಂಡಿ ಹಾಗು ತಮಗಿಷ್ಟದ ಉಡುಗೊರೆಯನ್ನು ತಂದು ಕೊಡುತ್ತಾರೆ. ಈ ಸಂಪ್ರದಾಯ ಕೊಪ್ಪಳ, ಬಳ್ಳಾರಿ, ರಾಯಚೂರು, ಬೆಳಗಾವಿ ಮುಂತಾದ ಕಡೆಗಳಲ್ಲಿ ಕಂಡುಬರುತ್ತದೆ. ಆದರೆ ಬಳ್ಳಾರಿ ಜಿಲ್ಲೆಯ ಹಗರಿಬೊಮ್ಮನ ಹಳ್ಳಿಯ ಕಿತ್ತನೂರು ಗ್ರಾಮದ ನಿಂಗಮ್ಮ ತಳವಾರರು

ಹೇಳುವಂತೆ ಈ ಪದ್ಧತಿ ಹಿಂದೆ ಕಡ್ಡಾಯವೆಂಬಂತೆ ಆಚರಿಸುತ್ತಿದ್ದರು. ಆದರೆ ಇಂದು ಕಡಿಮೆಯಾಗಿದೆ ಎಂದು ಹೇಳುತ್ತಾರೆ.

### ೬.೨. ಮದುವೆ ಸಂಪ್ರದಾಯಗಳು

ಹಿಂದಕ್ಕೆ ಭಾರತೀಯ ಪರಂಪರೆಯ ಹಿನ್ನೆಲೆಯಲ್ಲಿ ನಮ್ಮದೇ ಸಮುದಾಯಗಳು ಮದುವೆಯನ್ನು ಒಂದು ವಿಧಿ ನಿಯಮ, ಮೋಕ್ಷಕ್ಕೆ ದಾರಿ, ಪರಿಪೂರ್ಣತೆಗೆ ಒಂದು ಮಾಧ್ಯಮವಾಗಿ ಮದುವೆಯನ್ನು ಆಚರಣೆಗೆ ತಂದಿದ್ದಾರೆ. ಅದಕ್ಕಾಗಿ ಹಿಂದೆ ಐದು ದಿನಗಳ ಕಾಲ ಬಹಳಷ್ಟು ವಿಜೃಂಭಣೆಯಿಂದ ಆಚರಿಸುತ್ತಿದ್ದರು.

"ಮದುವೆ ಸಂಪ್ರದಾಯಗಳು ತುಂಬಾ ವ್ಯಾಪಕವಾದದ್ದು. ಒಂದು ನಿರ್ದಿಷ್ಟವದ ಪ್ರದೇಶದಲ್ಲಿ ವಾಸಿಸುವ ಇಡೀ ಸಮಾಜ, ತನ್ನ ಅವಶ್ಯಕತೆಗೆ ಅನುಗುಣವಾಗಿ ಕ್ರಮಬದ್ಧವಾಗಿ ನಡೆಸಿಕೊಂಡು ಬಂದ ಕೆಲವು ರೂಢಿಗಳಿಗೆ ಸಂಪ್ರದಾಯಗಳೆಂದು ಹೇಳಿದರೂ ಸಂಪ್ರದಾಯದ ಬಗ್ಗೆ ಏನನ್ನು ಹೇಳಿದಂತಾಗುವುದಿಲ್ಲ. ಸಂಪ್ರದಾಯ ಮತ್ತು ಪರಂಪರೆ ಇವೆರಡೂ ಒಂದೇ ಅರ್ಥವನ್ನು ಕೊಡುವಂತೆ ಕಂಡುಬಂದರೂ ಎರಡು ಪದಗಳು ಭಿನ್ನ ಭಿನ್ನ ರೀತಿಯ ಪದಗಳಾಗಿ ನಿಂತಿವೆ. Tradition ಎನ್ನುವುದಕ್ಕೆ "ಸಂಪ್ರದಾಯ" ಎಂದೂ "ಪರಂಪರೆ" ಎಂದೂ ಎರಡು ಪದಗಳನ್ನು ಬಳಸಿದರೂ ಕೂಡ ಸಂಪ್ರದಾಯಕ್ಕೆ ಸೀಮಿತತೆ ಇರುತ್ತದೆ. ಪರಂಪರೆ ಇದು ಭೂತ, ಭವಿಷ್ಯ ಮತ್ತು ವರ್ತಮಾನಗಳನ್ನೆಲ್ಲಾ ಒಳಗೊಂಡು ಅದು ಬೆಳವಣಿಗೆಯನ್ನು ಪಡೆಯುತ್ತಾ ಹೋಗುತ್ತದೆ. ಹಾಗೆಯೇ ಪರಂಪರೆಯ ಹಿನ್ನೆಲೆಯಲ್ಲಿ ಸಂಪ್ರದಾಯದ ನಿಲುವುಗಳು ಇಂದಿನವರೆಗೂ ಉಳಿದುಕೊಂಡು ಬಂದಿವೆ. ಅವುಗಳಲ್ಲಿ ಮದುವೆಯ ಸಂಪ್ರದಾಯವೂ ಒಂದು."[೨]

ತಳವಾರರು ತಮ್ಮ ಮೂಲಸಂಸ್ಕೃತಿಯ ರೂಢಿ, ಪದ್ಧತಿ, ಸಂಪ್ರದಾಯಗಳನ್ನು ಇನ್ನು ಉಳಿಸಿಕೊಂಡು ಬಂದಿದ್ದಾರೆ. ತೀರಾ ನಗರೀಕರಣಗೊಂಡ ಈ ಸಂದರ್ಭದಲ್ಲಿಯೂ ಗ್ರಾಮೀಣ ಪ್ರದೇಶಗಳ ಮದುವೆ ಆಚರಣೆಗಳು ವಿಶಿಷ್ಟತೆಯಿಂದ ಕೂಡಿವೆ ಅದರಲ್ಲೂ ಮುಖ್ಯವಾಗಿ ಕನ್ಯಾನ್ವೇಷಣೆ, ಜಾತಕ, ವೀಳ್ಯೆಶಾಸ್ತ್ರ, ಮಿತಿ, ಲಗ್ನಪತ್ರಿಕೆ, ಧಾರೆ, ಸುರಗಿ, ಉಡುಗೊರೆ ಮತ್ತು ನೀರು ಶಾಸ್ತ್ರಗಳು ಇನ್ನೂ ವಿಶೇಷತೆಯಿಂದಲೇ ಆಚರಿಸುವುದನ್ನು ಕಾಣಬಹುದು.

### ಕನ್ಯಾನ್ವೇಷಣೆ

ಸಾಮಾನ್ಯವಾಗಿ ಒಂದು ಗಂಡು ಅಥವಾ ಹೆಣ್ಣು ಯೌವ್ವನಾವಸ್ಥೆಗೆ ಕಾಲಿರಿಸಿದಾಗ ಅವರಿಗೆ ಮದುವೆ ಮಾಡಬೇಕೆಂಬ ಧೋರಣೆಗಳು ತಂದೆ-ತಾಯಿ ಮತ್ತು ಮನೆಯ ಹಿರಿಯರಲ್ಲಿ ಹುಟ್ಟಿಕೊಳ್ಳುತ್ತದೆ. ತಳವಾರ ಸಮುದಾಯದಲ್ಲಿ ವಧು, ವರರ ಗೋತ್ರಗಳು ಭಿನ್ನವಾಗಿರಬೇಕು.

ಭಿನ್ನವಾಗಿದ್ದರೆ ಮಾತ್ರ ಕನ್ಯೆ ನೋಡಲು ನಿಶ್ಚಯಿಸುತ್ತಾರೆ. ಸಾಮಾನ್ಯವಾಗಿ ಚೈತ್ರ, ವೈಶಾಖ, ಜೇಷ್ಠ, ಶ್ರವಣ, ಆಶ್ವಿಜ, ಕಾರ್ತಿಕ ಮತ್ತು ಮಾರ್ಗಶಿರ ಈ ಶುಭಮಾಸಗಳಲ್ಲಿ ವರನ ತಂದೆ, ಅಕ್ಕ, ತಂಗಿಯರು, ಸೋದರಮಾವ ಹಾಗೂ ಗೆಳೆಯರೊಡಗೂಡಿ ಕನ್ಯಾ ನೊಡಲು ಹೋಗುತ್ತಾರೆ. ಹಿಂದಿನ ಕಾಲದಲ್ಲಿ ಹಿರಿಕರು ಮಾತ್ರ ಹೋಗಿ ನೋಡಿ ನಿಶ್ಚಯಿಸಿಕೊಂಡು ಬರುತ್ತಿದ್ದರು.

**ಸಾಲಾವಳಿ ಪರೀಕ್ಷೆ**

ಕನ್ಯೆ ನೋಡಿ ಹೋಗುವ ವರನ ಪಕ್ಷದವರು ಕನ್ಯೆಯ ಜನನ ಕುಂಡಲಿ, ಜನ್ಮ ನಾಮ, ತೆಗೆದುಕೊಂಡು ಹೋಗುತ್ತಾರೆ. ಹುಡುಗನ ಜನ್ಮ ನಾಮ, ಜನನ ಕುಂಡಲಿ ಸಾಲವಳಿ ಬಂದರೆ ಮದುವೆ ವಿಚಾರದಲ್ಲಿ ಮುಂದುವರೆಯುತ್ತಾರೆ. ಹುಡುಗ–ಹುಡುಗಿಯರ ಗುಣ ಸ್ವಭಾವಗಳು, ನಕ್ಷತ್ರಗಳು ಹಾಗು ಇವರಿಬ್ಬರಲ್ಲಿ ಅಧಿಪತಿ ಯಾರು? ಹೊಂದುತ್ತದೆಯೋ ಇಲ್ಲವೋ ಎಂದು ಪಂಚಾಂಗದ ಪ್ರಕಾರ ಶಾಸ್ತ್ರಿಗಳಿಂದ ತಿಳಿದುಕೊಂಡು, ಇಬ್ಬರದೂ ಜಾತಕ ಹೊಂದಿದ್ದರೆ ಕನ್ಯೆಯನ್ನು ತೆಗೆದುಕೊಳ್ಳಬೇಕೆಂದು ನಿಶ್ಚಯಿಸುತ್ತಾರೆ. ತಳವಾರರಲ್ಲಿ ವಿಶೇಷವಾಗಿ ಒಂದೇ ಗೋತ್ರದವರಿದ್ದರೆ ಮದುವೆ ನಡೆಯುವುದಿಲ್ಲ. ಬದಲಾಗಿ ಹೆಣ್ಣು, ಗಂಡಿನ ಗೋತ್ರ ಮತ್ತು ಬೆಡಗುಗಳು ಬೇರೆ ಬೇರೆಯಾಗಿದ್ದರೆ ಮಾತ್ರ ವಿವಾಹ ನಿಶ್ಚಯ ಮಾಡುತ್ತಾರೆ.

**ಮನೆತನ ನೋಡುವುದು**

ಸಾಮಾನ್ಯವಾಗಿ ಮನೆತನ ನೋಡಲು ಬರುವವರು ಮಗಳಿಗೂ ಈತನಿಗೂ ಆಗುವ ವರ ಸಾಮ್ಯತೆ, ವರನ ಉದ್ಯೋಗ ಮತ್ತು ಅವನ ಸಹೋದರ, ಸಹೋದರಿಯರು ಮತ್ತು ತಂದೆ ತಾಯಿಯ ಗುಣಸ್ವಭಾವ, ಅವರ ಮನೆತನದ ಸಂಸ್ಕೃತಿ ಮುಂತಾದವುಗಳನ್ನು ಸೂಕ್ಷ್ಮವಾಗಿ ಗಮನಿಸುತ್ತಾರೆ. ಕನ್ಯೆಯ ಗುಣ ಸ್ವಭಾವಕ್ಕೆ ತಕ್ಕಂತೆ ವರನ ಮನೆಯವರು ಇದ್ದರೆ ಕನ್ಯೆಯ ಮನೆಯವರಿಗೆ ಮನಸ್ಸಿಗೆ ಬಂದಿದೆ ಎಂದರ್ಥ. ಇದನ್ನೇ ಮನೆತನ ನೋಡುವುದು ಎಂದು ಕರೆಯುತ್ತಾರೆ.

**ಉಡಿ ತುಂಬುವ ಕಾರ್ಯ**

ವಿವಾಹದ ನಿರ್ದಿಷ್ಟ ಕ್ರಿಯೆ ಉಡಿ ತುಂಬುವ ಕಾರ್ಯದಿಂದ ಪ್ರಾರಂಭವಾಗುತ್ತದೆ. ಒಳ್ಳೆಯ ಮಹೂರ್ತದ ದಿನದಂದು ಗಂಡಿನ ಮನೆಯವರು ಹೆಣ್ಣಿನ ಮನೆಗೆ ಬಂದು, ಉಡಿ ತುಂಬುವ ಮೂಲಕ ಹೆಣ್ಣನ್ನು ನಿಶ್ಚಯಗೊಳಿಸಿಕೊಳ್ಳುತ್ತಾರೆ. ಗಂಡಿನ ಕಡೆಯವರು ಅಂದು ಒಂದು ಸೀರೆ, ಎರಡು ಕುಪ್ಪಸ(ಹಸಿರು, ಬಿಳಿ) ಎರಡು ತೆಂಗಿನ ಕಾಯಿ, ಹಣ್ಣು, ಹೂಗಳನ್ನು ತೆಗೆದುಕೊಂಡು ಬರುತ್ತಾರೆ. ಕರಿ ಕಂಬಳಿಯನ್ನು ಹಾಸಿ ವಧುವನ್ನು ಗದ್ದುಗೆಯ ಮೇಲೆ ಕುಳ್ಳಿರಿಸಿ ಆರತಿ ಬೆಳಗಿ

ಕಾಯಿ–ಕುಪ್ಪಸ ಉಡಿ ತುಂಬುತ್ತಾರೆ. ಹೂ ತಲೆಗೆ ಮುಡಿಸಿ, ಅರಿಶಿನ ಕುಂಕುಮ ಇಟ್ಟು, ಹೆಣ್ಣು ತಮ್ಮ ಮನೆಗೆ ಸೇರಿದವಳು ಎಂದು ನಿಶ್ಚಯಿಸುತ್ತಾರೆ.

**ವೀಳ್ಯಶಾಸ್ತ್ರ**

ನಿಶ್ಚಯ ಶಾಸ್ತ್ರದ ಅಂಗವಾಗಿ ನಡೆಯುವ ಈ ಕಾರ್ಯಕ್ರಮದಲ್ಲಿ ನೆಲದ ಮೇಲೆ ಹಾಸಿದ ಕಂಬಳಿಯ ಗದ್ದಿಗೆಯ ಮೇಲೆ ೯ ವೀಳ್ಯದೆಲೆಯನ್ನು ಇಡುತ್ತಾರೆ. ಅದರ ಮೇಲೆ ಅಕ್ಕಿ ಸಕ್ಕರಿ ಇಟ್ಟಿರುತ್ತಾರೆ. ಜೊತೆಗೆ ಕಳಸವನ್ನು ಪ್ರತಿಷ್ಠಾಪಿಸಿ, ಊರಿನ ಮುಖಂಡರ ಸಮಕ್ಷಮದಲ್ಲಿ ಪರಸ್ಪರ ಮಾತುಕತೆ ಮಾಡಿ, ಸಿಹಿ ಹಂಚಿ, ವಿಳ್ಯೆ ನೀಡುತ್ತಾರೆ. ಹೆಣ್ಣಿಗೆ ಹಸಿರು ಸೀರೆ, ಹಸಿರು ಬಳೆ, ಹೂವು, ಹಣ್ಣು ಹಾಗು ಉಡಿ ತುಂಬುವ ಸಾಮಗ್ರಿ(ಒಣ ಕೊಬ್ಬರಿ ಬಟ್ಟಲು ೫, ಅರಿಶಿನ ಕೊಂಬು ೫, ಉತ್ತತ್ತಿ ೫, ಬೆಳ್ಳುಳ್ಳಿ ೫ ಮತ್ತು ಎಲೆ ಅಡಿಕೆ, ಸಕ್ಕರೆ, ಒಂದು ಜೊತೆ ಬಂಗಾರದ ಓಲೆ ಅಥವಾ ಬೆಳ್ಳಿಯ ಕಾಲ್‌ಚೈನ್ ಹಾಗೂ ಬುಗುಡಿ) ತರುವುದು ನಿಯಮ. ಅದನ್ನು ದೈವದ ಸಮಕ್ಷಮ ಹಿರಿಯರಿಗೆ ಒಪ್ಪಿಸುತ್ತಾರೆ. ಹಾಗೆಯೇ ಕನ್ಯೆಯ ಕಡೆಯವರು ವರನಿಗೆ ಒಂದು ಜೊತೆ ಹೊಸಬಟ್ಟೆ ಬಂಗಾರದ ಉಂಗುರ, ಪರಸ್ಪರ ವಿನಿಮಯ ಮಾಡಿಕೊಳ್ಳುತ್ತಾರೆ. ಅಂದು ವಧುವಿನ ತಂದೆ/ತಾಯಿ ಹಾಗು ವರನ ತಂದೆ/ತಾಯಿ ಸೇರಿ ವೀಳ್ಯದೆಲೆಯಿಂದ ಸಕ್ಕರೆ ಬಾಯಿಗೆ ಪರಸ್ಪರ ಹಾಕಿ ಸಂತೋಷ ಹಂಚಿಕೊಂಡು, ಇತರರಿಗೂ ಸಕ್ಕರೆ ಹಾಗೂ ವೀಳ್ಯೆದೆಲೆಯನ್ನು ಹಂಚುತ್ತಾರೆ. ಅದೇ ರೀತಿ ಪರಸ್ಪರ ಫಲತಾಂಬುಲವನ್ನು ಸ್ವೀಕರಿಸುತ್ತಾರೆ. ನಂತರ ಹೆಣ್ಣನ್ನು ಸಿಂಗರಿಸಿ, ಉಡಿ ತುಂಬುತ್ತಾರೆ. ಗಂಡಿನವರು ತಂದ ಓಲೆ, ಕಾಲುಚೈನ್ ಹಾಕುತ್ತಾರೆ. ನಂತರ ವರನ ಜೊತೆ ಕೂಡಿಸಿ ಆರತಿ ಮಾಡುತ್ತಾರೆ. ಎರಡು ಮನೆಯವರು ತಂದ ಉಂಗುರವನ್ನು ವಧು, ವರರಿಬ್ಬರು ಬದಲಾಯಿಸುತ್ತಾರೆ.

**ಮಿತಿ ನೇಮಿಸುವುದು**

ಈ ಎರಡು ಮನೆಯವರು ಸೇರಿ ಪಂಚಾಂಗದ ಸಹಾಯದಿಂದ ಒಂದು ಶುಭ ಮಹೂರ್ತವನ್ನು ಆಯ್ಕೆ ಮಾಡಿ ಮದುವೆಗೆ ಬೇಕಾದ ಎಲ್ಲ ಸಲಕರಣೆಗಳನ್ನು ಜೋಡಿಸಿಕೊಳ್ಳಲು ತೊಡಗುತ್ತಾರೆ. ಈ ರೀತಿ ನಿಶ್ಚಯಿಸಿದ ಉತ್ತಮ ಕಾರ್ಯಕ್ಕೆ 'ಮಿತಿ ನೇಮಿಸುವುದು' ಎಂದು ಕರೆಯುತ್ತಾರೆ. ಈ ಮಿತಿ ನೇಮಿಸಿದ ನಂತರ ಎಲ್ಲಾ ಕೆಲಸ ಕಾರ್ಯಗಳು ಬರದಿಂದ ಸಾಗುತ್ತದೆ. ಮನೆ ಸಾರಿಸುವುದು, ಸ್ವಚ್ಚಗೊಳಿಸುವುದು, ಹಾಸಿಗೆ, ಬಟ್ಟೆ ಬರೆ ಸ್ವಚ್ಚಗೊಳಿಸುತ್ತಾರೆ. ಇವರು ಒಮ್ಮೆ ಮಿತಿ ನೇಮಿಸಿದ ನಂತರ ಒಂದು ವರ್ಷಕ್ಕೆ ಆಗುವಷ್ಟು ಉಪ್ಪು, ಕಸಬರಿಗೆ, ಮೊರ, ಪುಟ್ಟಿಗಳನ್ನು ಖರಿದಿಸುತ್ತಾರೆ. ಯಾವುದೇ ಕಾರಣಕ್ಕೂ ಈ ವಸ್ತುಗಳನ್ನು ಆ ವರ್ಷ ಖರೀದಿಸುವುದಿಲ್ಲ. ಖರೀದಿಸಿದರೆ ಅಪಶಕುನ ಎಂಬ ನಂಬಿಕೆ ಅವರಲ್ಲಿದೆ.

## ಜವಳಿ ಖರೀದಿ

ಮದುವೆ ತಯಾರಿಯಲ್ಲಿ ಜವಳಿ ಖರೀದಿಯೂ ಅತೀ ಪ್ರಮುಖವಾಗಿದೆ. ಇಲ್ಲಿ ಮತುಕತೆಯಲ್ಲಿ ಮಾತನಾಡಿದ ಪ್ರಕಾರ ಜವಳಿಯನ್ನು ಎರಡು ಮನೆಯವರು ಸೇರಿ ತೆಗೆದು ಕೊಳ್ಳುತ್ತಾರೆ. ಪ್ರಮುಖವಾಗಿ ವಧುವಿಗೆ ೫ ಸೀರೆ, ೯ ಖಣಗಳು, ವರನಿಗೆ ಬೇಕಾಗುವ ಕೆಂಪು ವಸ್ತ್ರ, ಶಲ್ಯ ಹಾಗೂ ಒಂದು ಜೊತೆ ಕೇಳಿದಂತಹ ಬಟ್ಟೆ ಕೊಡಿಸುತ್ತಾರೆ. ಹಾಗು ಸಂಬಂಧಿಕರಿಗೆ ಉಡುಗೊರೆ ಕೊಡಲು ಬಟ್ಟೆಗಳನ್ನು ಖರೀದಿಸುತ್ತಾರೆ.

## ಅರಿಶಿಣ ಕುಂಕುಮ ಕೊಡುವುದು

ಒಳಕಲ್ಲು ಪೂಜೆಗಿಂತ ಮುಂಚೆ ಮತ್ತೊಮ್ಮೆ ಅಯ್ಯನವರನ್ನು ಕರೆಸಿ ಒಳಕಲ್ಲು ಪೂಜೆಗೆ ಉತ್ತಮ ದಿನವನ್ನು ಮತ್ತು ಮದುವೆಯಲ್ಲಿ ಓಡಾಡಲು ಬೇಕಾಗುವ ಐದು ಜನ ಮುತ್ತೈದೆಯರನ್ನೂ ಅಲ್ಲದೇ ಆರತಿ ಹಿಡಿಯಲು, ಬಾಸಿಂಗ ಕಟ್ಟಲು, ಅರಿಶಿಣ ಕುಂಕುಮ ಕೊಡಲು, ಹಸ್ತದಿಂದ ಗೋಡೆಗೆ ಛಟ್ಟ ಬಡಿಯುವರು, ಇವರನ್ನು ಅಯ್ಯನವರು ಜನ್ಮನಾಮ ಮತ್ತು ಗುಣಗಳಿಂದ ಉತ್ತಮವಾಗಿರುವವರನ್ನು ಆಯ್ಕೆ ಮಾಡುತ್ತಾರೆ.

## ಒಳಕಲ್ಲು ಪೂಜೆ

ಮೊದಲು ಕಾರ್ಯಕ್ರಮ ಪ್ರಾರಂಭವಾಗುವುದೇ ಒಳಕಲ್ ಪೂಜೆಯಿಂದ. ಪ್ರಾರಂಭದಲ್ಲಿ ಕೆಲವು ದಶಕಗಳ ಹಿಂದೆ ಒಳಕಲ್ ಪೂಜೆಯನ್ನು ಮದುವೆಗೆ ಮುಂಚೆ ಒಂದು ತಿಂಗಳಿರುವಾಗಲೇ ಮಾಡುತ್ತಿದ್ದರು. ಇಂದು ೩ ದಿನ, ೨ ದಿನ ಇರುವಾಗ ಮಾಡುತ್ತಾರೆ. ಮೊದಲು ಬೀಗರಿಗೆ ಅಡಿಗೆ ವಸ್ತುಗಳನ್ನು ಇದರಿಂದಲೇ ಸಿದ್ದಪಡಿಸಿ ಕೊಳ್ಳುತ್ತಿದ್ದರಿಂದ ಇದನ್ನು ಮುಂಚೆಯೇ ಪ್ರಾರಂಭಿಸುತ್ತಿದ್ದರು. ಇಂದು ಗಿರಣಿಗಳು ಬಂದುದರಿಂದ ಅಡಿಗೆಗೆ ಬೇಕಾಗುವ ವಸ್ತುಗಳು ಸಿದ್ಧರೂಪದಲ್ಲಿಯೇ ಸಿಗುತ್ತಿರುವುದರಿಂದ ಇಂದು ೨ ದಿನ ಇರುವಾಗಲೇ ಈ ಪೂಜೆ ಮಾಡುತ್ತಾರೆ. ಪೂಜೆ ಮಾಡುವಾಗ ಅಕ್ಕಪಕ್ಕದವರಿಗೂ ಕರೆಯುತ್ತಾರೆ. ೫ ಜನ ಮುತ್ತೈದೆಯರು ಸೇರಿ ಈ ಪೂಜೆ ಮಾಡಿ ಅವರಲ್ಲಿ ೫ ಕಾಳಿನ ಧಾನ್ಯಗಳನ್ನು ಹಾಕಿ ಒನಕೆಯಿಂದ ಕುಟ್ಟುತ್ತಾರೆ. ನಂತರ ನೆರೆದವರಿಗೆ ಸಿಹಿ ಹಂಚುತ್ತಾರೆ.

## ಬೀಸುವಕಲ್ಲು ಪೂಜೆ

ಒಳಕಲ್ ಜೊತೆ ಬೀಸುವಕಲ್ಲಿಗೂ ಪೂಜೆ ನೆರವೇರಿಸುತ್ತಾರೆ. ಬೀಸುಕಲ್ಲಿಗೆ ಸುಣ್ಣ ಹಾಗೂ ಕೆಂಪು ಮಣ್ಣು ಸುತ್ತಲೂ ಹಚ್ಚಿ, ಅರಿಶಿಣ ಕುಂಕುಮ ಹಚ್ಚಿ, ಎಲೆ ಅಡಿಕೆ ಇಟ್ಟು ಪೂಜೆ ಮಾಡುತ್ತಾರೆ.

"ಮಾಡಿಸಿದೊನಕಿಗಿ ಮಾವಿನ ತೊಳಲನು ಕಟ್ಟಿ
ಕೆತ್ತಿಸಿದೊನಕಿಗಿ ಮುತ್ತಿನ ತೊಳಲನು ಕಟ್ಟಿ
ಜಂಬಿಯ ಒನಕಿಗಿ ನಿಂಬಿ ತೊಳಲನು ಕಟ್ಟಿ"[೩]

ಎಂದು ಒನಕಿ, ಬೀಸುಕಲ್ಲು, ಒಳಕಲ್ ಪೂಜೆ ಮಾಡುತ್ತಾರೆ. ರಾಯಚೂರು ಜಿಲ್ಲೆಯ ಕೆಲವು ಭಾಗಗಳಲ್ಲಿ ಈ ಒಳಕಲ್ಲು ಮತ್ತು ಬೀಸುಕಲ್ಲುಗಳಿಗೆ 'ಗೌರಮ್ಮನ ಸ್ವರೂಪ'ವೆಂದು ತಿಳಿದು ಸೀರೆಗಳನ್ನು ಉಡಿಸಿ ಕಲ್ಲು ಮತ್ತು ಒರಳಿಗೆ ೫ ಉಡಿಗಳನ್ನಿಟ್ಟು ನೈವೇದ್ಯ ಹಿಡಿಯುತ್ತಾರೆ.

**ಜವಳಿ ಪೂಜೆ**

ಸ್ವಾಮಿಗಳ ಸಮ್ಮುಖದಲ್ಲಿ ಮನೆಯ ಪಡಸಾಲೆ ಅಥವಾ ದೇವರ ಮನೆ ವಿಶಾಲವಾಗಿದ್ದರೆ ಅಲ್ಲಿಯೇ ಕರಿ ಕಂಬಳಿ ಹಾಸಿ, ಅದರ ಮೇಲೆ ಸಾಲಾಗಿ ಅಕ್ಕಿ ಗುಂಪು ಹಾಕಿ, ಜವಳಿ ತೆಗೆದಿರುವ ಬಟ್ಟೆಗಳಿಗೆ ಪೂಜೆ ಮಾಡಿ ಮೂರು ಕಳಶ ಸ್ಥಾಪಿಸುತ್ತಾರೆ. ಮಧ್ಯ ಕಳಶಕ್ಕೆ ಒಂದು ತಂಬಿಗೆ ತುಂಬಿ ಇಟ್ಟು ಅದರ ಮೇಲೆ ತೆಂಗಿನಕಾಯಿ ಇಡುತ್ತಾರೆ. ಇದು 'ವರಣ ದೇವ'ನನ್ನು ಪ್ರತಿನಿಧಿಸಿದರೆ, ಇನ್ನು ಎರಡು ಕಳಶ ಒಂದು ಪಾರ್ವತಿ ದೇವಿ ಮತ್ತು ವಿಘ್ನೇಶ್ವರನನ್ನು ಪ್ರತಿನಿಧಿಸುತ್ತವೆ. ಮದುವೆಯ ಸಮಯದಲ್ಲಿ ಯಾವುದೇ ವಿಘ್ನಗಳು ಬಾರದಿರಲಿ ಎಂಬ ನಂಬಿಕೆಯಿಂದ ಇಂತಹ ಕಾರ್ಯವನ್ನು ಮಾಡುತ್ತಾರೆ.

**ಲಗ್ನದಕ್ಕಿ ಗಂಟನ್ನು ಕಟ್ಟುವುದು**

ಕಂಬಳಿಯ ಮೇಲೆಯೇ ಲಗ್ನದಕ್ಕಿ ಗಂಟನ್ನು ಕಟ್ಟುತ್ತಾರೆ. ಪ್ರತಿಯೊಂದು ಶುಭ ಕಾರ್ಯದಲ್ಲಿ ಹೆಣ್ಣು ಮಕ್ಕಳಿಗೆ ಅಥವಾ ಮುತ್ತೈದೆಯರಿಗೆ ಉಡಿ ತುಂಬಿಯೇ ಕಾರ್ಯಕ್ರಮ ಪ್ರಾರಂಭಿಸುವುದರಿಂದ ಅದರ ದ್ಯೋತಕವಾಗಿಯೇ ಈ ಲಗ್ನದ ಅಕ್ಕಿಗಂಟನ್ನು ಕಟ್ಟುತ್ತಾರೆ.

ಸಾಮಾನ್ಯವಾಗಿ ಎರಡು ಅಡಿ ಚೌಕಾಕಾರದ ಎರಡು ಬಿಳಿ ಅರಿವೆಗಳನ್ನು ತೆಗೆದುಕೊಂಡು ಹಸೆಹೊಯ್ದು ಆ ಕರಿ ಕಂಬಳಿಯ ಮೇಲೆ ಹಾಸಿ ಅದರ ನಾಲ್ಕೂ ಮೂಲೆಗಳನ್ನು ನಾಲ್ಕು ಜನ ಮುತ್ತೈದೆಯರು ಹಿಡಿದುಕೊಂಡಿದ್ದರೆ ಇನ್ನೊಬ್ಬ ಮುತ್ತೈದೆ ಆ ಅರಿವೆಗೆ ಅಕ್ಕಿಯನ್ನು ಅಳೆದು ಹಾಕುತ್ತಾಳೆ. ಉದಾಹರಣೆಗೆ ಉಡಿಯಕ್ಕಿ ಗಂಟಿಗೆ ಐದು ಚಟಾಕ ಅಕ್ಕಿಯನ್ನು ಹಾಕಿದರೆ ಕಳಿಸುವ ದೊಡ್ಡ ಗಂಟಿಗೆ ಹತ್ತು ಚಟಾಕ ಅಕ್ಕಿ ಹಾಕುತ್ತಾರೆ ಮತ್ತು ದೊಡ್ಡ ಗಂಟಿನಲ್ಲಿ ಐದೈದರಂತೆ ಬೆಟ್ಟ ಅಡಿಕೆ, ಕೊಬ್ರಿಬಟ್ಲ, ಎಲಿ, ಅರಿಶಿಣಕೊಂಬು, ಉತ್ತತ್ತಿ, ಲಿಂಬೆ ಹಣ್ಣು, ಬೆಲ್ಲ, ಎರಡು ಜಂಪರ್ ಪೀಸ್, ೧೦೧ ರೂಪಾಯಿ ಕಾಣಿಕೆ, ಒಂದು ಲಗ್ನದ ಪತ್ರ ಹಾಕುತ್ತಾರೆ. ವರನ ಮನೆಯವರು, ಸಮುದಾಯದ ಹಿರಿಯರು, ವಧುವಿನ ಕಡೆಯವರು ಊರಿನ ಗುರು

ಹಿರಿಯರು ಹಾಗೂ ದೈವದವರು ಸೇರಿ ಸ್ವಾಮಿಯ ಮುಖಾಂತರ ಪೂಜೆ ನೆರವೇರಿಸುತ್ತಾರೆ. ದೊಡ್ಡಗಂಟು ವಧುವಿನ ಮನೆಗೆ ಕಳುಹಿಸಿ ಕೊಡುತ್ತಾರೆ. ಈ ಗಂಟು ವಧುವು ವರನ ಮನೆಗೆ(ಮದುವೆಯ ಹಿಂದಿನ ದಿನ) ಹೋಗುವಾಗ ತೆಗೆದುಕೊಂಡು ಹೋಗಬೇಕು. ಇದು ಇಲ್ಲದೇ ಹೋದಲ್ಲಿ ವರನ ಮನೆಯ ಮುಂದಿನ ಕಾರ್ಯಕ್ರಮ ಜರುಗುವುದಿಲ್ಲ. ಹಾಗಾಗಿ ಲಗ್ನದ ಅಕ್ಕಿಗಂಟು ಮದುವೆ ಕಾರ್ಯಕ್ರಮದಲ್ಲಿ ಪ್ರಮುಖ ಪಾತ್ರವಹಿಸುತ್ತದೆ.

**ಚಪ್ಪರಶಾಸ್ತ್ರ**

ವರನ ಮನೆಯ ಮುಂದೆ ಮದುವೆಯ ಮುಹೂರ್ತದ ಮೂರು ದಿನ ಮೊದಲು ಈ ಚಪ್ಪರವನ್ನು ಹಾಕಲಾಗುತ್ತದೆ. ವಿವಿಧ ಅಂಕಣಗಳ ಅಳತೆಗನುಸಾರ ಚಪ್ಪರದ ಕಂಬಗಳನ್ನು ನೆಡುತ್ತಾರೆ. ಅವುಗಳಲ್ಲಿ ಒಂದು ಕಂಬಕ್ಕೆ ಸುಣ್ಣ, ಕೆಮ್ಮಣ್ಣು ಹಚ್ಚಿ, ಮಾವಿನ ತಳಿರನ್ನು ಕಟ್ಟಿರುತ್ತಾರೆ. ನಂತರ ಸ್ವಾಮಿಗಳು ಆ ಗುಳಿಯಲ್ಲಿ ಪಂಚಾಮೃತ, ನಾಣ್ಯ, ಅರಿಶಿಣ, ಕುಂಕುಮ ಹಾಕಿ ಆ ಕಂಬವನ್ನು ಗುಳಿಯಲ್ಲಿಟ್ಟು ನಿಲ್ಲಿಸುತ್ತಾರೆ. ನಂತರ ಅದಕ್ಕೆ ಅರಿಶಿಣ, ಉತ್ತತ್ತಿ, ಅಡಿಕೆ ಮುಂತಾದ ವಸ್ತುಗಳನ್ನು ಒಂದು ಅರಿವೆಯಲ್ಲಿ ಹಾಕಿ ಕಂಬಕ್ಕೆ ಕಟ್ಟಿ ಕಂಬವನ್ನು ವಿಭೂತಿ, ಕುಂಕುಮ, ಹೂ, ಗಂಧ, ಅಕ್ಷತೆಗಳಿಂದ ಪೂಜಿಸುತ್ತಾರೆ. ಹಾಗೆಯೇ ಹಾಲಗಂಬವನ್ನೂ ಇದೇ ವೇಳೆಯಲ್ಲಿಯೇ ತಂದು ಕಟ್ಟಿ ಎರಡನ್ನು ಒಟ್ಟಿಗೆ ಪೂಜಿಸುತ್ತಾರೆ ಮತ್ತು ಮುತ್ತೈದೆಯರು ಆರತಿ ಮಾಡಿ, ಹಾಲುಗಂಬ ತಂದವನಿಗೆ ಖುಷಿ ಕೊಟ್ಟು ಆರತಿ ಮಾಡುತ್ತಾರೆ. ವಿಜಯಪುರ, ಬಾಗಲಕೋಟೆ, ಬೆಳಗಾವಿ ಕಡೆ ಹೆಚ್ಚಾಗಿ ಹಂದರ ಗಂಬಕ್ಕೆ ನೊಗವನ್ನೆ ಉಪಯೋಗಿಸುತ್ತಿದ್ದಾರೆ. ಧಾರವಾಡ, ಗದಗ, ಹುಬ್ಬಳ್ಳಿ ಕಡೆಗೆ ಹಸಿಟೊಂಗೆಯನ್ನು ತಂದು ಹಂದರಗಂಬದಂತೆ ನೆಡುತ್ತಾರೆ. ಕೊಪ್ಪಳ, ಬಳ್ಳಾರಿ, ರಾಯಚೂರು, ಗುಲ್ಬರ್ಗ ಕಡೆ ಬಿದಿರಿನ ಬೊಂಬು ಬಳಸುತ್ತಾರೆ. ನಂತರ ಮೇಲ್ಗಡೆ ತೆಂಗಿನ ಗರಿಗಳನ್ನು ಹಾಕಿ ನಂತರ ಹೊಂಗೆಯ ಟೊಂಗೆಗಳನ್ನು ಆಲದ ಮರದ ಟೊಂಗೆಗಳನ್ನು ಜೊತೆಗೆ ಮಾವನ ಮರದ ಟೊಂಗೆಗಳನ್ನು ಹಂದರದ ಮೇಲೆ ಹಾಕಲಾಗುತ್ತದೆ. ನಂತರ ಎಲ್ಲಾ ಕಂಬಳಿಗೂ ಕಂಕಣ ಕಟ್ಟುತ್ತಾರೆ. ಮಧ್ಯೆ ಹಂದರದ ಮೇಲ್ಭಾಗದ ಮೇಲೆ ತೆಂಗಿನ ಕಾಯಿಯನ್ನು ಬಿಳಿ ಬಟ್ಟೆಯಲ್ಲಿ ಕಟ್ಟಿ ಮಧ್ಯೆ ನೇತು ಹಾಕುತ್ತಾರೆ. ಇದಕ್ಕೆ ಹಂದರ ಕಾಯಿ ಎಂದು ಕರೆಯುತ್ತಾರೆ. ನಂತರ ಹಂದರ ಹಾಕಿದ ಐದು ಮಂದಿಗೆ, ನೆರೆದ ಜನರಿಗೆ ಸಿಹಿ ಊಟ ಉಣಬಡಿಸುತ್ತಾರೆ.

ಇದೇ ಸಂದರ್ಭದಲ್ಲಿ ವರನ ಅಕ್ಕ-ತಂಗಿ ದಂಪತಿಗಳು ಮನೆಗೆ ಚಟ್ಟು ಬಡಿಯುತ್ತಾರೆ. ಅಂದರೆ ಮನೆಯ ಸುತ್ತಲ ಗೋಡೆಗಳಿಗೆ ಕೆಮ್ಮಣ್ಣಿನಿಂದ ಮತ್ತು ಸುಣ್ಣದಿಂದ ಅಂಗೈ ಅಚ್ಚುಗಳನ್ನು ಹಾಕುತ್ತಾರೆ. ಇದು ದುಷ್ಟ ಶಕ್ತಿಗಳಿಗೆ ದಿಗ್ಬಂಧನ ಎಂಬ ನಂಬಿಕೆ ಅವರಲ್ಲಿದೆ.

## ದೇವತಾ ಕಾರ್ಯ

ದೇವರಿಗೆ ಪ್ರತ್ಯೇಕವಾದ ಸ್ಥಾನವನ್ನು ಕಲ್ಪಿಸಿದ ನಮ್ಮ ಜಾನಪದರು ಮದುವೆ ಮನೆಯ ಅನೇಕ ಕಾರ್ಯಕ್ರಮಗಳಲ್ಲಿ ಯಾವುದೇ ವಿಘ್ನಗಳು ಬರಬಾರದೆಂಬ ದೃಷ್ಟಿಯಿಂದ ಮನೆದೇವರು, ಕುಲದೇವರು, ಗ್ರಾಮದೇವರುಗಳಿಗೆ ಮಾಡುವ ಪೂಜೆಯೇ ದೇವತಾ ಕಾರ್ಯ. ಇಲ್ಲಿ ಮನೆಯ ಜಗಲಿಯಲ್ಲಿರುವ ಎಲ್ಲ ದೇವರ ಮೂರ್ತಿಗಳನ್ನು ಪೂಜಿಸುವುದರ ಜೊತೆಗೆ ವಿಶೇಷವಾಗಿ ತಳವಾರರು ತಮ್ಮ ಆಯುಧಗಳನ್ನು ಜಗುಲಿಯ ಮೇಲಿಟ್ಟು ಪೋಜಿಸುತ್ತಾರೆ.

## ಲಕ್ಷ್ಮೀ ಪೂಜೆ

ಮನೆಯಲ್ಲಿದ್ದ ಲಕ್ಷ್ಮಿ ಕಂಬಕ್ಕೆ ಮದುಮಗಳ ರೇಷ್ಮೆ ಸೀರೆಯನ್ನು ಗಳಿಗೆ ಮುರಿಯದೆ ತ್ರಿಕೋಣಾಕಾರವಾಗಿ ಮಡಚಿ, ಖಣ ಇಟ್ಟು ಬಂಗಾರದ ಆಭರಣ ಹಾಕಿ, ಪೂಜಿಸಿ ತಮ್ಮೊಂದಿಗೆ ಈ ಲಕ್ಷ್ಮಿಗೂ ಉಡಿ ತುಂಬುತ್ತಾರೆ. ನಂತರ ಹೋಳಿಗೆ ನೈವೇದ್ಯ ಮಾಡಿ ತಾವು ಊಟ ಮಾಡಿ ಉಳಿದದ್ದನ್ನು ಹೊರಗಡೆ ಚಲ್ಲದೇ ಅಲ್ಲಿಯೇ ಗುಳಿ ತೋಡಿ ಅದರಲ್ಲಿ ಉಳಿದ ಊಟವನ್ನೆಲ್ಲ ಅದರಲ್ಲಿ ಹಾಕಿ ಗುಳಿ ಮುಚ್ಚಿ ಯಥಾ ಪ್ರಕಾರ ಪೂಜೆ ಮಾಡುತ್ತಾರೆ. ಅಂದು ವಿಶೇಷವಾಗಿ ಮಧ್ಯರಾತ್ರಿ ೧೨ ಗಂಟೆಯ ನಂತರ ಪೂಜೆ ಮಾಡುತ್ತಾರೆ.

## ಬಳೆಶಾಸ್ತ್ರ

ಹಂದರ ಹಾಕಿದ ದಿನವೇ ಅಕ್ಕಪಕ್ಕದ ಮುತ್ತೈದೆಯರಿಗೆ, ಮಕ್ಕಳಿಗೆ, ಬಂಧುಗಳಿಗೆ, ಮನೆಯವರಿಗೆ ಬಳೆಗಾರರಿಂದ ಹಸಿರುಬಳೆಯನ್ನು ಹಾಕಿಸುತ್ತಾರೆ. ಇದಕ್ಕೆ 'ಬಳಗದ ಬಳಿ' ಇಡಿಸುವುದು ಎಂದು ಕರೆಯುತ್ತಾರೆ. ಓಣಿಯಲ್ಲಿ ಮನೆಗೆ ಒಬ್ಬೊಬ್ಬರಂತೆ ಸ್ತ್ರೀಯರು ಬಂದು ಈ ಬಳೆಗಳನ್ನು ಹಾಕಿಕೊಂಡು ಹೋಗುತ್ತಾರೆ.

## ಎದುರುಗೊಳ್ಳುವುದು

ಲಗ್ನದಕ್ಕಿಗಂಟಿನ ಜೊತೆಗೆ ವರನ ಮನೆಯ ಕಡೆಯಿಂದ ವಧುವಿನ ಮನೆಗೆ ಮದುವೆ ಒಂದರೆಡು ದಿನ ಮೊದಲೇ ಇರುವಾಗ ಅಥವಾ ಮದುವೆಗೆ ಹಿಂದಿನ ದಿನ ಹೋಗುತ್ತಾರೆ. ಮದುವೆಗಾಗಿ ನಾವು ತಯಾರಿ ಮಾಡಿದ್ದೇವೆ. ನಿಮ್ಮ ಕನ್ಯೆಯನ್ನು ಕರೆದುಕೊಂಡು ಬನ್ನಿ ಎಂದು ಅಕ್ಕಿಗಂಟಿನೊಂದಿಗೆ ವೀಳ್ಯ ಕೊಡಲು ಹೋದವರಂತೆ ಕಾಣುವ ಇವರನ್ನು ವಿಶೇಷವಾಗಿ ಸ್ವಾಗತಿಸುತ್ತಾರೆ. ನಂತರ ಇವರು ತಂದಂತಹ ಗಂಟನ್ನು ವಧುವಿನ ಊರಿನ ಅಯ್ಯನವರಿಂದ ಪೂಜಿಸಿ ಬಿಚ್ಚಿಸುತ್ತಾರೆ. ಅದರಲ್ಲಿನ ಅಕ್ಕಿಯನ್ನು ತೆಗೆದುಕೊಂಡು ಅನ್ನ ಮಾಡಿ, ದೇವರಿಗೆ ನೈವೇದ್ಯ ಹಿಡಿಯುತ್ತಾರೆ. ನಂತರ ಬಂದ ಬೀಗರರಿಗೆ ಊಟ ಮಾಡಿಸುವರು.

ಇತ್ತ ಮದುವೆ ಹಿಂದಿನ ದಿನ ಗ್ರಾಮದ ಜನರೊಡನೆ ವಾಹನದ ಮೂಲಕ ಗಂಡಿನ ಮನೆಗೆ ಹೋಗುತ್ತಾರೆ. ಗಂಡಿನ ಕಡೆಯವರು ಇವರಿಗೆ ಎದುರುಗೊಳ್ಳುತ್ತಾರೆ. ಬೀಗ ಬೀಗರ ಭೇಟಿಯೇ ಎದುರುಗೊಳ್ಳುವುದು. ಬಳ್ಳಾರಿ ಕೊಪ್ಪಳ, ರಾಯಚೂರಿನ ಭಾಗದ ಕಡೆಗೆ ಇವು ಹೆಚ್ಚು ಚಾಲ್ತಿಯಲ್ಲಿದೆ. ಈ ಸಂಪ್ರದಾಯ ಊರಿನ ಚಾವಡಿಯ ವಿಶಾಲವಾದ ಪ್ರದೇಶದಲ್ಲಿ ವಧುವಿನ ಕಡೆಯವರಿಗೆ ಎದುರುಗೊಂಡು ಕಂಬಳಿಯ ಮೇಲೆ ವಧುವನ್ನು ಕುಳ್ಳಿರಿಸಿ ಆರತಿ ಮಾಡಿ, ಅವರಿಗೆ ಉಳಿದುಕೊಳ್ಳಲು ವ್ಯವಸ್ಥೆ ಮಾಡಿರುತ್ತಾರೆ. ಶಾಲೆಯಲ್ಲಿ ಅಥವಾ ದೇವಸ್ಥಾನದಲ್ಲಿ ಬಂದ ಬೀಗರೆಲ್ಲಾ ಅಲ್ಲೆ ಉಳಿದುಕೊಂಡು ಮದುವೆಯಾದ ದಿನ ವರನ ಮನೆಗೆ ಪ್ರವೇಶಿಸುತ್ತಾರೆ.

ಉತ್ತರ ಕರ್ನಾಟಕ ಪ್ರದೇಶಗಳಾದ ಬಿಜಾಪುರ, ಬಾಗಲಕೋಟೆ, ಗದಗ, ರಾಯಚೂರು, ಕೊಪ್ಪಳ, ಗುಲ್ಬರ್ಗಾ ಬೀದರ್ ಮೊದಲಾದ ಪ್ರದೇಶಗಳಲ್ಲಿ ಬೀಗರನ್ನು ಕರೆ ತರುವಾಗ ಬೀಗರಿಗೆ (ಗುಲಾಬಿ ಬಣ್ಣಪುಡಿ) ಎರಚುವ ಅಥವಾ ಮುಖಕ್ಕೆ ಹಚ್ಚುವ ಸಂಪ್ರದಾಯವಿದೆ. ಇದೊಂದು ಸಂತಸದ ಸಂಗತಿಯೆಂದು ಆಚರಣೆ ಮಾಡುತ್ತಾರೆ. ಯಾರೊಬ್ಬರು ಒಬ್ಬರ ಮೇಲೊಬ್ಬರು ಕೋಪಗೊಳ್ಳುವುದಿಲ್ಲದಿರುವುದು ವಿಶೇಷ.

### ದೊಡ್ಡ ಇಳೇವು

ಮದುವೆಯ ಮುನ್ನ ದಿನದ ರಾತ್ರಿ ವಿಳ್ಯೆ ಕಾರ್ಯ ನಡೆಸಲಾಗುತ್ತದೆ. ಸಾಮಾನ್ಯವಾಗಿ ನಿಶ್ಚಿತಾರ್ಥ ಮಾಡಿದಂತೆ ಈ ಕಾರ್ಯಕ್ರಮವನ್ನು ಶಾಸ್ತ್ರೋಕ್ತವಾಗಿ ನೆರವೇರಿಸಲಾಗುತ್ತದೆ. ಈ ಕಾರ್ಯಕ್ರಮದ ವಿಶೇಷವೆಂದರೆ ಮದುಮಗಳನ್ನು ಕೂಡಿಸಿ ಹೊಸಸೀರೆಯನ್ನು ಉಡಿಸಿ, ಉಡಿ ತುಂಬುತ್ತಾರೆ. ಒಟ್ಟಿನಲ್ಲಿ ನಾಯಕ ತಳವಾರ ಸಮುದಾಯದಲ್ಲಿ ಇವು ವಿಜೃಂಭಣೆಯಿಂದ ಆಚರಿಸುತ್ತಾರೆ. ಬೀಗರು ಬರುವುದು ಸ್ವಲ್ಪ ತಡವಾದರೂ ರಾತ್ರಿ ಎಷ್ಟೇ ಸಮಯವಾದರೂ ಈ ಕಾರ್ಯಕ್ರಮವನ್ನು ನಡೆಸುತ್ತಾರೆ. ಇಲ್ಲಿಯ ವಿಶೇಷವೆಂದರೆ ವಧುವಿನ ಜೊತೆ ವರನನ್ನು ಕೂಡಿಸುವುದಿಲ್ಲ. ತಾಳಿ ಕಟ್ಟುವ ಮುಂಚೆ ಅಂದರೆ ಸುರಗಿ ನೀರು ಹಾಕುವವರೆಗೂ ವಧು ವರರನ್ನು ಒಂದೆಡೆ ಸೇರಿಸುವುದಾಗಲಿ, ಕೂಡುವುದಾಗಲಿ ಇರುವುದಿಲ್ಲ. ಆದರೆ ಚಿತ್ರದುರ್ಗ, ಶಿವಮೊಗ್ಗ, ದಾವಣಗೆರೆ, ಮೈಸೂರು, ಬೆಂಗಳೂರು ಮೊದಲಾದ ಕಡೆಗಳಲ್ಲಿ ಗಂಡು-ಹೆಣ್ಣುಗಳನ್ನು ಜೊತೆಯಲ್ಲಿ ಕೂಡಿಸಿ, ಕಾರ್ಯಕ್ರಮವನ್ನು ಮಾಡುತ್ತಾರೆ. ಆದರೆ ಉತ್ತರ ಕರ್ನಾಟಕ ಭಾಗಗಳಲ್ಲಿ ಮದುವೆಯ ನಂತರ ಜೊತೆಯಲ್ಲಿ ಕೂಡಿಸಿ ಅನೇಕ ಆಚರಣೆ, ಕಾರ್ಯಕ್ರಮಗಳನ್ನು ಮಾಡಲಾಗುತ್ತದೆ.

### ಐರಾಣಿ ತರುವುದು

ದೇವಗಣದ ಪಂಚ ಮುತ್ತೈದೆಯರು ಮದುವೆ ಸಮಯದಲ್ಲಿ ಸುರಗಿ ಸುತ್ತಲು ಕುಂಬಾರನ ಮನೆಯಿಂದ ಐದು ಮಣ್ಣಿನ ಗಡಿಗೆಗಳನ್ನು ಪದ್ಧತಿ ಪ್ರಕಾರವಾಗಿ ಮೆರವಣಿಗೆಯಲ್ಲಿ ತರುವುದೇ

ಐರಾಣಿ ತರುವುದು. ಸುರಗಿ ಸುತ್ತಲು ಐರಾಣಿ ಮಗಿಗಳು ಅವಶ್ಯಕವಾಗಿಬೇಕಬೇಕು. ಇವುಗಳನ್ನು ತರಲು ಹಿಂದೆ ಹಾಲಗಂಬ ಮತ್ತು ಹಂದರ ತಪ್ಪಲಗಳನ್ನು ಮೆರವಣಿಗೆಯಲ್ಲಿ ತಂದಂತೆ ಈ ಐರಾಣಿಯನ್ನು ಬೆಂಡಬಾಜಿ, ಸನಾದಿ, ಕರಡಿಮಜಲಿನೊಂದಿಗೆ ಆರತಿ ಹಿಡಿದ ಮುತ್ತೈದೆ ಅವಳ ಜೊತೆಗೆ ಐದು ಅಥವಾ ಹತ್ತು ಜನ ಮುತ್ತೈದೆಯರು ಸೋಬಾನ ಪದ ಹಾಡುವ ಜನರೂ ಇರುತ್ತಾರೆ.

"ಜಾಣ ಕುಂಬಾರನ ಮನಿ ಯಾವಲ್ಲೆತವ್ವಾ
ಹಾಗಲ ಹುಬ್ಬೇಲೆ ರಥಬಳ್ಳಿ। ಬಣದಾಗ।
ಜಾಣ ಕುಂಬಾರ್‍ನ ಅರಮನಿಯ॥"[೬]

ಎಂದು ಹಾಡುತ್ತಾ ಕುಂಬಾರನ ಮನೆಗೆ ಹೋಗುತ್ತಾರೆ. ಮುತ್ತೈದೆಯರು ಅಕ್ಕಿ-ಬೆಲ್ಲ, ಬೇಳೆ, ಹಣ್ಣು, ಅರಿಶಿಣ, ಕುಂಕುಮ, ಎಲೆ ಅಡಿಕೆ ಇತ್ಯಾದಿ ವಸ್ತುಗಳನ್ನು ಮಂಗಳ ವಾದ್ಯದೊಂದಿಗೆ ಮೆರವಣಿಗೆಯೊಂದಿಗೆ ಹೋಗಿ ಕುಂಬಾರನಿಗೆ ಕೊಟ್ಟು, ಗಡಿಗೆ ಹಾಗೂ ಮುಚ್ಚಳಗಳನ್ನು ತೆಗೆದುಕೊಂಡು ಬರುತ್ತಾರೆ. ಕುಂಬಾರನು ಮದುವೆಗೆಂದೇ ವಿಶೇಷವಾಗಿ ಸುಣ್ಣ ಮತ್ತು ಕೆಮ್ಮಣ್ಣಿನಿಂದ ರಂಗೋಲಿ ರೀತಿಯಲ್ಲಿ ಗಡಿಗೆಗಳನ್ನು ಹಾಗೂ ಅದಕ್ಕೆ ತಕ್ಕ ಮುಚ್ಚಳವನ್ನು ಅಲಂಕರಿಸಿ ಸಿದ್ಧ ಮಾಡಿರುತ್ತಾರೆ. ಅವುಗಳಲ್ಲಿ ನೀರನ್ನು ತಂದು, ಹಾಲುಗಂಬದ ಸುತ್ತ ಚೌಕಾಕಾರವಾಗಿ ಜೋಡಿಸುವರು. ಕಳಶವಿಟ್ಟು, ದೀಪ ಹಚ್ಚಿ, ಅರಿಶಿಣ, ಕುಂಕುಮವಿಟ್ಟು ಪೂಜೆ ಮಾಡುತ್ತಾರೆ. ನಂತರ ಮದುಮಕ್ಕಳನ್ನು ಹಂದರದಲ್ಲಿ ಎರೆಯುವಾಗ ಈ ನೀರನ್ನು ಹಾಕಿ ಸ್ನಾನ ಮಾಡಿಸುತ್ತಾರೆ.

**ಅರಿಶಿಣಶಾಸ್ತ್ರ**

ಸುರಗಿ ಸ್ನಾನಕ್ಕಿಂತ ಪೂರ್ವದಲ್ಲಿ ವಧುವರರಿಗೆ ಎರಡನೆಯ ಬಾರಿಗೆ ಮುತ್ತೈದೆಯರು ಅರಿಶಿಣ ಹಚ್ಚುತ್ತಾರೆ. ಸಾಸಕ್ಕಿ ಇಟ್ಟು ಆರತಿ ಬೆಳಗುತ್ತಾರೆ. ವಧು ಹಾಗೂ ವರನ ಕಡೆಯವರು ಐದೈದು ಜನ ಅರಿಶಿಣವನ್ನು ಮದುಮಕ್ಕಳಿಗೆ ಹಚ್ಚುವುದು ವಿಶೇಷ.

**ಸುರಗಿ**

ಮದುವೆ ಮಂಟಪದಲ್ಲಿ ಮದುಮಕ್ಕಳಿಗೆ ಮಾಡಿಸುವ ವಿಶಿಷ್ಠವಾದ ಸ್ನಾನಕ್ಕೆ ಸುರಗಿ ಎನ್ನಲಾಗುತ್ತದೆ. ಅರಿಶಿಣ ಶಾಸ್ತ್ರವಾದ ಮೇಲೆ ಮದುಮಗನ ಸೋದರಮಾವ ಐರಾಣಿಯಲ್ಲಿಟ್ಟ ನೀರನ್ನು ಮುತ್ತೈದೆಯರ ಹಾಕಿದ ನಂತರ ಆ ನೀರನ್ನು ಹಂಡೆಯಲ್ಲಿ ಕಾಯ್ದ ನೀರಲ್ಲಿ ಬೆರೆಸಲಾಗುತ್ತದೆ. ಹೀಗೆ ಸುರಗಿ ನೀರನ್ನು ಸಿದ್ದಪಡಿಸುತ್ತಾರೆ. ಕುಂಬಾರನ ಮನೆಯಿಂದ ತಂದ ಮಡಿಕೆಗಳನ್ನು ಚೌಕಾಕಾರವಾಗಿ ಇಟ್ಟು ವಿಭೂತಿ, ಕುಂಕುಮ ಹಚ್ಚಿ ಮುಂದಿನ ಸಾಲಿನ ಮಗಿಯಿಂದ ಐದಳೆ ದಾರವನ್ನು ಬಲದಿಂದ ಎಡಕ್ಕೆ ಚೌಕೋನಾಕಾರದಲ್ಲಿ ಇತರ ನಾಲ್ಕು

ಮಗಿಗಳಿಗೆ ಐದೆಳೆ ದಾರ ಸುತ್ತಿ ಮಧ್ಯದಲ್ಲಿ ಮದುಮಕ್ಕಳನ್ನು ಹಾಗೂ ಅವರ ಹಿಂದೆ ಈ ಮೊದಲು ದಂಪತಿಗಳಾದವರನ್ನು ಕೂಡಿಸಿ ಸ್ನಾನ ಮಾಡಿಸುತ್ತಾರೆ. ನಂತರ ಹೊಸ ಬಟ್ಟೆ ಹಾಕಿಕೊಂಡು ಬಂದು ಬೇಗ ಕುಳಿತವರು ಹೆಚ್ಚು ಜೀವನ ನಡೆಸಲು ಸಮರ್ಥರು ಎಂಬ ನಂಬಿಕೆ ಇದೆ. ವಧು-ವರನಿಗೆ ಆರತಿ ಮಾಡುತ್ತಾರೆ. ಆರತಿಯಾದ ನಂತರ ಅದರಲ್ಲಿ ಕುಳಿತವರಿಗೆ ತಾಗದಂತೆ ಸುರಗಿ ದಾರವನ್ನು ಮೇಲೆ ಎತ್ತಿ ಕಳಸಗಿಂಡಿಗೆ ಸುತ್ತಲಾಗುತ್ತದೆ. ಕಳಸಗಿಂಡಿಗೆ ಸುತ್ತಿದ ದಾರವನ್ನು ನೀರು ಶಾಸ್ತ್ರದ ನಂತರ ತೆಗೆದು ಹೊಳೆ ಇಲ್ಲವೆ ನದಿಯಲ್ಲಿ ಬಿಡಲಾಗುತ್ತದೆ.

**ದಾರಿ ಎತ್ತಿನ ಕಾರ್ಯ**

ಸುರಗಿ ನೀರು ಹಾಕಿದ ನಂತರ ಮದುಮಗನನ್ನು ಎತ್ತಿನ ಮೇಲೆ ಕುಳಿತುಕೊಂಡು ಕುಲದೇವರಾದ ಹನುಮಂತ ದೇವರ ಗುಡಿಗೆ ಹೋಗಿ ಬರುತ್ತಾರೆ. ಎತ್ತು ಇಲ್ಲದ ಪಕ್ಷದಲ್ಲಿ ಸೋದರ ಮಾವನವರು ಅವರನ್ನು ಎತ್ತಿಕೊಂಡು ಗುಡಿಗೆ ಹೋಗಿ ದೇವರ ದರ್ಶನ ಮಾಡಿಸುತ್ತಾರೆ. ದೇವರ ದರ್ಶನಕ್ಕೆ ಹೋಗುವಾಗ ಕೈಯಲ್ಲಿ ಖಡ್ಗ ಹಿಡಿಯುವುದು ಕಡ್ಡಾಯ. ಇದು ಅವರ ವೃತ್ತಿ ಗೌರವವನ್ನು ಸೂಚಿಸಲು ಆಚರಿಸುವಂತೆ ಕಾಣುತ್ತದೆ.

**ಬಾಸಿಂಗ ಕಟ್ಟುವುದು**

ವರನಿಗೆ ಬಾಸಿಂಗವನ್ನು ಕೂಡ ಸೋದರ ಮಾವನೇ ಕಟ್ಟುತ್ತಾನೆ. ನಂತರ ವಾದ್ಯದೊಂಧಿಗೆ ವಿವಾಹ ಮಂಟಪಕ್ಕೆ ಕರೆದುಕೊಂಡು ಬರುತ್ತಾರೆ. ಬಾಸಿಂಗ ಕಟ್ಟಿದ ಸೋದರ ಮಾವನಿಗೆ ಹೊಸಬಟ್ಟೆ ಉಡುಗೊರೆ ನೀಡಿ ನಿವಾಳಿ ಆರತಿ ಮಾಡುತ್ತಾರೆ.

**ಮಾಂಗಲ್ಯಧಾರಣೆ**

ಈ ಮಂಗಳ ಕಾರ್ಯದ ಪ್ರಮುಖ ಅಂಗವೇ 'ಮಾಂಗಲ್ಯಧಾರಣೆ' ಅಂದರೆ ಮಂಗಳ ಸೂತ್ರದ ಬಂಧನ ಬಂಗಾರದ ತಾಳಿ, ಹಸಿರು, ಹಳದಿ, ಹಾಲ, ಕರಿಮಣಿಗಳನ್ನು ಐದು ಮುತ್ತೈದೆಯರು ಪೋಣಿಸಿರುತ್ತಾರೆ. ಅದರಲ್ಲಿ ವಧುವು ಕನಿಷ್ಠ ಐದಾದರೂ ಕರಿಮಣಿ ಪೋಣಿಸಬೇಕೆಂದು ಪದ್ಧತಿ ಇದೆ. ಸಿಂಧನೂರು, ಕೊಪ್ಪಳ, ಬಳ್ಳಾರಿ, ಬೆಳಗಾವಿ, ಬಿಜಾಪುರ, ಬಾಗಲಕೋಟೆ ಎಲ್ಲಾ ಜಿಲ್ಲೆಗಳಲ್ಲಿಯೂ ಈ ಪದ್ಧತಿ ಇರುವುದನ್ನು ಕಾಣಬಹುದು.

ಪೋಣಿಸಿದ ತಾಳಿಯನ್ನು ಅಯ್ಯನವರು ಒಣಕೊಬ್ಬರಿ ಬಟ್ಟಲಲ್ಲಿ ಹಾಕಿ ಅಥವಾ ವೀಳ್ಯದೆಲೆಯಲ್ಲಿ ಹಾಕಿ ಪಂಚಕಳಸದ ಹತ್ತಿರ ಇಟ್ಟುಕೊಂಡಿರುತ್ತಾರೆ. ಅದಕ್ಕೆ ಅರಿಶಿನ ಕುಂಕುಮ ವಿಭೂತಿ ಮೊದಲಾದವುಗಳಿಂದ ಪೂಜಿಸಿ, ಅಲ್ಲಿ ನೆರೆದಿದ್ದ ಐದು ಜನ ಮುತ್ತೈದೆಯರಿಂದ ಹಸ್ತಸ್ಪರ್ಶ ಮಾಡಿಸಿ, ಐದು ಗಂಟುಗಳನ್ನು ಹಾಕಿ ವರನ ಕೈಯಲ್ಲಿ ಕೊಡುತ್ತಾರೆ. ವರನು ಅದನ್ನು ಆಕೆಯ ಹಣೆಗೆ ಮುಟ್ಟಿಸಿ ಕೊರಳಿಗೆ ಕಟ್ಟುತ್ತಿರಬೇಕಾದರೆ "ಮಾಂಗಲ್ಯಂ ತಂತುನಾನೇನ।

ಮಮಜೀವನ ಹೇತುನಾ। ಕಂಠೇ ಬದ್ನಾಮಿ ಶುಭಗೆ। ತ್ವಂಜೀಗೀಘಮೆ ಶತದಃ ಶತಃಮಯಾ ಬಧ್ನಾಂ ದಾಕ್ಷಾಯಣೀ। ಹಿರಣ್ಯಂ ಸದೇಪಿ ಘೃಣ್ಯತಾಂ" ಎಂಬ ಮಂತ್ರವನ್ನು ಹೇಳುತ್ತಾ ಮಾಂಗಲ್ಯಧಾರಣೆ ಮಾಡಿಸುತ್ತಾರೆ.

**ಅಕ್ಷತಾರೋಪಣೆ**

ಮಾಂಗಲ್ಯಧಾರಣೆಯ ನಂತರ ತಮ್ಮ ಸ್ಥಾನ ಬದಲಿಸಿಕೊಳ್ಳುವ ವಧುವರರು ತಾವು ಶಿವ ಪಾರ್ವತಿಯ ಸ್ವರೂಪರೆಂದು ಭಾವಿಸಿಕೊಳ್ಳುತ್ತಾರೆ. ಪಾರ್ವತಿಯ ಸ್ವರೂಪಳಾದ 'ವಧು' ಶಕ್ತಿ ದಾಯಿನಿ, ಸಂಪತ್ ಪ್ರದಾಯಿನಿ, ವಿದ್ಯಾದಾಯಿನಿ ಎಂದೂ ಈ ಎಲ್ಲವೂಗಳಿಂದಲೂ ವರನಿಗೆ ಬಲ ಬರಲಿ ಎಂದು ಆಶಿಸುತ್ತಾರೆ. ಈ ಕಾರಣಕ್ಕಾಗಿ ವಧುವರರ ಕೈಯಲ್ಲಿ ಅಕ್ಷತೆಯನ್ನು ಕೊಟ್ಟು ಮಂತ್ರೋಚ್ಚಾರ ಮಾಡುವ ಸ್ವಾಮಿಗಳು

"ಕನ್ಯಾ-ಕರಾಗ್ರ-ತುಂಡುಲಂ ಪತಿಮಸ್ತಕ ಸ್ಪರ್ಶನಾ।
ಮಂಗಲ-ಕಲ್ಯಾಣಂ ಇಷ್ಟಸಿದ್ಧಿ-ಶುಭಂ-ಭವೇತ್॥"

ಎಂದು ಹೇಳುವಾಗ ವಧುವು ವರನ ತಲೆಯ ಮೇಲೆ ಅಕ್ಷತೆಯನ್ನು ಹಾಕುತ್ತಾಳೆ.

"ಪತಿ-ಕರಾಗ್ರ-ತುಂಡುಲಂ ಕನ್ಯಾ ಮಸ್ತಕ ಸ್ಪರ್ಶನಂ।
ಮಂಗಲಕಲ್ಯಾಣ ಇಷ್ಟ-ಸಿದ್ದಿ-ಶುಭಂ-ಬವೇತ್॥"

ಎಂದು ಹೇಳುವಾಗ ವರ-ವಧುವಿನ ಶಿರಸ್ಸಿನ ಮೇಲೆ ಅಕ್ಷತೆ ಹಾಕುತ್ತಾನೆ. ಆ ನಂತರವೇ ಉಳಿದವರು ಅಕ್ಷತೆ ಹಾಕುತ್ತಾರೆ.

**ಬ್ರಹ್ಮಗಂಟು ಹಾಕುವುದು**

ಮದುವೆ ಮಾಡಿಸುವ ಅಯ್ಯನವರು ವಧುವರರನ್ನು ಆಶೀರ್ವದಿಸಿದ ನಂತರ ನವ ದಂಪತಿಗಳಿಬ್ಬರ(ವರನ ಹೆಗಲ ಮೇಲಿನ ಶಲ್ಯ, ವಧುವಿನ ಮೇಲಿನ ಮುಸುಗು) ಸೆರಗು ಕೂಡಿಸಿ ಗಂಟು ಹಾಕಲಾಗುತ್ತದೆ. ಈ ಗಂಟಿನಲ್ಲಿ ಅಕ್ಕಿ, ಅರಿಶಿಣ, ಐದು ದಿನಸಿ ಸಾಮಾನುಗಳನ್ನು ಹಾಕಿ ಕಟ್ಟಲಾಗುತ್ತದೆ. ಇದು ನವ ದಂಪತಿಗಳು ಬಹುಕಾಲ ಸುಖ, ಸಂಪತ್ತು, ಸಮೃದ್ಧಿಯಿಂದ ಜೀವನ ನಡೆಸಲಿ ಎಂಬ ಉದ್ದೇಶದಿಂದ ಹಾಕಲಾಗುತ್ತದೆ.

**ಮೂಗುತಿ ಹುಡುಕುವುದು**

ಸಮಸ್ತ ದೈವದರಿಂದ ಅಕ್ಷತಾರೋಹಣೆಯಾದ ಮೇಲೆ ಒಂದು ತಟ್ಟೆಯಲ್ಲಿ ಅಕ್ಕಿ ಇಲ್ಲವೆ ಹಾಲನ್ನು ತರಿಸಿ ವರನ ಕೈ ಮೇಲಿರಿಸಿ ಕೆಳಗೆ ವಧುವಿನ ಕೈಯಿರಿಸಿ ಹಾಲನ್ನು ಎರೆಯುತ್ತಾರೆ.

ಹಾಲು ಅಮೃತಕ್ಕೆ ಸಮಾನವಾದ್ದರಿಂದ ಬೊಗಸೆಯಲ್ಲಿ ಹಾಲನ್ನೆರೆಯುವಾಗ ಎಂತಹ ಕಷ್ಟದ ಪರಿಸ್ಥಿತಿಯಲ್ಲೂ ಹೆಂಡತಿಯನ್ನು ನೋಡಿಕೊಂಡು ಹೋಗುತ್ತೇನೆಂದು ಪ್ರಮಾಣ ಮಾಡಿಸುತ್ತಾರೆ. ಅನಂತರ ಇದೇ ಹಾಲಿನಲ್ಲಿ ಮುತ್ತೈದೆಯರಿಂದ ಪಡೆದ ಮೂಗುತಿಯನ್ನು ಹಾಕುತ್ತಾರೆ. ಈ ಮೂಗುತಿಯನ್ನು ವಧುವರರು ೨-೩ ಸಲ ಹುಡುಕಿ ಕೊಡಬೇಕು. ಹಾಗೆ ಹುಡುಕಿ ಕೊಟ್ಟಾಗ ಮೊದಲ ಬಾರಿಗೆ

"ಮುತ್ತು ಕಂಡೆ, ಮುತ್ತಿನಂಥ ಮೂಗತಿ ಕಂಡೆ
ಮೂಗತಿಯೊಳಗೆ ರತ್ನ ಕಂಡೆ
ರತ್ನದಂತ ಹೆಂಡತಿ ಕಂಡೆ"

ಎನ್ನುವ ಮಾತಿನಿಂದ ಗಂಡು ಹೆಣ್ಣಿನ ದಾಂಪತ್ಯ ಜೀವನವನ್ನು ಇನ್ನೂ ಗಟ್ಟಿಗೊಳಿಸುತ್ತಾರೆ. ಅದೇ ಪ್ರಕಾವಾಗಿ ಮದುಮಗಳಿಗೂ,

"ಮುತ್ತು ಕಂಡೆ, ಮುತ್ತಿನಂತ ಮೂಗತಿ ಕಂಡೆ
ಮೂಗತಿಯೊಳಗೆ ರತ್ನ ಕಂಡೆ
ರತ್ನದಂತ ಗಂಡನ ಕಂಡೆ"

ಎಂದು ಹೇಳಿಸುತ್ತಾರೆ. ಈ ಮೂಗುತಿಯನ್ನು ವರನು ಮೂರು ಸಲ ಹುಡುಕಿಕೊಟ್ಟರೆ ಹೆಂಡತಿಯನ್ನು ತನ್ನ ಇಚ್ಛೆಯಂತೆಯೇ ನಡೆಸಿಕೊಳ್ಳುತ್ತಾನೆಂದೂ, ವಧುವಿಗೆ ಮೂರು ಸಲ ಸಿಕ್ಕರೆ ಹೆಂಡತಿಯ ಗುಲಾಮನಾಗುತ್ತಾನೆಂದು, ನೆರೆದ ಜನ ತಮಾಷೆ ಮಾಡುತ್ತಾರೆ.

**ಕಾಲುಂಗರಧಾರಣೆ**

ಕಾಲಿನ ಬೆರಳಿಗೆ ಹಾಕಿಕೊಳ್ಳುವ ಬೆಳ್ಳಿ ಉಂಗುರವೇ ಕಾಲುಂಗರ. ಮುತ್ತೈದೆಯರ ಪಂಚಸೂತ್ರಗಳಲ್ಲಿ ಒಂದಾದ ಈ ಕಾಲುಂಗರವನ್ನು ವಧುವಿಗೆ ಪಂಚಗಳಸದ ಸಂದರ್ಭದಲ್ಲಿ ಕೊಡುತ್ತಾರೆ. ವರನು ಮದುವೆ ಸಂದರ್ಭದಲ್ಲಿ ವಧುವಿಗೆ ವರನಿಂದ ತೊಡಿಸುತ್ತಾರೆ. ಇದು ಹೆಂಡತಿ ಗಂಡನಿಗೆ ವಿಧೇಯತೆಯ ಸಾಕ್ಷಿಗಾಗಿ ತೊಡಿಸುತ್ತಾರೆ ಎಂಬುದು ಕೆಲವರ ನಂಬಿಕೆಯಾಗಿದೆ.

**ಗಂಡನ ಪಾದಪೂಜೆ**

ಪತಿಯೇ ಪ್ರತ್ಯಕ್ಷ ದೇವರು ಎನ್ನುವ ಮಾತಿನ ಮೇರೆಗೆ ನವದಂಪತಿಗಳಾದ ಸಂದರ್ಭದಲ್ಲಿ ಹೆಂಡತಿಯಿಂದ ಗಂಡನಿಗೆ ಪಾದಪೂಜೆ ಮಾಡಿಸುತ್ತಾರೆ. ಗಂಡನ ಪಾದಗಳನ್ನು ತಟ್ಟೆಯ ಮೇಲಿಟ್ಟು ತೊಳೆದು, ವಿಭೂತಿ, ಕುಂಕುಮ, ಹೂವಿಟ್ಟು ಊದುಬತ್ತಿಯಿಂದ ಬೆಳಗಿ ನಮಸ್ಕಾರ ಮಾಡಿಸುತ್ತಾರೆ. ಈ ಸಂದರ್ಭದಲ್ಲಿ ಇನ್ನು ಮುಂದೆ ಹೆಣ್ಣಿನ ಸಂಪೂರ್ಣ ಜವಾಬ್ದಾರಿಯನ್ನು

ಗಂಡನೇ ವಹಿಸಿಕೊಂಡಂತೆ ಮತ್ತು ತಂದೆ-ತಾಯಿಗಳ ಆಶ್ರಯದಿಂದ ಗಂಡನ ಬಳಿ ಜೀವಿಸುವ ಕುರುಹು ಇದಾಗಿದೆ ಎಂದು ಅಭಿಪ್ರಾಯಪಡಬಹುದು.

**ಸೂರ್ಯವಂದನೆ**

ನವದಂಪತಿಗಳಾದ ವಧು-ವರರನ್ನು ಮದುವೆಯ ಮಂಟಪದಿಂದ ಹೊರ ಕರೆತಂದು, ಸೂರ್ಯನಿಗೆ ಆರತಿ ಮಾಡಿ, ನಮಸ್ಕರಿಸಿ, ಸೂರ್ಯನ ಸಾಕ್ಷಿಯಾಗಿ ನಾವು ದಾಂಪತ್ಯ ಜೀವನ ಸಾಗಿಸುತ್ತೇವೆಂಬ ಪ್ರಮಾಣ ಮಾಡುತ್ತಾರೆ. ನಾಲ್ಕು ದಿಕ್ಕುಗಳಿಗೂ ನಮಸ್ಕರಿಸುತ್ತಾರೆ. ಏಕೆಂದರೆ ಇದು ಪಂಚಭೂತಗಳ ಸಾಕ್ಷಿಯಾಗಿ ದಾಂಪತ್ಯ ಜೀವನ ಸಾಗಿಸುತ್ತೇವೆಂಬ ದೃಢ ಸಂಕಲ್ಪದೊಂದಿಗೆ ಪ್ರಮಾಣ ಮಾಡಿದಂತೆ. ಒಂದು ಬುಡಕಟ್ಟಿನ ಸಂಸ್ಕೃತಿಯಿಂದ ಬಂದ ಈ ಜನಾಂಗ ತನ್ನ ಮೂಲ ಸಂಸ್ಕೃತಿಯನ್ನು ಉಳಿಸಿಕೊಂಡು ಬಂದಿರುವುದನ್ನು ಇಲ್ಲಿ ಗಮನಿಸಬಹುದು. ಏಕೆಂದರೆ ಬುಡಕಟ್ಟು ಸಂಸ್ಕೃತಿಯಲ್ಲಿ ಪಂಚಭೂತಗಳಾದ ಭೂಮಿ, ಆಕಾಶ, ಗಾಳಿ, ಬೆಂಕಿ, ನೀರು ಇವುಗಳನ್ನು ದೈವಗಳೆಂದು ಆರಾಧಿಸುವುದನ್ನು ಕಾಣಬಹುದಷ್ಟೇ. ಒಟ್ಟಾರೆ ಪ್ರಕೃತಿಯೇ ಅವರ ಆರಾಧ್ಯ ದೈವ. ಅದನ್ನು ಸಾಂಕೇತಿಸಿ ಸೂರ್ಯನ ಪೂಜೆಯನ್ನು ಮಾಡಿಸುತ್ತಾರೆ.

**ಉಡುಗೊರೆ**

ನೂತನ ದಂಪತಿಗಳಿಗೆ ಅಕ್ಷತೆ ಹಾಕಿ ತಮ್ಮ ತಮ್ಮ ಯೋಗ್ಯತಾನುಸಾರ ಸಂಬಂಧಿಗಳು, ಸ್ನೇಹಿತರು, ಬೀಗರು, ಅಕ್ಷತೆಕಾಳು ಹಾಕಿ ಉಡುಗೊರೆ ನೀಡುತ್ತಾರೆ. ಕೆಲವರು ಹಣದ ರೂಪದಲ್ಲಿ ನೀಡಿದರೆ, ಮತ್ತೆ ಕೆಲವರು ವಸ್ತು, ಆಭರಣಗಳನ್ನು ನೀಡುತ್ತಾರೆ.

**ಊಟದ ವ್ಯವಸ್ಥೆ**

ಮೊದಲು ವಧುವಿನ ಕಡೆಯವರಿಗೆ ಊಟ ಮಾಡಿಸುತ್ತಾರೆ. ನಂತರ ಆಗಮಿಸಿದ ಸ್ನೇಹಿತರು, ಬಂಧು-ಬಳಗದವರು ಊಟ ಮಾಡುತ್ತಾರೆ. ಕೊನೆಯದಾಗಿ ವಧು-ವರರನ್ನು ಊಟ ಮಾಡಿಸುತ್ತಾರೆ. ಸಾಮಾನ್ಯವಾಗಿ ಹಿಂದೆ ಗೋಧಿ ಹುಗ್ಗಿ, ರೊಟ್ಟಿ, ಕಾಳು ಪಲ್ಯ, ಅನ್ನ ಸಾಂಬರು, ಮಾಡಿಸುತ್ತಿದ್ದರು. ಇಂದು ಹೆಚ್ಚಾಗಿ ನಗರಗಳಲ್ಲಿ ನಗರದ ನಾಜೂಕಿನಂತೆ ಬಗೆಬಗೆಯ ವಿಶೇಷ ಅಡುಗೆಗಳನ್ನು ಮಾಡಿಸಿ ಬಂದವರಿಗೆ ಊಟ ಹಾಕುತ್ತಾರೆ. ಊಟದ ವ್ಯವಸ್ಥೆಯಲ್ಲಿ ವಧುವಿನ ಕಡೆಯವರಿಗೆ ಅತಿಥಿ ಸತ್ಕಾರಗಳು ಜಾಸ್ತಿ. ಊಟದ ವಿಚಾರದಲ್ಲಿ ಕಲಹಗಳು ಆಗಬಾರದು ಎಂಬ ದೃಷ್ಟಿಯಿಂದ ಮೊದಲು ಊಟ ಮಾಡಿಸಿ, ನಂತರ ಇತರರನ್ನು ವಿಚಾರಿಸಿಕೊಳ್ಳುವುದು ಕಂಡುಬರುತ್ತದೆ.

**ಕಾಲ್ತೊಳೆಯುವುದು**

ಅಕ್ಷತೆಯಾದ ನಂತರ ಮದುಮಗನ ಕಾಲು ತೊಳೆಯುವ ಕಾರ್ಯಕ್ರಮ ನೆರವೇರುತ್ತದೆ. ಇದು ಕೆಲವು ದಶಕಗಳ ಹಿಂದೆ ವರನಿಗೆ ಹಂದರದಲ್ಲಿ ಅಕ್ಷತೆಗಿಂತ ಮೊದಲು ನೆರವೇರಿಸುತ್ತಿದ್ದರು.

ವಧುವಿನ ಚಿಕ್ಕಪ್ಪ, ತಂದೆ, ದೊಡ್ಡಪ್ಪರಲ್ಲಿ ಯಾರಾದರೂ ಒಬ್ಬರು ಈ ಕಾರ್ಯಕ್ರಮ ನೆರವೇರಿಸುತ್ತಾರೆ. ಕಾಲು ತೊಳೆಯುವುದಕ್ಕಾಗಿಯೇ ಒಂದು ಹೊಸ ಪಾತ್ರೆಯನ್ನು ತೆಗೆದುಕೊಂಡಿರುತ್ತಾರೆ. ವರನ ಕಾಲಿಗೆ ನೀರು ಹಾಕಿ, ಅರಿಶಿಣ, ಕುಂಕುಮ ಹಚ್ಚಿ, ಬಂಗಾರದ ವಸ್ತುಗಳನ್ನು ಅಳಿಯನಿಗೆ ಉಡುಗೊರೆಯಾಗಿ ಕೊಡುತ್ತಾರೆ. ಹಾಗೆಯೇ ಕಾಲು ತೊಳೆದವರಿಗೆ ವರನ ಕಡೆಯಿಂದ ಹೊಸ ಬಟ್ಟೆಯನ್ನು ಕೊಡುತ್ತಾರೆ.

**ಮಸಿಯೂಟ**

ವಧುವಿನ ಕಡೆಯವರು ತಾವು ಉಳಿದುಕೊಂಡ(ದೇವಸ್ಥಾನ, ಶಾಲೆ) ಮನೆಯಿಂದ ವರನ ಕಡೆಯವರಿಗೆ ನಿತ್ಯೋಪಯೋಗಿ ವಸ್ತುಗಳಾದ ತಂಬಿಗೆ, ತಾಟು, ಲೋಟ, ಬುಟ್ಟಿ, ಆರತಿ, ಕನ್ನಡಿ, ಪಾತ್ರೆ ಮುಂತಾದ ವಸ್ತುಗಳನ್ನು ಉಡುಗೊರೆಯಾಗಿ ಮೆರವಣಿಗೆಯಲ್ಲಿ ತಂದುಕೊಡುತ್ತಾರೆ. ಇದರಲ್ಲಿ ವಿಶೇಷವಾಗಿ ವಧುವಿನ ಅಕ್ಕ ಅಥವಾ ತಂಗಿಯು ತಾಮ್ರದ ಕೊಡವನ್ನು ಹೊತ್ತುಕೊಂಡು ಇತರ ಎಲ್ಲಾ ವಸ್ತುಗಳ ಸಮೇತ ವರನ ಮನೆಗೆ ವಾದ್ಯ, ಸಂಗೀತ, ಮೆರವಣಿಗೆ ಮಾಡುವುದರ ಮುಖಾಂತರ ತಂದುಕೊಡುತ್ತಾರೆ. ಈ ಪಾತ್ರೆ ಮೊದಲಾದವುಗಳಲ್ಲಿ ಚಂದಕ್ಕಾಗಿ ಕರಕುಶಲ ಕಲೆಯಿಂದ ಮಾಡಿದ ನೇಯ್ಗೆಗಳೂ, ಹೆಣಿಕೆಗಳು, ತಿಂಡಿ-ತಿನಿಸು, ಶಾವಿಗೆ, ಹಪ್ಪಳ, ಈ ರೀತಿ ಕೊಡುವುದಕ್ಕೆ 'ಮಸಿ ಊಟ' ಎನ್ನುತ್ತಾರೆ.

**ಮೆರವಣಿಗೆ**

ಅಕ್ಕಿಕಾಳಿನ ದಿನ ನಡೆಯುವ ಕಾರ್ಯಕ್ರಮದಲ್ಲಿ ಕೊನೆಗೆ ನಡೆಯುತ್ತಿದ್ದ ಪ್ರಮುಖ ಕಾರ್ಯಕ್ರಮ ಮೆರವಣಿಗೆ. ಮದುವೆ ದಿನದ ರಾತ್ರಿ ನವದಂಪತಿಗಳನ್ನು ಇಡೀ ಊರಿನ ಜನರಿಗೆ ಪರಿಚಯ ಮಾಡಿಸಿಕೊಡುವ ದೃಷ್ಟಿಯಿಂದ ವಧು-ವರರನ್ನು ಶೃಂಗರಿಸಿ, ಇಡೀ ಊರಿನ ಪ್ರಮುಖ ಬೀದಿಗಳಲ್ಲಿ ಮೆರವಣಿಗೆಯ ಮೂಲಕ ಕರೆದುಕೊಂಡು ಹೋಗುತ್ತಾರೆ. ಸಾಮಾನ್ಯವಾಗಿ ಹಳ್ಳಿಗಳಲ್ಲಿ ನವದಂಪತಿಗಳ ಮೆರವಣಿಗೆಯು ರಾತ್ರಿ ವೇಳೆ ನಡೆಯುತ್ತದೆ. ಹಿಂದೆ ಚಪ್ಪಡಿ, ಬಂಡಿ ಮೇಲೆ ಕುಳ್ಳಿರಿಸಿ ಮೆರವಣಿಗೆ ಮಾಡುತ್ತಿದ್ದರು. ಇದು ನಡೆದುಕೊಂಡು ಊರು ಸುತ್ತುವುದರ ಮೂಲಕ ಈ ಕಾರ್ಯಕ್ರಮ ಮುಕ್ತಾಯಗೊಳಿಸುತ್ತಾರೆ.

**ವಧುವನ್ನು ಮನೆ ತುಂಬಿಸಿಕೊಳ್ಳುವುದು**

ಮೆರವಣಿಗೆಯಿಂದ ಬಂದ ನಂತರ ವಧು-ವರರಿಗೆ ನಿವಾಳಿ ತೆಗೆದು ಆರತಿ ಮಾಡಿದ ಮೇಲೆ ವರನ ತಂಗಿ ಅಥವಾ ಅಕ್ಕ ವಧುವನ್ನು ಮನೆ ತುಂಬಿಸಿಕೊಳ್ಳುತ್ತಾಳೆ. ಈ ಸಂದರ್ಭದಲ್ಲಿ ವಧುವಿಗೆ ಹೊಸ್ತಿಲಲ್ಲಿ ಕಾಲ್‌ಬೆರಳು ಇರಿಸಿ, ಕಾಲುಬೆರಳುಗಳ ಮಧ್ಯೆ ಮಳೆಯನ್ನು ಇಟ್ಟು ಮಳೆ ಒಡೆದು, ಅಕ್ಕಿ ಬೆಲ್ಲ ತುಂಬಿದ ಸೇರು ಇಟ್ಟು ವಧುವಿನ ಕಡೆಯಿಂದ ಒದೆಸುತ್ತಾರೆ. ಅಲ್ಲಿ ಹರಡಿದ ಅಕ್ಕಿ ಕಾಳುಗಳು ಸಮೃದ್ಧಿಯ ಸಂಕೇತ ಎಂಬ ನಂಬಿಕೆ ಇದೆ.

## ನೀರುಶಾಸ್ತ್ರ

ಮದುವೆಯಾದೊಡನೆ ನೂತನ ದಂಪತಿಗಳನ್ನು ಒಟ್ಟಿಗೆ ಕೂಡಿಸಿ ಗಂಡಿನ ಮನೆಯಲ್ಲಿ ಮೂರು, ಹೆಣ್ಣಿನ ಮನೆಯಲ್ಲಿ ಎರಡು ಬಾರಿ ನೀರು ಹಾಕುವ ಶಾಸ್ತ್ರ ಮಾಡಲಾಗುತ್ತದೆ. ಈ ಶಾಸ್ತ್ರವನ್ನು ಬಹುತೇಕ ಬುಧವಾರ ಆರಂಭಿಸಬೇಕೆಂದು ಹೇಳಲಾಗುತ್ತದೆ. ಮದುವೆಯ ನಂತರ ಬರುವ ಪ್ರಥಮ ಬುಧವಾರ ಇಲ್ಲವೆ ಶನಿವಾರದಂದು ಐದು ಮಂದಿ ಮುತ್ತೈದೆಯರು ಕೂಡಿ ನೂತನ ದಂಪತಿಗಳ ತಲೆಗೆ ಎಣ್ಣೆ ಹಚ್ಚಿ ಸ್ನಾನ ಮಾಡಿಸುತ್ತಾರೆ. ನಂತರ ಅವರಿಗೆ ಹೊಸ ಬಟ್ಟೆ ಉಟ್ಟುಕೊಳ್ಳಲು ಕೊಡಲಾಗುತ್ತದೆ. ಬಟ್ಟೆ ತೊಟ್ಟುಕೊಂಡು ಬಂದ ದಂಪತಿಗಳಿಗೆ ಅರಿಶಿಣ ಕುಂಕುಮ ಹಚ್ಚಿ, ಆರತಿ ಮಾಡಿ ಕೆಂಪು ಮತ್ತು ಕಪ್ಪು ನೀರನ್ನು ತಟ್ಟೆಯಲ್ಲಿ ಹಾಕಿ ನಿವಾಳಿ ತೆಗೆದು ಮನೆಯೊಳಗೆ ಕರೆದುಕೊಂಡು ಹೋಗುತ್ತಾರೆ.

ಇಂದು ಒಂದೇ ದಿನದಲ್ಲಿಯೇ ಐದು ಸಲ ಮುಖ ತೊಳೆದುಕೊಂಡು, ಐದು ಸಲ ಆರತಿ ಮಾಡಿಕೊಂಡು, ಐದು ನೀರು ಮುಗಿಸುವ ಪದ್ಧತಿಯೂ ಇದೆ.

## ಗಂಗೆಶಾಸ್ತ್ರ

ಮದುವೆಯ ಕೊನೆಶಾಸ್ತ್ರ ಗಂಗೆಶಾಸ್ತ್ರ. ಇದು ವರನ ಮನೆಯಿಂದ ವಧುವನ್ನು ಬಾವಿಗೊ, ಕೆರೆಗೊ, ಹಳ್ಳಕ್ಕೊ ಕರೆದುಕೊಂಡು ಹೋಗಿ ಅಲ್ಲಿ ಗಂಗೆಗೆ ಹೊಸದಾದ ತುಂಬಿದ ತಾಮ್ರ ಕೊಡಕ್ಕೆ ಪೂಜೆ ಮಾಡಿ, ಕೈಯಲ್ಲಿರುವ ಅರಿಶಿಣ ದಾರಗಳನ್ನು ಅದಕ್ಕೆ ಹಾಕಿ, ಅದರಲ್ಲಿ ನೀರು ತುಂಬಿಕೊಂಡು ಅಲ್ಲಿಂದ ಮನೆಗೆ ಬರುತ್ತಾರೆ ಇದೇ ಗಂಗೆಶಾಸ್ತ್ರ.

## ಪ್ರಸ್ತದ ಕಾರ್ಯಕ್ರಮ

ಮದುವೆಯ ಎಲ್ಲಾ ಕಾರ್ಯಗಳು ಕೊನೆಗೊಂಡ ತರುವಾಯ ಒಂದು ಶುಭ ಮಹೂರ್ತದಲ್ಲಿ ನೂತನ ದಂಪತಿಗಳನ್ನು ಕೂಡಿಸುವುದಕ್ಕೆ ಪ್ರಸ್ತದ ಕಾರ್ಯ ಇಟ್ಟುಕೊಂಡಿರುತ್ತಾರೆ. ಇದರ ಮೂಲ ಉದ್ದೇಶ ವಂಶಾಭಿವೃದ್ಧಿ ಹಾಗು ಮೋಕ್ಷ ಸಾಧನೆಗಾಗಿಯೂ ಗಂಡ-ಹೆಂಡತಿ ಕೂಡುವುದೂ ಅನಿವಾರ್ಯವೆನ್ನಲಾಗುತ್ತದೆ. ಈ ಕಾರ್ಯ ಹೆಚ್ಚಾಗಿ ಹೆಣ್ಣಿನ ಮನೆಯಲ್ಲಿ ನಡೆಸಲಾಗುತ್ತದೆ. ಗಂಡಿನ ಮನೆಯವರು ಹೆಣ್ಣಿಗೆ ಉಡಿ ತುಂಬಿ, ಬಳೆ ಹಾಕಿಸಿ, ಆರತಿ ಮಾಡಿ, ಹೊಸ ಸೀರೆ ಕೊಡುವ ಪದ್ಧತಿ ಕಂಡುಬರುತ್ತದೆ.

## ೬.೩. ಸಂಸ್ಕಾರಗಳು

ಬೇಡನಾಯಕ ತಳವಾರರ ಪ್ರಮುಖ ಸಂಸ್ಕಾರಗಳಲ್ಲಿ ಮುದ್ರೆ ಸಂಸ್ಕಾರ ಒಂದು ವಿಶೇಷ ಆಚರಣೆಯಾಗಿದೆ. ಇಲ್ಲಿ ಕೆಲವು ಮನೆತನದ ಪುರುಷನು ಮದುವೆ ಮುಂಚೆ ಮುದ್ರೆಯನ್ನು

ಹಾಕಿಕೊಳ್ಳಬೇಕಾಗುತ್ತದೆ. ಇದು ಸುಮಾರು ೯ ರಿಂದ ೧೫ನೇ ವಯಸ್ಸಿನ ಅಂತರದಲ್ಲಿ ನಡೆಯುತ್ತದೆ. ಈ ಮುದ್ರೆ ಎನ್ನುವುದು ದೇವರ ಕಾರ್ಯ. ತಳವಾರಿಕೆ ಹಾಗೂ ದಾಸಯ್ಯನಾಗಿ ನೇಮಿಸಲು ಈ ಮುದ್ರೆ ಹಾಕುತ್ತಿದ್ದರು.

ಕುಲದೇವರಾದ ಹನುಮಂತ ದೇವರ ಗುಡಿಯಲ್ಲಿ ಪೂಜಾರಿಯಿಂದ ಈ ಕ್ರಿಯೆ ಜರುಗುತ್ತದೆ. ಹೊಸ ಮರದಲ್ಲಿ ಕೊಬ್ಬರಿ ಬಟ್ಟಲು, ಅರಿಶಿಣ ಕೊಂಬು, ಜೀರಿಗಿ, ತಾಳೆಗರಿ, ಎಳ್ಳು ಈ ಸಾಮಗ್ರಿಗಳನ್ನು ತೆಗೆದುಕೊಂಡು ಬರುತ್ತಾರೆ. ಮುದ್ರೆ ಹಾಕಿಸಿಕೊಳ್ಳುವವನ ಕೈಗೆ ಕಂಕಣವನ್ನು ಕಟ್ಟಲಾಗುತ್ತದೆ. ಕಂಕಣ ಕಟ್ಟಿದ ನಂತರ ತಾಮ್ರ ಲೋಹದಿಂದ ನಿರ್ಮಿಸಿದ 'ಹನುಮಂತ ದೇವರ ಚಿತ್ರ' ಹಾಗೂ ಶಂಖ ಚಕ್ರವಿರುವ ಮುದ್ರೆಯನ್ನು ಬೆಂಕಿಯಲ್ಲಿ ಕಾಯಿಸಿ, ಎರಡು ಭುಜಕ್ಕೆ ತೇಯ್ದ ಗಂಧವನ್ನು ಸವರಿ ಅದರ ಮೇಲೆ ಮುದ್ರೆಯನ್ನು ಒತ್ತುತ್ತಾರೆ. ಬಳ್ಳಾರಿ ಜಿಲ್ಲೆಯ ಭಾಗದಲ್ಲಿ ಈ ಪದ್ಧತಿ ಹೆಚ್ಚಾಗಿ ಕಂಡುಬರುತ್ತದೆ.

ಈ ಮುದ್ರೆ ಕ್ರಿಯೆಗೆ ಒಳಗಾದವರು ತಮ್ಮ ಗ್ರಾಮದಲ್ಲಿ ಯಾರಾದರೂ ಸತ್ತರೆ ಆ ಶವದ ಸಂಸ್ಕಾರವಾಗುವವರೆಗೆ ಊಟ ಮಾಡುವಂತಿಲ್ಲ. ಮುದ್ರೆ ಹಾಕಿದ ಪುರುಷರು ಸತ್ತರೆ ಅವರನ್ನು ಸುಡುತ್ತಾರೆ ಹಾಗೂ ದೇವರ ಸಮವೆಂದು ತಿಳಿದು ಅವರನ್ನು ಮಂಟಪದ ಮೇಲೆ ಕುಳ್ಳಿರಿಸಿಕೊಂಡು ಶವ ಸಂಸ್ಕಾರ ನೆರವೇರಿಸುತ್ತಾರೆ. ಮುದ್ರೆ ಹಾಕದೆ ಹಾಗೆಯೇ ಸತ್ತರೆ ಅವರನ್ನು ಗೋಣಿ ಚೀಲದಲ್ಲಿ ತೆಗೆದುಕೊಂಡು ಹೋಗಿ ನೆಲದಲ್ಲಿ ಹೂಳುತ್ತಾರೆ. ಮದುವೆಯಾಗದೆ ಹಾಗೆಯೇ ಸತ್ತರೆ, ಅವರನ್ನು ಮುಲಗಿಸಿ ಹೂಳುತ್ತಾರೆ.

### ಶವ ಸಂಸ್ಕಾರ

ತಳವಾರರ ಮನೆತನದಲ್ಲಿ ಯಾರಾದರೂ ಸತ್ತಾರೆ ಬಂಧುಗಳೆಲ್ಲಾ ಕಡ್ಡಾಯವಾಗಿ ಸೇರುತ್ತಾರೆ. ಶವವನ್ನು ಸ್ನಾನ ಮಾಡಿಸಿ, ಹೊಸ ಬಟ್ಟೆ ತೊಡಿಸಿ ಕೂಡಿಸುತ್ತಾರೆ. ಊರಿನ ಜನರು, ಸಮೀಪ ಹಾಗೂ ದೂರದ ನೆಂಟರಿಗೆ ಸತ್ತ ಸುದ್ದಿಯನ್ನು ಹೇಳಿ ಕಳುಹಿಸುತ್ತಾರೆ. ವಿಶೇಷವಾಗಿ ತಳವಾರರು ಹೆಣವನ್ನು

* ಉತ್ತರಕ್ಕೆ ಮುಖ ಮಾಡಿ ಮಲಗಿಸುತ್ತಾರೆ ಅಥವಾ ಕೂಡಿಸುತ್ತಾರೆ.
* ಮದುವೆಯಾದವನನ್ನು ಕೂಡಿಸುತ್ತಾರೆ. ಪೂಜೆ ಮಾಡಿಸುತ್ತಾರೆ.
* ಮದುವೆಯಾಗದ ಚಿಕ್ಕವರು ಸತ್ತರೆ ಉತ್ತರಾಭಿಮುಖವಾಗಿ ಶವವನ್ನು ಮಲಗಿಸುತ್ತಾರೆ.
* ಮುದ್ರೆಧಾರಕರು, ಅನಾರೋಗ್ಯ ಪೀಡಿತರು, ಬಿಳಿತೊನ್ನು ಇರುವವರು, ಆತ್ಮಹತ್ಯೆ ಮಾಡಿಕೊಂಡವರು, ನೇಣು ಹಾಕಿಕೊಂಡವರ ದೇಹವನ್ನು ಕಟ್ಟಿಗೆಯಿಂದ ಸುಡಲಾಗುತ್ತದೆ.

* ತಂದೆ, ತಾಯಿ ಸತ್ತಾಗ ಮನೆಯ ಹಿರಿಮಗನೇ ಎಲ್ಲಾ ಕಾರ್ಯಗಳನ್ನು ನೆರವೇರಿಸುತ್ತಾನೆ.

**ಸೂತಕ**

ಜನನ ಮರಣಗಳಿಂದ ಉಂಟಾದ ಮೈಲಿಗೆಯನ್ನು ಸೂತಕವೆಂದು ಕರೆಯಲಾಗುತ್ತದೆ. ಅಂತ್ಯಕ್ರಿಯೆ ನೆರವೇರಿಸಿ, ಪುನಃ ಮನೆಯೊಳಗೆ ಬರುವಾಗ ಸ್ನಾನ ಮಾಡಿಕೊಂಡೆ ಮನೆಯೊಳಗೆ ಪ್ರವೇಶಿಸುತ್ತಾರೆ.

* ಸೂತಕ ಸಂದರ್ಭದಲ್ಲಿ ಯಾವುದೇ ಕಾರ್ಯಕ್ರಮಗಳಿಗೆ ಹೋಗುವುದಿಲ್ಲ.

* ಭಿಕ್ಷೆಯನ್ನು ಹಾಕುವುದಿಲ್ಲ.

* ಇತರರು, ಅಕ್ಕಪಕ್ಕದವರು, ದಿನ-ಕರ್ಮಗಳು ಮುಗಿಯುವರೆಗೂ ಸೂತಕದ ಮನೆಗೆ ಬರುವುದಿಲ್ಲ.

* ಸೂತಕ ಕಳೆಯಲು ಮನೆಯನ್ನು ಸಗಣಿ ಸುಣ್ಣಗಳಿಂದ ಸ್ವಚ್ಛಗೊಳಿಸಿ, ಜಂಗಮರನ್ನು ಕರೆತಂದು, ಮೃತರ ಭಾವ ಚಿತ್ರವನ್ನಿಟ್ಟು ಪೂಜೆ ಮಾಡಿ ಗೋವಿನ ಮೂತ್ರವನ್ನು ಮನೆಯ ಎಲ್ಲಾ ಭಾಗದಲ್ಲಿ ಸಿಂಪಡಿಸಿ, ಸೂತಕ ಕಳೆಯುವ ಪದ್ಧತಿ ಕಂಡುಬರುತ್ತದೆ.

**ದಿನ ಕರ್ಮಗಳು**

ನಾಯಕ ತಳವಾರರಲ್ಲಿ ಸತ್ತ ಮೂರು ದಿನದಿಂದ ಒಂದು ತಿಂಗಳೊಳಗಾಗಿ ಕಾರ್ಯ ಮಾಡಲಾಗುತ್ತದೆ. ಇದನ್ನು 'ಒಳಗೆ ಕರೆದುಕೊಳ್ಳುವುದು', ಶಿವಗಣಾರಾಧನೆ, ವೈಕುಂಠ ಸಮಾರಾಧನೆ ಎಂದು ಕರೆಯಲಾಗುತ್ತದೆ. ಹೆಚ್ಚಾಗಿ ಈ ಕಾರ್ಯಕ್ರಮ ಸಂಜೆ ಮಾಡುತ್ತಾರೆ. ಆದರೇ ಇತ್ತೀಚೆಗೆ ಬೆಳಿಗ್ಗೆಯಿಂದಲೇ ಈ ಕಾರ್ಯಕ್ರಮ ಆರಂಭಿಸುತ್ತಾರೆ. ಮನೆ ಅಂಗಳ ಸಾರಿಸಿ, ಅಯ್ಯನವರನ್ನು ಕರೆಸಿ, ದೇವರ ಜಗುಲಿಯ ಬಳಿ ಕೂಡಿಸಿ, ಅವರ ಎದುರಿನ ಸ್ಥಳವನ್ನು ಸ್ವಚ್ಛಗೊಳಿಸಿ ರಂಗವಲ್ಲಿ ಹಾಕುತ್ತಾರೆ. ನಂತರ ಅಕ್ಕಿಯ ಗುಂಪಿ ಹಾಕಿ, ಅದರ ಮೇಲೆ ನೀರು ತುಂಬಿದ ತಾಮ್ರದ ತಂಬಿಗೆಯಿಟ್ಟು, ಅದಕ್ಕೆ ಗಂಧ, ಕುಂಕುಮ, ವಿಭೂತಿ ಹಚ್ಚಿ ತಂಬಿಗೆಗೆ ಬಿಳಿದಾರ ಸುತ್ತಿ, ಅದರ ಮೇಲೆ ತೆಂಗಿನಕಾಯಿ ಇಡಲಾಗುತ್ತದೆ. ತಂಬಿಗೆಯ ಮುಂದೆ ಹೊಸ ಬಟ್ಟೆಯನ್ನು ಇಡುತ್ತಾರೆ. ಪುರುಷರಾದರೆ ದೋತರ, ಜೋಡು ವಸ್ತ್ರ, ಶಲ್ಲೆ. ಸ್ತ್ರೀಯಾಗಿದ್ದರೆ ಸೀರೆ ಕುಪ್ಪಸದ ಕಣ ಇಟ್ಟು ಜೊತೆಗೆ ಮೃತರ ಭಾವಚಿತ್ರವಿದ್ದರೆ ಅದನ್ನು ಪಕ್ಕದಲ್ಲೇ ಇಡಲಾಗುತ್ತದೆ. ನಂತರ ಕಳಶವಿಟ್ಟು, ಆರತಿ ಮಾಡಿ ಪೂಜೆ ಮಾಡುತ್ತಾರೆ. ಇದು ಅಯ್ಯನವರಿಂದ ನೆರವೇರಿಸುತ್ತಾರೆ. ಗೋವಿನ ಮೂತ್ರವನ್ನು ಮನೆಗೆ ಸಿಂಪಡಿಸಿ, ನಂತರ ಅಯ್ಯನವರಿಗೆ ಪ್ರಸಾದ, ದಕ್ಷಿಣೆಯಿತ್ತು. ಅವರನ್ನು ಬಿಳ್ಕೊಟ್ಟು, ನಂತರ ಆಮಂತ್ರಿಸಿದ ಮೃತನ ಬಂಧು-ಬಳಗ ಹಾಗೂ ನೆರೆ-ಹೊರೆಯವರಿಗೆ ಸಿಹಿ ಊಟ ಹಾಕುತ್ತಾರೆ.

## ೬.೪. ಹಬ್ಬ ಹರಿದಿನಗಳು

ಮನುಷ್ಯನ ನಂಬಿಕೆ ಹಾಗೂ ಸಂಪ್ರದಾಯಗಳನ್ನು ಕ್ರಿಯಾ ರೂಪದಲ್ಲಿ ಅಳವಡಿಸಿ ಆಚರಿಸುವಂತವುಗಳೇ ಹಬ್ಬಗಳು. ನಾಯಕ ತಳವಾರರು ಹೆಚ್ಚಾಗಿ ಎಲ್ಲ ಹಿಂದೂ ಹಬ್ಬಗಳನ್ನು ಆಚರಿಸುತ್ತಾರೆ ಹಾಗೂ ಹುಣ್ಣಿಮೆ, ಅಮವಾಸ್ಯೆಗಳನ್ನು ಆಚರಿಸುತ್ತಾರೆ. ದಸರಾ, ದೀಪಾವಳಿ, ಮಕರ ಸಂಕ್ರಾಂತಿ, ಯುಗಾದಿ, ಪಂಚಮಿ, ಶಿವರಾತ್ರಿ ಹಬ್ಬಗಳನ್ನು ಆಚರಿಸುತ್ತಾರೆ. ಹೆಚ್ಚಾಗಿ ಶ್ರೀಲಕ್ಷ್ಮಿನರಸಿಂಹ, ತಿರುಪತಿ ತಿಮ್ಮಪ್ಪ, ಆಂಜನೇಯಸ್ವಾಮಿ, ಹುಲಿಗಮ್ಮದೇವಿ, ಯಲ್ಲಮ್ಮ, ದುರ್ಗಮ್ಮ, ಮಾರೆಮ್ಮ, ಚೌಡಮ್ಮ, ಕರಿಯಮ್ಮ ದೇವತೆಗಳನ್ನು ಪೂಜಿಸುತ್ತಾರೆ. ಬಳ್ಳಾರಿ, ಕೊಪ್ಪಳ, ಗುಲ್ಬರ್ಗಾ, ರಾಯಚೂರು, ಬಾಗಲಕೋಟೆ ಈ ಭಾಗದಲ್ಲಿ ಆಂಜನೇಯ ದೇವರ ಪೂಜಾರಿಗಳು ಇವರೇ ಆಗಿರುತ್ತಾರೆ.

### ಯುಗಾದಿ

ಕರ್ನಾಟಕದಲ್ಲಿ ಹೊಸಯುಗದ ಆರಂಭದ ಹಬ್ಬವೆಂದು ಯುಗಾದಿಯನ್ನು ಆಚರಿಸುತ್ತಾರೆ. ಇದನ್ನು ಸುಗ್ಗಿಯ ಹಬ್ಬ, ಹೊಸ ವರ್ಷದ ಹಬ್ಬವೆಂದು ಆಚರಿಸುವುದುಂಟು. ಈ ಹಬ್ಬದ ದಿನದಂದು ಮನೆ ಅಂಗಳವನ್ನು ಅಲಂಕರಿಸುತ್ತಾರೆ. ಮನೆ ಮಂದಿಯೆಲ್ಲಾ ಸ್ನಾನ ಮುಗಿಸಿ, ದೇವರಿಗೆ ಕಾಯಿ, ಕರ್ಪೂರ ಪೂಜೆ ಮಾಡಿಸುವುದು ವಾಡಿಕೆ. ಯುಗಾದಿ ತಳವಾರರಿಗೆ ದೊಡ್ಡ ಮತ್ತು ವಿಶೇಷ ಹಬ್ಬವಾಗಿದೆ. ಅಂದು ಬೇವುಬೆಲ್ಲದೊಂದಿಗೆ ಊಟ ಆರಂಭಿಸುತ್ತಾರೆ. ಕೆಲವೊಬ್ಬರು ಯುಗಾದಿ ಹಬ್ಬದ ದಿನದಂದು ಹಿರಿಯರ ಪೂಜೆ ನೆರವೇರಿಸಿ ಅವರಿಗೆ ಒಂದು ಜೊತೆ ಹೊಸಬಟ್ಟೆ ಇಟ್ಟು, ಭಾವಚಿತ್ರಕ್ಕೆ ನೈವೇದ್ಯ ಮಾಡಿ, ಲೋಭಾನ ಹಾಕುತ್ತಾರೆ. ವಿಶೇಷ ಸಿಹಿ ಭಕ್ಷ್ಯ, ಭೋಜನದೊಂದಿಗೆ ಮನೆಮಂದಿಯೆಲ್ಲ ಊಟ ಮಾಡಿ ಇತರರಿಗೂ ಊಟ ಮಾಡಿಸುತ್ತಾರೆ.

ಹಬ್ಬದ ಮರುದಿನ ಕರಿದಿನವೆಂದು ಬೇಟೆಗೆ ಹೋಗುತ್ತಾರೆ. ತಾವು ಬೇಟೆಯಾಡಿದ ಪ್ರಾಣಿ ಪಕ್ಷಿಗಳ ಮಾಂಸದ ಅಡುಗೆ ಮಾಡುತ್ತಾರೆ. ಹೊಸಪೇಟೆಯ ಕಮಲಾಪುರದ ಭಾಗದಲ್ಲಿ ವಿಶೇಷವಾಗಿ ಬೇಟೆಗೆ ಹೋಗಿ ಬೇಟೆಯಾಡಿ ಕಾಡುಹಂದಿ, ಕಾಡುಮೊಲ ತಂದು ಅದನ್ನು ಊರಿನ ಜನ ಪೂಜೆ ಮಾಡುವುದರೊಂದಿಗೆ ಊರಿನ ಗರ್ಭಗುಡಿಯಲ್ಲಿ ಸೇರಿಸಿ ಮೆರವಣಿಗೆ ಮಾಡಿ ಸಾಹಸ ಶಕ್ತಿಗಳನ್ನು ಪ್ರದರ್ಶಿಸುತ್ತಾರೆ.

### ದಸರಾ ಹಬ್ಬ

ವಿಜಯದ ಸಂಕೇತವಾಗಿ ಆಚರಿಸುವ ಈ ವಿಜಯದಶಮಿ ನಾಡಿನ ಪ್ರಮುಖ ಹಬ್ಬ. ಇದನ್ನು ನಾಡೇ ಆಚರಿಸುತ್ತದೆ. ಈ ಹಬ್ಬದ ವಿಶೇಷವೆಂದರೆ ಶಕ್ತಿ ದೇವಿಗೆ ಅಥವಾ ಬನ್ನಿ ಮಹಾಕಾಳಿ ದೇವಿಯನ್ನು ಆರಾಧಿಸುವುದಾಗಿದೆ. ಚಾಮುಂಡಿ ಅವತಾರವಾಗಿ ಬನ್ನಿ ಮರವನ್ನು ಆರಾಧಿಸುವುದು ವಿಶೇಷ.

**ಆಯುಧ ಪೂಜೆ**

ತಳವಾರರು ತಮ್ಮ ವೃತ್ತಿಯ ಸಂಕೇತವಾದ ತಲವಾರ(ಖಡ್ಗವನ್ನು) ವರ್ಷಕ್ಕೆ ಒಮ್ಮೆ ಮಾತ್ರ ವಿಜಯದಶಮಿಯಂದು ಆಯುಧ ಪೂಜೆ ದಿನ ಪೂಜಿಸುತ್ತಾರೆ. ಜೊತೆಗೆ ವಿವಿಧ ಆಯುಧಗಳಾದ ಕೊಡಲಿ, ಕೂಡುಗೋಲು ಇಟ್ಟು ವಿಭೂತಿ, ಕುಂಕುಮ ಹಚ್ಚಿ ಪೂಜಿಸುತ್ತಾರೆ.

**ನಾಗಪಂಚಮಿ**

ತಳವಾರರು ಶ್ರಾವಣಮಾಸವನ್ನು ಅತಿ ಭಕ್ತಿ, ಉತ್ಸಾಹ, ಶ್ರದ್ಧೆಯಿಂದ ಆಚರಿಸುತ್ತಾರೆ. ಈ ಮಾಸದಸಲ್ಲಿ ಅಮಾವಾಸ್ಯೆ ಆರಂಭದಿಂದ ಅಮಾವಾಸ್ಯೆ ಬರುವ ಶ್ರಾವಣ ತಿಂಗಳಲ್ಲಿ ಮಾಂಸದೂಟ ನಿಷೇಧವಿದೆ. ಈ ತಿಂಗಳಲ್ಲಿ ನಾಗಪ್ಪನಿಗೆ ವಿಶೇಷ ಪೂಜೆ. ಹಾಲು ಹಾಕುವುದರ ಜೊತೆಗೆ ನೈವೇದ್ಯಯಿಟ್ಟು ಪೂಜಿಸುತ್ತಾರೆ.

**ದೀಪಾವಳಿ**

ದೀಪಗಳ ಹಬ್ಬವೆಂದೇ ಪ್ರಸಿದ್ಧವಾದ ದೀಪಾವಳಿ ಉತ್ತರ ಕರ್ನಾಟಕದ ಬಿಜಾಪುರ, ಧಾರವಾಡ, ಗುಲ್ಬರ್ಗ, ರಾಯಚೂರು, ಗದಗ, ಬೆಳಗಾವಿ, ಕೊಪ್ಪಳ ಮೊದಲಾದ ಕಡೆಗಳಲ್ಲಿ ವಿಶೇಷವಾದ ಆಚರಣೆ ಇದೆ. ಅಮವಾಸ್ಯೆಯ ದಿನದಂದು ಲಕ್ಷ್ಮಿದೇವಿಯ ಭಾವಚಿತ್ರವಿಟ್ಟು ತೆಂಗಿನ ಕಾಯಿಯ ಕಳಸದಿಂದ ಅಲಂಕರಿಸಿ ಮಹೂರ್ತದ ವೇಳೆಗೆ ಪೂಜೆ ಆರಂಭಿಸುತ್ತಾರೆ. ಅಮವಾಸ್ಯೆಯ ಮರುದಿನ 'ಬಲಿಪಾಡ್ಯ'. ಅಂದು ಗೋವಿನ ಸಗಣಿಯಿಂದ ಪಾಂಡವರನ್ನು ಮಾಡಿ ಅದಕ್ಕೆ ನೈವೇದ್ಯವಿಟ್ಟು ಪೂಜಿಸಿ, ಹಾಲು, ಮೊಸರು, ತುಪ್ಪ ಹಾಕಿ ಹಣ್ಣುಹೂವು, ಅಡಿಕೆ ಎಲೆ ಇಟ್ಟು ಪೂಜಿಸುತ್ತಾರೆ.

**ಮಹಾಶಿವರಾತ್ರಿ**

ಶಿವರಾತ್ರಿ ಅಮವಾಸ್ಯೆಯಂದು ಶಿವನ ಆರಾಧನೆ ಮಾಡುವುದು ಪ್ರಮುಖವಾಗಿ ಕಂಡುಬರುತ್ತದೆ. ಅಂದು ಕೆಲವರು ಉಪವಾಸ ಮಾಡುತ್ತಾರೆ. ಉಪಹಾರಕ್ಕೆ ಹಣ್ಣು, ಹಾಲು ಸೇವಿಸುತ್ತಾರೆ. ಉತ್ತರ ಕರ್ನಾಟಕದಲ್ಲಿ ಈ ಹಬ್ಬವನ್ನು 'ಜಾಗರಣೆ' ಎಂದು ಕರೆಯುತ್ತಾರೆ. ರಾತ್ರಿ ವೇಳೆ ಭಜನೆ, ಪ್ರಾರ್ಥನೆ, ಕೀರ್ತನೆಗಳ ಮೂಲಕ ಶಿವನಾಮ ಸ್ಮರಣೆ ಮಾಡುತ್ತಾ ದಿನ ಕಳೆಯುತ್ತಾರೆ. ಬಯಲು ಸೀಮೆ ಪ್ರದೇಶಗಳಾದ ಕೊಪ್ಪಳ, ಬಳ್ಳಾರಿ, ರಾಯಚೂರು ಭಾಗದಲ್ಲಿ ನಾಟಕ, ಸಂಗೀತ ಬಯಲಾಟ ಆಡುವುದರೊಂದಿಗೆ ಜಾಗರಣೆ ಮಾಡುತ್ತಾರೆ.

**ವಾಲ್ಮೀಕಿ ಜಯಂತಿ**

ತಳವಾರರು ಜನಾಂಗದ ಆರಾಧ್ಯ ದೈವ ವಾಲ್ಮೀಕಿಯ ಭಾವಚಿತ್ರಕ್ಕೆ ಹಾರ ಹಾಕಿ ಅಲಂಕರಿಸಿ ಉತ್ಸುಕತೆಯಿಂದ ಮೆರವಣಿಗೆ ಮಾಡುವುದರ ಮೂಲಕ ಸಂಭ್ರಮವನ್ನು ಆಚರಿಸುತ್ತಾರೆ.

ಜೊತೆಗೆ ಏಕಲವ್ಯ, ಸಿಂಧೂರ ಲಕ್ಷ್ಮಣ, ಲವ-ಕುಶರ ಭಾವಚಿತ್ರಗಳನ್ನು ಹಿಡಿದು ಮೆರವಣಿಗೆ ಮಾಡುತ್ತಾರೆ.

## ೬.೫. ನಂಬಿಕೆಗಳು ಮತ್ತು ನಿಷೇಧಗಳು

ಪ್ರತಿಯೊಂದು ಸಮುದಾಯವು ತನ್ನ ಕಾರ್ಯಕಲಾಪಗಳನ್ನು, ಆಲೋಚನೆಗಳನ್ನು, ರೂಢಿ ಸಂಪ್ರದಾಯಗಳನ್ನು, ಆಚರಣೆಗಳನ್ನು ಜೀವನದ ಕ್ರಮಗಳೆಲ್ಲವುಗಳನ್ನು ಮೂಲಭೂತವಾಗಿ ಒಂದಲ್ಲ ಒಂದು ನಂಬಿಕೆಯಿಂದ ಪಾಲಿಸುತ್ತದೆ. "ವಿಶ್ವಾದ್ಯಂತ ಇರುವ ನಂಬಿಕೆಗಳು ಜನಪದರ ಜೀವನವನ್ನು ನಿಯಂತ್ರಿಸುವ ಪ್ರಬಲ ಶಕ್ತಿಗಳಾಗಿವೆ. ನಂಬಿಕೆಗಳು ಸಾಂಪ್ರದಾಯಿಕಗಳಾಗಿಯೂ ಆಚರಣೆಗಳಾಗಿಯೂ ಇವೆ. ಪ್ರತಿ ಸಾಂಸ್ಕೃತಿಯು ತನ್ನ ಉಳುವಿಗೆ ಕೆಲವೊಂದು ನಂಬಿಕೆಗಳನ್ನು ಇಟ್ಟುಕೊಂಡಿವೆ. ಹಾಗಾಗಿ ಜೀವನಕ್ಕೂ, ನಂಬಿಕೆಗಳಿಗೂ ನಿಕಟವಾದ ಸಂಬಂಧವಿದ್ದು ಅವೆರಡು ಹಾಸು ಹೊಕ್ಕಾಗಿ ಸೇರಿಕೊಂಡಿವೆ. ಜಾತಿ, ವೃತ್ತಿ, ಅಂತಸ್ತು, ಭೇದವಿಲ್ಲದೆ ಎಲ್ಲರ ಜೀವನದಲ್ಲೂ ಸೇರಿಕೊಂಡಿವೆ. ಮಾನವ ಬದುಕಿನ ಮೊದಲ ಪುಟದಿಂದ ಹಿಡಿದು ಆಧುನಿಕ ಜಗತ್ತಿನವರೆಗೂ ನಂಜಿಕೆಗಳು ಹುಟ್ಟುತ್ತಾ ಬಂದಿವೆ."[೫] ಹೀಗೆ ನಂಬಿಕೆಗಳು ನಿರಂತರವಾಗಿ ಮಾನವನ ಜೀವನದಲ್ಲಿ ಹಾಸು ಹೊಕ್ಕಾಗಿವೆ. ನಂಬಿಕೆಗಳು ಯಾವುದೇ ಒಂದು ಜನಾಂಗಕ್ಕೆ ಅಥವಾ ಒಂದು ವೃತ್ತಿಗೆ ಮೀಸಲಾಗಿರದೆ ಇಡೀ ಮಾನವನ ಬದುಕಿನುದ್ದಕ್ಕೂ ಸೇರಿಕೊಂಡಿವೆ ಎಂಬ ಅಭಿಪ್ರಾಯವನ್ನು ಮೇಲಿನ ಹೇಳಿಕೆಯಲ್ಲಿ ಕಾಣಬಹುದು. ಹಾಗೆಯೇ ಸಾಮಾನ್ಯವಾಗಿ ನಂಬಿಕೆಯೆನ್ನುವುದು ಭೂತ, ವರ್ತಮಾನ ಮತ್ತು ಭವಿಷ್ಯತ್ತಿನ ಸಂಬಂಧವನ್ನು ಒಳಗೊಂಡಿರುತ್ತದೆ. ಈ ನಂಬಿಕೆಗಳು ಜನಪದರ ಬದುಕಿನಲ್ಲಂತೂ ಹೆಜ್ಜೆ-ಹೆಜ್ಜೆಗೂ ಹಾಸು ಹೊಕ್ಕಾಗಿದೆ. ಕಾಲು ಎಡವಿದ್ದು, ಕಣ್ಣು ಹಾರಿದ್ದು, ಕಾಗೆ ಕೂಗಿದ್ದು, ಹಾಲಕ್ಕಿ ನುಡಿದದ್ದು, ಹಲ್ಲಿ ಲೊಚಗುಟ್ಟಿದ್ದು, ತೀವ್ರ ಪರಿಣಾಮ ಬೀರಿ ಎಂಥವರನ್ನು ನಿಯಂತ್ರಿಸುವಷ್ಟು ಬೇರು ಬಿಟ್ಟಿರುವಂತಹ ಈ ನಂಬಿಕೆಗಳು ಮಾನವನ ಸಂಸ್ಕೃತಿಯಲ್ಲಿ ಸಾಮರಸ್ಯಗೊಂಡಿವೆ. ಅಲ್ಲದೆ ನಂಬಿಕೆಗಳು ಸಮಾಜ, ಸಂಸ್ಕೃತಿಯ ಅಡಿಪಾಯದಲ್ಲಿ ಮೊದಲ ಸ್ಥಾನವನ್ನು ಪಡೆದಿದೆ. ಈ ನಂಬಿಕೆಗಳನ್ನು ತೆರೆ ತೆರೆಯಾಗಿ ಬಿಡಿಸಿ ನೋಡಿದಾಗ ಉಜ್ವಲ ಸಂಸ್ಕೃತಿಯ ನೀತಿಯ ನೆಲೆಯನ್ನು ಕಾಣಬಹುದಾಗಿದೆ.

## ದೈವಕ್ಕೆ ಸಂಬಂಧಿಸಿದ ನಂಬಿಕೆಗಳು

* ಬೇಡ ನಾಯಕ ತಳವಾರ ಸಮುದಾಯದ ಜೀವನದಲ್ಲಿ ದೈವದ ಕುರಿತಾದ ನಂಬಿಕೆಗಳು, ಅದಕ್ಕೆ ಸಂಬಂಧಿಸಿದ ಆಚರಣೆಗಳು ಸಾಂಪ್ರದಾಯಿಕ ವಿಧಿಗಳನ್ನು ಚಾಚೂ ತಪ್ಪದೇ ಅನುಸರಿಸುತ್ತಾರೆ.
* ಮನೆ ದೇವರಿಗೆ ಕಡ್ಡಾಯವಾಗಿ ನಡೆದುಕೊಳ್ಳುವುದು.
* ಹರಕೆ ಹೊರುವುದು.

* ದೇವರಿಗೆ ಪ್ರಾಣಿಬಲಿ ಕೊಡುವ ಪದ್ಧತಿ ಇನ್ನೂ ಜೀವಂತವಿದೆ.

* ದೇವರ ಹೆಸರಿನಲ್ಲಿ ದೇವದಾಸಿ ಬಿಡುವುದು ಇತ್ತೀಚೆಗೆ ಕಡಿಮೆಯಾಗಿದೆ.

**ಪ್ರಕೃತಿ ನಂಬಿಕೆಗಳು**

ನಾಯಕ ತಳವಾಳರ ಸಮುದಾಯದಲ್ಲಿ ಪ್ರಕೃತಿಯಲ್ಲಿ ನಡೆಯುವ ಹಲವಾರು ಘಟನೆಗಳ ಹಿನ್ನೆಲೆಯಲ್ಲಿ ಹಲವಾರು ನಂಬಿಕೆಗಳನ್ನು ಇಟ್ಟುಕೊಂಡಿದ್ದಾರೆ. ಮರ, ಗಿಡ, ನಕ್ಷತ್ರ, ಮಳೆ, ಗುಡುಗು, ಸಿಡಿಲು, ಆಕಾಶ ಮೊದಲಾದವುಗಳ ಬಗ್ಗೆ ಅನೇಕ ನಂಬಿಕೆಗಳಿವೆ.

* ನಕ್ಷತ್ರ ಬೀಳುವುದನ್ನು ನೋಡುವುದು ಅಶುಭ ಸೂಚನೆ.

* ಸಿಡಿಲು ಹೊಡೆದರೆ ಮನೆಯ ಹಿರೇಮಗನಿಗೆ ಹೊಡೆಯುತ್ತದೆ.

* ಮಳೆ ಬರದಿದ್ದರೆ, ಕತ್ತೆಯ ಪೂಜೆ ಮಾಡುವುದು.

* ಖಡ್ಗಕ್ಕೆ ತುಕ್ಕು ಹಿಡಿದರೆ ಅಪಶಕುನ, ಹಾನಿ ಎಂದು ಭಾವಿಸುವುದು.

**ಪ್ರಾಣಿ ಪಕ್ಷಿಗಳ ಕುರಿತ ನಂಬಿಕೆಗಳು**

ಇಲ್ಲಿ ಕೆಲವು ಪ್ರಾಣಿಗಳು ಅವರಿಗೆ ಪೂಜ್ಯವಾದರೆ ಮತ್ತೆ ಕೆಲವು ಪ್ರಾಣಿ ಪಕ್ಷಿಗಳು ಅಶುಭದಾಯಕವಾಗಿರುತ್ತದೆ.

* ಹಸುಗಳು ಪೂಜ್ಯನೀಯ ಪ್ರಾಣಿ.

* ಕಾಗೆ, ಗೂಬೆ, ಹಲ್ಲಿ, ಬೆಕ್ಕು ಅಶುಭದಾಯಕ ಪಕ್ಷಿಗಳಾಗಿವೆ.

* ಕಾಗೆ ಮನೆಯ ಒಳಗೆ ಬಂಧರೆ ಅಪಶಕುನ ಸಂಕೇತ. ಎಂದು ಭಾವಿಸಿ ಇಡೀ ಮನೆಯನ್ನು ಸಾರಿಸಿ, ಸಿಹಿ ಅಡುಗೆಗಳನ್ನು ಮಾಡಿ ದೇವರಿಗೆ ನೈವೇದ್ಯ ಮಾಡಬೇಕು. ಆಗ ಯಾವ ತೊಂದರೆಯಾಗುವುದಿಲ್ಲ ಎಂಬ ನಂಬಿಕೆ.

* ಕಾಗೆ ಮೇಲಿಂದ ಮೇಲೆ ಅರಚುತ್ತಾ ಹಾದು ಹೋದರೆ ನೆಂಟರಿಷ್ಟರು ಬರುತ್ತಾರೆ.

* ಕಾಗೆ ಮನೆಯನ್ನು ಸುತ್ತು ಹಾಕುತ್ತಾ ಅರಚುತ್ತಿದ್ದರೆ, ಸಾವಿನ ಸುದ್ದಿ ಬಂದೇ ಬರುತ್ತದೆ.

* ಬೆಕ್ಕು ಮನೆಯಲ್ಲಿ ಬೆಳಿಗ್ಗೆ ಎದ್ದು ನಾಲಿಗೆಯಿಂದ ತನ್ನ ಕಾಲಿಗೆ ತಿಕ್ಕಿ ಮುಖ ತೊಳೆದು ಕೊಳ್ಳುತ್ತದೆಯೋ ನೆಂಟರು ಮನೆಗೆ ಬರುತ್ತಾರೆ ಎಂಬ ನಂಬಿಕೆ.

* ಗೂಬೆ ಕಂಡರೆ ಮೂರು ದಿನಗಳ ಒಳಗಾಗಿ ಸಾವು ಖಂಡಿತ.

* ಹಂದಿ ಲಕ್ಷ್ಮಿಯಂತೆ ಅದು ಮನೆಯೊಳಗೊಕ್ಕರೆ ಅದನ್ನು ಕೊಂದು ಬಾಗಿಲ ಕೆಳಗೆ ಹೂಳುವ ಪದ್ಧತಿ.

**ಸಾಂಪ್ರದಾಯಿಕ ನಂಬಿಕೆಗಳು**

* ಮೈಮೇಲಿನ ಬಟ್ಟೆ ಸುಡಬಾರದು. ಸುಟ್ಟರೆ ದಾರಿದ್ರ್ಯ ಪ್ರಾಪ್ತವಾಗುತ್ತದೆ.
* ಮೈಮೇಲೆ ಬಟ್ಟೆಯನ್ನು ಸೂಜಿ ದಾರದಿಂದ ಹೊಲೆಯಬಾರದು.
* ಹುಣ್ಣಿಮೆ, ಅಮವಾಸ್ಯೆ ಹುಟ್ಟಿದ ದಿನ ಕ್ಷೌರ ಮಾಡಿಸಿಕೊಳ್ಳಬಾರದು.
* ಸಂಜೆ ಹೊತ್ತು ಬರಿಗೈಲಿ ಸುಣ್ಣ ಕೊಡಬಾರದು.
* ಹಿರಿಯರಿಗೆ ಏರಿಸಿದ ಹೊಸ ಬಟ್ಟೆಗಳನ್ನು ಅರಿಶಿಣ-ಕುಂಕುಮ ಹಚ್ಚಿ, ಪೂಜೆಯಾದ ಮರುದಿನ ಅವುಗಳನ್ನು ಆಕಳ ಮೇಲೆ ಹಾಕಿ ನಂತರ ಉಡುವುದು ಕಡ್ಡಾಯ.

**ನಿಷೇಧಗಳು**

* ಕಾಗೆ ತಲೆಗೆ ಬಡಿದು ಹೋದರೆ ಸ್ನಾನ ಮಾಡಿ ದೇವರಿಗೆ ಎಣ್ಣೆ ನೀಡಿ ಬರುವವರೆಗೆ ಮನೆಯೊಳಗೆ ಬರಬಾರದು ಎಂಬ ನಿಷೇಧ.
* ಶುಭ ಕೆಲಸಗಳಿಗೆ ಹೋಗುವಾಗ ಬೆಕ್ಕು ಕಾಲಿಗೆ ಅಡ್ಡ ಬಂದರೆ ಇಲ್ಲವೆ ಬಲದಿಂದ ಎಡಕ್ಕೆ ಹಾದು ಹೋದರೆ ಶುಭವಾಗುವುದಿಲ್ಲ. ಹೋದ ಕೆಲಸವು ಆಗುವುದಿಲ್ಲ ಎಂದು ಆ ಕೆಲಸ ಮಾಡುವುದನ್ನು ನಿಷೇಧಿಸುತ್ತಾರೆ.
* ಗರ್ಭವತಿಯಾದ ಮಹಿಳೆ ನದಿಯನ್ನು, ಹಳ್ಳವನ್ನು ದಾಟುವಂತಿಲ್ಲ.
* ಗರ್ಭವತಿ ಮಹಿಳೆ ಸತ್ತ ಹೆಣ ನೋಡಬಾರದು.
* ಮದುವೆಯಾದ ನಂತರ ಆಷಾಡ ಮಾಸದಲ್ಲಿ ಗಂಡ-ಹೆಂಡತಿ ಮುಖ ನೋಡುವಂತಿಲ್ಲ.
* ಆಷಾಡಮಾಸದಲ್ಲಿ ಮದುವೆಯಾದ ಹೊಸ ವರ್ಷ, ಅತ್ತೆ-ಸೊಸೆ ಒಂದೇ ಮನೆಯಲ್ಲಿ ಇರಕೂಡದು.
* ಅಮವಾಸ್ಯೆ ದಿನ ಶುಭಕಾರ್ಯ ಮಾಡುವಂತಿಲ್ಲ.
* ವಿಧವೆ ಶುಭಕಾರ್ಯಗಳಿಗೆ ಬರುವಂತಿಲ್ಲ.
* ವಿಧವೆ ಕುಂಕುಮ, ಹೂವು ಇಡುವಂತಿಲ್ಲ ಮತ್ತು ಕೊಡುವಂತಿಲ್ಲ.
* ಸ್ಮಶಾನಕ್ಕೆ ಮಹಿಳೆಯರು ನಿಷೇಧ.
* ಅಮವಾಸ್ಯೆ ಹುಣ್ಣಿಮೆ, ಶನಿವಾರದಂದು ಮಾಂಸಹಾರ ನಿಷಿದ್ಧ

ಈ ಎಲ್ಲಾ ನಂಬಿಕೆ ನಿಷೇಧಗಳು ಕೊಪ್ಪಳ, ಬಳ್ಳಾರಿ, ರಾಯಚೂರು, ಗುಲ್ಬರ್ಗ, ಬಿಜಾಪುರ, ಬೆಳಗಾವಿ, ಧಾರವಾಡ, ಗದಗ ಭಾಗದಲ್ಲಿ ಕಂಡುಬರುತ್ತವೆ. ಹಾಗೆಯೇ ಗ್ರಾಮೀಣ ಸಮುದಾಯದಲ್ಲಿ ಇನ್ನು ಹಲವಾರು ನಂಬಿಕೆಗಳು, ವಿಧಿ-ನಿಷೇಧಗಳು ಅಸ್ತಿತ್ವದಲ್ಲಿದ್ದರೆ, ಬಹುತೇಕ ಪದ್ಧತಿಗಳು, ನಂಬಿಕೆಗಳು, ಆಧುನಿಕತೆ ಮತ್ತು ಜಾಗತೀಕರಣ ಅಸ್ತಿತ್ವಕ್ಕೆ ಬಂದಂತೆ ಕಣ್ಮರೆಯಾಗುತ್ತಿರುವುದು ಸ್ಪಷ್ಟವಾಗಿದೆ.

## ೬.೬. ದೇವದಾಸಿ ಪದ್ಧತಿ

ಈ ಪದ್ಧತಿಯು ಬೇಡ ತಳವಾರ ಸಮುದಾಯದಲ್ಲಿ ಬಹು ಹಿಂದಿನಿಂದಲೂ ಆಚರಣೆಯಲ್ಲಿ ಬಂದಿದೆ. ಲೇಸಿ, ದಾಸಿ ಎಂಬ ಪದಗಳಿಂದಲೂ ಕರೆಯುತ್ತಾರೆ. ಯಾವುದೇ ಒಂದು ಕುಟುಂಬದಲ್ಲಿ ಗಂಡು ಸಂತಾನವಿಲ್ಲದಂತಹ ಸಂದರ್ಭದಲ್ಲಿ ಕುಲ ದೇವತೆಯ ಹೆಸರಿನಿಂದ ದೇವದಾಸಿ ಬಿಡುವ ಪದ್ಧತಿ ರೂಢಿಗೆ ಬಂದಿತೆಂದು ಹೇಳುತ್ತಾರೆ. ಆದರೆ ಈ ಪದ್ಧತಿ ಇಂದು ಮಾಯವಾಗಿದೆ.

ನೂರಾರು ವರ್ಷಗಳ ಹಿಂದೆ, ಬೆಳೆದು ಬಂದಿರುವ ಒಂದು ಪ್ರಮುಖ ಸಾಮಾಜಿಕ, ಪಿಡುಗು ಎಂದರೆ ತಪ್ಪಾಗಲಾರದು. ಇಲ್ಲಿ ಹೆಣ್ಣನ್ನು ಕೇಂದ್ರೀಕರಿಸಿ ಅವಳನ್ನು ದೇವರಿಗೆ ಬಿಡುವುದು, ದೇವರ ಕೆಲಸಕ್ಕೆ ಎಂದು ಸೀಮಿತಗೊಳಿಸಿ ಅವಳಿಂದ ಪೂಜೆ, ಪುನಸ್ಕಾರ, ಸೇವೆಯ ಜೊತೆಗೆ ಅವಳನ್ನು ವೇಶ್ಯೆಯಾಗಿಯೂ ಅಂದಿನ ಜನರು ಬಳಸಿಕೊಳ್ಳುತ್ತಿದ್ದರು. ಆದರೆ ಇಂದಿನ ಕಠಿಣ ಕಾನೂನಿನಿಂದಾಗಿ ದೇವದಾಸಿ ಬಿಡುವ ಪದ್ಧತಿ ನಿಂತಿದೆ.

## ೬.೭. ಬೇಟೆ ಪದ್ಧತಿ

ತಳವಾರರು ದೃಢವಾದ ಮೈಕಟ್ಟು, ಪ್ರಾಣದ ಹಂಗುತೊರೆದು ಹೋರಾಟ ಮಾಡುವ ಪ್ರವೃತ್ತಿ ಅವರಿಗಿದ್ದುದರಿಂದ ಅವರು ಬೇಟೆಗಾರರಾಗಿದ್ದಾರೆ. ಎಲ್ಲ ತೆರನಾದ ಪಶು, ಪಕ್ಷಿಗಳನ್ನು ಬೇಟೆಯಾಡುತ್ತಾರೆ. ಬೇಟೆಯ ಸಂದರ್ಭದಲ್ಲಿ ಬಳಸುವ ಆಯುಧಗಳೆಂದರೆ ಕತ್ತಿ, ಭರ್ಜಿ, ಬಂದೂಕು ಮುಂತಾದವು. ಕೆಲವೊಂದು ಸಂದರ್ಭದಲ್ಲಿ ನಾಯಿ ಹಾಗೂ ಗಿಡುಗಗಳನ್ನು ಪಳಗಿಸಿ ಅವುಗಳ ಸಹಾಯದಿಂದ ಬೇಟೆಯಾಡುತ್ತಾರೆ ಮತ್ತು ಬಲೆಯನ್ನು ಹೆಣೆದು ಪ್ರಾಣಿಗಳಲ್ಲಿ ಭಯ ಹುಟ್ಟಿಸಿ ಅವುಗಳನ್ನು ಸೆರೆ ಹಿಡಿಯುತ್ತಾರೆ. ಕಾಡು ಪ್ರಾಣಿಗಳಾದ ಹುಲಿ, ಚಿರತೆ, ಕಾಡು ಹಂದಿಗಳನ್ನು ಅತ್ಯಂತ ಚಾತುರ್ಯದಿಂದ ಬೇಟೆಯಾಡುತ್ತಾರೆ. ಇತ್ತೀಚೆಗೆ ಈ ರೀತಿ ಕಾಡುಪ್ರಾಣಿಗಳ ಬೇಟೆಯಾಡುವುದನ್ನು ನಿಷೇಧಿಸಿರುವುದರಿಂದ ಇದನ್ನು ನಿಲ್ಲಿಸಿದ್ದಾರೆ. ಅದಾಗ್ಯೂ ತಳವಾರರ ಮನೆಗಳಲ್ಲಿ ಬೇಟೆಯ ಆಯುಧಗಳು ಇಂದಿಗೂ ಇರುವುದನ್ನು ಕಾಣುತ್ತೇವೆ. ಇತ್ತೀಚಿನ ದಿನಗಳಲ್ಲಿ ಸಾಂಕೇತಿಕವೆಂಬಂತೆ ಯುಗಾದಿ ಸಂದರ್ಭದಲ್ಲಿ ಬೇಟೆಯಾಡುವುದನ್ನು ಕಾಣುತ್ತೇವೆ. ಕಾಡು

ಪ್ರಾಣಿಗಳು ಸಿಗದಿದ್ದ ಪಕ್ಷದಲ್ಲಿ ಮಿಕಗಳನ್ನಾದರೂ ಬೇಟೆಯಾಡಿ ತರುತ್ತಾರೆ. ಇದು ಅವರ ಆಯುಧ ಮತ್ತು ಸಂಪ್ರದಾಯ ಸಂಸ್ಕಾರಕ್ಕೆ ಕೊಡುವ ಬೆಲೆ ಎನ್ನುವುದು ತಳವಾರರ ವಾದವಾಗಿದೆ.

ಯುಗಾದಿ ಹಬ್ಬದಲ್ಲಿ ಯುಗಾದಿಯ ಮರುದಿನ ವಯಸ್ಕರು, ಕೆಲ ಹಿರಿಯರು, ತಮ್ಮ ಮನೆಯಲ್ಲಿರುವ ಭರ್ಜಿ, ಕತ್ತಿ, ಕೊಡಲಿ, ಚಪ್ಪುಗೊಡಲಿ, ಗಂಡು ಕೊಡಲಿ, ಕುಡುಗೋಲು, ಈಟಿ, ಮಚ್ಚು ಮುಂತಾದ ಆಯುಧಗಳನ್ನು ತೆಗೆದುಕೊಂಡು ಕೆಲವು ನಾಯಿಗಳ ಸಮೇತ ಅಡವಿಗೆ ಹೋಗುತ್ತಾರೆ. ಬೇಟೆಗೆ ಹೋದ ತಂಡ ಬೇಟೆಯಲ್ಲಿ ಯಾವುದಾದರೂ ಒಂದು ಪ್ರಾಣಿಯನ್ನು ಬೇಟೆಯಾಡಿಕೊಂಡು ಬರಲೇಬೇಕೆಂಬ ನಿಯಮವಿರುವುದರಿಂದ ಬರಿಗೈಯಲ್ಲಿ ಬರುವುದಿಲ್ಲ. ಕೊನೇಪಕ್ಷ ಸಣ್ಣ ಪ್ರಾಣಿಯನ್ನಾದರೂ ಬೇಟೆ ಮಾಡಿಕೊಂಡು ಬರುತ್ತಾರೆ.

## ೬.೮. ಮನೋರಂಜನೆ ಮತ್ತು ಕ್ರೀಡೆಗಳು

ಮನರಂಜನೆ ಮತ್ತು ದೈಹಿಕ, ಮಾನಸಿಕ, ಬೌದ್ಧಿಕ ಉಲ್ಲಾಸ ನೀಡುವ ಆಟವು ಮಾನವನಿಗೆ ಸಹಜ ಪ್ರವೃತ್ತಿಯಿಂದ ಬಂದದ್ದಾಗಿದೆ. ಶೈಶವಾಸ್ಥೆಯ ನಂತರ ಮಾನವನಿಗೆ ಸಹಜವಾಗಿ ಆಟಗಳ ಪ್ರಾರಂಭವಾಗುತ್ತದೆ. ವಯಸ್ಕರಾದಂತೆ ವಿನೋದಾವಳಿಗಾಗಿ ಹಾಗೂ ದೈಹಿಕ ಬಲಿಷ್ಠತೆಗಾಗಿ ಕ್ರೀಡೆಗಳು ಉಳಿದುಕೊಂಡಿವೆ.

ಜನಪದ ಕ್ರೀಡೆಗಳು ಬಹುತೇಕ ಅನುಕರಣೆಯಿಂದ ಪೀಳಿಗೆಯಿಂದ ಪೀಳಿಗೆಗೆ ಉಳಿದು ಕೊಂಡು ಬಂದಂತವುಗಳು. ಭಾರ ಎತ್ತುವುದು, ಕುಸ್ತಿ, ವ್ಯಾಯಾಮ, ಆಸನಗಳು, ಜೋಕಾಲಿ, ಜಿದ್ದಿನ ಆಟಗಳು ಮುಂತಾದವುಗಳು. ದೈಹಿಕ ಪರಿಶ್ರಮದ ಪ್ರಾಚೀನ ಆಟಗಳಾಗಿವೆ.

ವೃತ್ತಿಕಲೆಗಾಗಿ ಪಳಗಿಸಿಕೊಂಡ ದೊಂಬರ ಆಟ, ಮಂಗನ ಆಟ, ಕರಡಿ ಕುಣಿತ, ತೊಗಲು ಬೊಂಬೆ ಆಟಗಳು ಮನೋರಂಜನೆಯ ಸಾಂಪ್ರದಾಯಿಕ ಆಟಗಳಾಗಿವೆ. ಅದರಂತೆ ತಳವಾರ ವೃತ್ತಿಯವರು ಆಡುವ ಆಟಗಳನ್ನು ೪ ಭಾಗ ಮಾಡಲಾಗಿದೆ.

೧. ಚಿಕ್ಕ ಮಕ್ಕಳು ಆಡುವ ಆಟ.
೨. ಗಂಡಸರು ಆಡುವ ಆಟಗಳು.
೩. ಹೆಂಗಸರು ಆಡುವ ಆಟಗಳು.
೪. ಪ್ರಾಣಿ ಸಂಬಂಧಿ ಆಟಗಳು.

### ಚಿಕ್ಕ ಮಕ್ಕಳ ಆಟಗಳು

ಮಕ್ಕಳ ಆಟ ಕೇವಲ ಮನೋರಂಜನೆಯನ್ನು ಮಾತ್ರ ಗುರಿಯಾಗಿರಿಸಿಕೊಂಡಿರುತ್ತದೆ. ಮಕ್ಕಳು ಸಂತೋಷದಿಂದ ಆಡುತ್ತಾ ಬೆಳೆಯಬೇಕೆಂಬುದೇ ಇಲ್ಲಿಯ ಸಾಮಾಜಿಕ ಪ್ರಜ್ಞೆಯಾಗಿರ

ಬೇಕು. ಪ್ರಾಚೀನ ಕಾಲದಲ್ಲಿ ಓಡುವುದು, ನೆಗೆಯುವುದು, ಈಜುವುದು ಮುಂತಾದ ಸಾಹಸ ಪ್ರವೃತ್ತಿಯ ಆಟಗಳೇ ಹೆಚ್ಚಾಗಿದ್ದವು. ಆದರೆ ಇಂದು ಗಾಳಿಪಟ ಹಾರಿಸುವುದು, ಬಳೆಚೂರಿನ ಆಟ, ಕುಂಟಬಿಲ್ಲೆಯ ಆಟ, ಕಣ್ಣಾಮುಚ್ಚಾಲೆ, ಕಪ್ಪೆಯಾಟ, ಮಂಗನಾಟ, ಬುಗುರಿಯಾಟ, ಗೋಲಿಯಾಟ, ಲಡ್ಡು-ಲಡ್ಡು ತಿಮ್ಮಣ್ಣಾ ಮುಂತಾದ ಮನೋರಂಜನೆಯ ಆಟಗಳನ್ನು ಕ್ಷೇತ್ರಕಾರ್ಯಕ್ಕೆ ಹೋದ ಸಮಯದಲ್ಲಿ ಕಂಡ ಆಟಗಳು. ಅಲ್ಲದೇ ಹಗ್ಗದ ಆಟ, ಲಗೋರಿ ಆಟ ಇವೆಲ್ಲವೂ ಗ್ರಾಮೀಣ ಮಕ್ಕಳಲ್ಲಿ ಪ್ರಚಲಿತದಲ್ಲಿರುವುದು ಕಂಡುಬಂದಿದೆ.

**ಗಂಡಸರು ಆಡುವ ಆಟಗಳು**

ಇಲ್ಲಿ ಶಾರೀರಿಕ ಶ್ರಮ ಹೆಚ್ಚಿರುತ್ತವೆ. ಹಾಗೆಯೇ ಬೌದ್ಧಿಕ ಕಸರತ್ತು ಪ್ರಧಾನವಾಗಿರುತ್ತದೆ. ಗಂಡಸು ನಮ್ಮ ಜನಪದರಲ್ಲಿ ದುಡಿದು ತಂದು ಹಾಕುವುದು, ಅವನು ಬಲಾಢ್ಯನಾಗಿ ಇರಬೇಕು. ಹೀಗಾಗಿ ಜಾಣ್ಮೆ, ತಂತ್ರಗಾರಿಕೆ, ಸಾಹಸ, ಶಕ್ತಿ ಪ್ರಧಾನ ಆಟಗಳೆಲ್ಲ ಗಂಡಸರ ಆಟಗಳಾಗುತ್ತವೆ. ಉದಾಹರಣೆಗೆ ಕಬ್ಬಡಿಯಾಟ, ಗೂಳಿ ಕಾಳಗ, ಪಗಡೆಯಾಟ, ಬಿಲ್ಲುಗಾರಿಕೆ, ಗುಂಡುಕಲ್ಲು ಎತ್ತುವುದು, ಕುಸ್ತಿ, ಹುಲಿಮನಿಯಾಟ, ನಿಂಬೆಹಣ್ಣು ಆಟ ಮುಂತಾದವು.

**ಹೆಂಗಸರು ಆಡುವ ಆಟಗಳು**

ನಮ್ಮ ಭಾರತೀಯ ಪರಂಪರೆಯಲ್ಲಿ ಲಿಂಗ ತಾರತಮ್ಯ ಭಾವವಿರುವುದು ಸಹಜವಾಗಿದೆ. ಇಲ್ಲಿ ಹೆಣ್ಣು ಗಂಡುಗಳ ಶಾರೀರಿಕ ರಚನೆ ಮತ್ತು ದುಡಿಮೆಯ ನಿರೀಕ್ಷೆಗೆ ತಕ್ಕಂತೆ ಆಟಗಳು ಸೃಷ್ಟಿಯಾಗಿವೆ. ಉದಾಹರಣೆಗೆ ಕುಂಟೆಬಿಲ್ಲೆ ಆಟ, ಬಳೆಚೂರಿನ ಆಟ, ಪಗಡೆಯಾಟ, ಚೌಕದ ಆಟ, ಜೋಕಾಲಿ ಆಟ ಮುಂತಾದವುಗಳು ಕಡಿಮೆ ಶ್ರಮದ ಆಟಗಳಾಗಿರುವುದರಿಂದ ಇವು ಸ್ತ್ರೀಯರ ಆಟಗಳಾಗಿವೆ.

**ಪ್ರಾಣಿ ಸಂಬಂಧಿ ಆಡುವ ಆಟ**

ತಮ್ಮ ಒಡನಾಟದ ಆಟಗಳನ್ನು ತಮ್ಮ ಬದುಕಿನ ಒಂದು ಭಾಗವೆಂದೇ ತಿಳಿದಿರುವ ಈ ಸಮುದಾಯದ ಜನರು ಸಾಕುಪ್ರಾಣಿಗಳ ಮುಖಾಂತರವೂ ತಮ್ಮ ಕ್ರೀಡಾ ಮನೋಭಾವನೆಯನ್ನು ಮೆರೆಯುತ್ತಾರೆ. ಪ್ರಾಣಿಗಳಲ್ಲಿ ಎತ್ತುಗಳಿಗೆ ಸಂಬಂಧಿಸಿದಂತೆ ಕ್ರೀಡೆಗಳು ಇಲ್ಲಿ ಕಂಡುಬರುತ್ತವೆ. ಉದಾಹರಣೆಗೆ ಕಾರಹುಣ್ಣಿಮೆಯ ದಿನದಂದು ಎತ್ತುಗಳಿಂದ ಕರಿ ಹರಿಯುವ ಪದ್ಧತಿ ಮತ್ತು ಟಗರುಗಳ ಗುದ್ದಾಟ, ಬೇಟೆಯಾಡಲು ನಾಯಿಗಳನ್ನು ಪಳಗಿಸುವುದು, ಕೋಳಿಗಳ ಜಗಳವನ್ನು ಇಲ್ಲಿ ಕಾಣಬಹುದು. ಒಟ್ಟಾರೆಯಾಗಿ ಜನಪದ ಬದುಕಿನಲ್ಲಿ ತಳವಾರರ ಆಟ, ಪಾಠ, ಸಂಪ್ರದಾಯ ಗಳ ಆಚರಣೆಗಳಲ್ಲಿ ಇತರೆ ಸಮುದಾಯದವರಂತೆ ಸಾಮ್ಯತೆ ಇದ್ದರೂ ವಿಶೇಷತೆ ಇರುವುದು ಕಾಣಬಹುದು.

**ಕೊನೆ ಟಿಪ್ಪಣಿಗಳು**

೧. ಸತ್ಯನಾಯಕ ಎ.ಎಂ., ಉತ್ತರ ಕರ್ನಾಟಕದ ಮದುವೆ ಸಂಪ್ರದಾಯ, ಪು.೧೯

೨. ದೇವನ ಪಲ್ಲಿಯ ದೇವಮ್ಮ ಹಾಡಿದ್ದು

೩. ಅದೇ,

೪. ವೀರೇಂದ್ರ ಸಿಂಪಿ, ಸಮಗ್ರ ಜಾನಪದ ಸಂಪುಟ, ೨೦೦೭, ಪು.೩೬೨

೫. ನಾಗೇಗೌಡ ಎಚ್.ಎಲ್., ಜಾನಪದ ಅಕ್ಟೋಬರ್-ಡಿಸೆಂಬರ್, ಸಂಪುಟ ೨೨

# ಅಧ್ಯಾಯ ಏಳು

# ತಳವಾರರ ಸಾಮಾಜಿಕ ಸಹಭಾಗಿತ್ವ ಮತ್ತು ಇತರೆ ಸಮುದಾಯಗಳೊಂದಿಗಿನ ಸಾಂಸ್ಕೃತಿಕ ಬಾಂಧವ್ಯ

ಅಧ್ಯಾಯ ಏಳು

# ತಳವಾರರ ಸಾಮಾಜಿಕ ಸಹಭಾಗಿತ್ವ ಮತ್ತು ಇತರೆ ಸಮುದಾಯಗಳೊಂದಿಗಿನ ಸಾಂಸ್ಕೃತಿಕ ಬಾಂಧವ್ಯ

ವೃತ್ತಿಗಳ ವಿಕಾಸಕ್ಕೂ ಮಾನವನ ಬುದ್ಧಿ ಭಾವಗಳ ಬೆಳವಣಿಗೆಗೂ ನೇರ ಸಂಬಂಧವಿದೆ. ಒಬ್ಬಂಟಿಯಾಗಿ ಜೀವಿಸುತ್ತಿದ್ದ ಮಾನವನು ಕುಟುಂಬ ಜೀವಿಯಾದ. ಕುಟುಂಬ ಜೀವಿಯಾಗಿದ್ದವನು ಗ್ರಾಮಜೀವಿಯಾದ. ನಂತರ ಪಟ್ಟಣ ವಾಸಿಯಾದನು. ಈ ಎಲ್ಲ ಹಂತಗಳಲ್ಲಿ ಭಾವ ಜೀವಿಯಾಗಿ, ಬುದ್ಧಿ ಜೀವಿಯಾಗಿ ಹಲವಾರು ಸಂಬಂಧ ಸಂಪರ್ಕಗಳನ್ನು ವಿಸ್ತರಿಸಿಕೊಂಡು ತನ್ನ ಬದುಕುವಿಕೆ, ಇರುವಿಕೆಗಳಲ್ಲಿ ಪರಿವರ್ತನೆಗಳನ್ನು ಕಾಣುತ್ತಾ ಇಂದಿನವರೆಗೂ ಬೆಳೆಯುತ್ತಾ ಬಂದಿದ್ದಾನೆ. ಜೊತೆಗೆ ತನ್ನ ಸುತ್ತಲಿನ ಪರಿಸರ, ಪರಿಕರಗಳನ್ನು ತನಗಾಗಿ, ತನ್ನವರಿಗಾಗಿ ಬಳಸಿಕೊಳ್ಳುತ್ತಲೇ ಬಂದಿದ್ದಾನೆ. ಮಾನವ ಒಂದು ಹಂತದಲ್ಲಿ ಅಲೆಮಾರಿಯಾಗಿದ್ದವನು. ಅರೆ ಅಲೆಮಾರಿಯಾಗಿ ನಂತರ ಒತ್ತೊಟ್ಟಿಗೆ ನೆಲೆಗೊಂಡು ಸಕಲ ಸೌಕರ್ಯಗಳನ್ನು ಒಳಗೊಂಡು ಜೀವಿಸತೊಡಗಿದನು. ವಿವಿಧ ಪದಾರ್ಥಗಳನ್ನು ತಯಾರಿಸುವ ವೃತ್ತಿ ಮತ್ತು ಕಸಬು ಹಾಗೂ ಕಲೆಗಳು ಮಾನವನ ಈ ಬೆಳವಣಿಗೆಯೊಂದಿಗೆ ವಿಕಾಸಗೊಳ್ಳುತ್ತಾ ಬಂದಿವೆ.

"ಎಲ್ಲಾ ವೃತ್ತಿಗಳು ಏಕಕಾಲಕ್ಕೆ ಅಸ್ತಿತ್ವಕ್ಕೆ ಬಂದಿರಲಾರವು. ಮಾನವನ ಬೆಳವಣಿಗೆಯಲ್ಲಿ ಮೊದಲು ಬೇಟೆ, ಆನಂತರ ಬೇಸಾಯ ಪ್ರಧಾನವಾಗಿದೆ. ಅದಕ್ಕಾಗಿ ತನ್ನ ಸುತ್ತಲೂ ದೊರಕುತ್ತಿದ್ದ ಸಾಮಗ್ರಿಯ ಪರಿಮಿತಿಯಲ್ಲಿ ಆಯುಧ, ಪಾತ್ರೆ, ಹೊದಿಕೆ, ವ್ಯವಸಾಯದ ಸಾಧನಗಳು ಮುಂತಾದವು ರಚನಾ ಚಟುವಟಿಕೆಯಲ್ಲಿ ತೊಡಗಿರಬಹುದು."[೧]

ಸಮಾಜವೆಂಬುದು ಮಾನವನ ಸಾಂದರ್ಭಿಕ ಒಪ್ಪಂದದ ಒಂದು ಸ್ವರೂಪ. ಅದರ ಹುಟ್ಟು ಬೆಳವಣಿಗೆಗೆ ಸಾವಿರಾರು ವರ್ಷಗಳಷ್ಟು ದೀರ್ಘ ಇತಿಹಾಸವಿದೆ. "ಆದಿ ಮಾನವನು ಅಲೆಮಾರಿಯಾಗಿದ್ದಾಗ, ಅವನ ಅಸ್ತಿತ್ವಕ್ಕೆ ಸವಲಾಗಿ ನಿಂತ ಅನೇಕ ಗಂಡಾಂತರಗಳಿಂದ ಪಾರಾಗಲು ಅವುಗಳ ನಿವಾರಣೆಗೆ ಶಾಶ್ವತ ಪರಿಹಾರ ಕಂಡುಕೊಳ್ಳಲು ಮತ್ತೊಂದರ ಸಹಾಯ, ಸಹಕಾರ ಮತ್ತು ಆಸರೆಯ ಅವಶ್ಯಕತೆಯೇ ಮಾನವನ ಕುಟುಂಬ ಅಸ್ತಿತ್ವಕ್ಕೆ ನಾಂದಿಯಾಯಿತು."[೨]

ಈ ಹಿನ್ನೆಲೆಯಲ್ಲಿ ಅನೇಕ ಸಂಶೋಧನೆ, ಆವಿಷ್ಕಾರಗಳಿಗೆ ಕಾರಣವಾಗಿ ಸಾಮಾಜಿಕ, ಆರ್ಥಿಕ ಅಂಶಗಳಾದ ಕುಟುಂಬ, ವಿವಾಹ, ಧರ್ಮ, ವೃತ್ತಿ ಮತ್ತು ಆಸ್ತಿಗಳ ಪರಿಕಲ್ಪನೆಗೆ ಕಾರಣವಾಯಿತು. ಇವೆಲ್ಲವುಗಳ ರಕ್ಷಕ ಹಾಗೂ ಪೋಷಕ ಸ್ಥಾನವನ್ನು ಸಮಾಜವು ವಹಿಸಿಕೊಂಡು ಜನಸಮುದಾಯಗಳ ನಡೆನುಡಿ ನೀತಿ-ನಿಯಮಗಳ ನಿರೂಪಕನ ಸ್ಥಾನಮಾನವನ್ನು ನಿರ್ಧರಿಸುವ ಅಧಿಕಾರವನ್ನು ಪಡೆದುಕೊಂಡಿತು. ನಂತರ ಮಾನವನ ಕುಟುಂಬದ ಸ್ವರೂಪವೇ ಬದಲಾಯಿತು. ಆಧುನಿಕತೆ ಮತ್ತು ತಾಂತ್ರಿಕತೆಯನ್ನು ಮಾನವನ ಬೌದ್ಧಿಕತೆಯ ದಿಕ್ಕನ್ನು ಬದಲಾಯಿಸಿ ಹತ್ತಾರು ಬದಲಾವಣೆ ಗಳೊಂದಿಗೆ ಕುಟುಂಬ ವ್ಯವಸ್ಥೆಯ ರೀತಿ ರೀವಾಜುಗಳು ನಿರ್ಧರಿಸಲ್ಪಟ್ಟವು.

ಸಮಾಜಕ್ಕೂ ಕುಟುಂಬವೇ ಮೂಲಾಧಾರ. ಸಮಾಜದ ಎಲ್ಲಾ ಸಂಸ್ಥೆಗಳು, ವೃತ್ತಿಗಳು ಪಂಗಡಗಳು, ರೀತಿ-ನೀತಿಗಳನ್ನು ಆಚರಣೆಗಳು ಮುಂತಾದ ಹತ್ತು ಹಲವು ಸಂಗತಿಗಳು ಇಲ್ಲಿ ಸಮಾವೇಶಗೊಳ್ಳುತ್ತವೆ. ಸಮಾಜದಲ್ಲಿ ಜೀವಿಸುವ ಹಲವಾರು ಭಿನ್ನ ರೀತಿಯ ಕುಲಕಸಬುದಾರರು ತಮ್ಮದೇ ಆದಂತಹ ಜಾತಿ ವರ್ಗ, ವರ್ಣದ ನೆಲೆಯಲ್ಲಿ ವಿಭಜನೆಗೊಂಡಿದ್ದಾರೆ. ಈ ಒಂದೊಂದು ವಿಭಜಿತ ಘಟಕಗಳು ತಮ್ಮದೆ ಆದ ಜೀವನ ವಿಧಾನ, ವಾಸದ ನೆಲೆ, ಆಚಾರ-ವಿಚಾರ, ವೃತ್ತಿಗೆ ಸಂಬಂಧಿಸಿದ ಸಂಪ್ರದಾಯವನ್ನು ರೂಢಿಸಿಕೊಂಡಿದ್ದಾರೆ. ಈ ಮೂಲಕ ಸಾಮಾಜಿಕ ಆರ್ಥಿಕ ವ್ಯವಸ್ಥೆಯ ವಿಭಿನ್ನ ಬಗೆಯ ಅಂಶಗಳಲ್ಲಿ ತಮ್ಮನ್ನು ಉಳಿಸಿಕೊಂಡಿದ್ದಾರೆ.

ಸಮಾಜ ಕೇವಲ ಕುಟುಂಬಗಳಲ್ಲಿನ ವ್ಯಕ್ತಿಗಳ ಸಮೂಹವಾಗಿರದೇ ಪರಸ್ಪರ ವಿವಿಧ ಬಗೆಯ ಕುಲವೃತ್ತಿ ಸಂಬಂಧವುಳ್ಳ ಜನತೆಯ ಆಂತರಿಕ ವ್ಯವಸ್ಥೆಯಾಗಿದೆ, ವಿವಿಧ ಕಾರಣಗಳಿಗಾಗಿ ಒಂದು ಬಗೆಯ ಏಕತೆಯೂ ಅವರವರ ನಡುವೆ ಏರ್ಪಟ್ಟು, ವಾಸ್ತವ ನೆಲೆಯ ಆಂತರಿಕವಾದ ನಿಕಟ ಸಂಬಂಧಗಳನ್ನು ಅವಲಂಬಿಸಿರುತ್ತದೆ. ಕೆಲವು ನೀತಿಸೂತ್ರ ಶಿಸ್ತುಗಳಿಗೆ ಒಳಪಟ್ಟು ಸುಸಂಘಟಿತ ಸಮುದಾಯವನ್ನು ನಾವು ಸಮಾಜ ಎನ್ನುತ್ತೇವೆ. ಸಾಮಾಜಿಕ ಸಂಸ್ಥೆಗಳಲ್ಲಿ ಕುಟುಂಬವು ಅತ್ಯಂತ ಮುಖ್ಯ ಘಟಕ. ಏಕೆಂದರೆ ಎಲ್ಲಾ ಘಟಕಗಳು ಆಧಾರವಾಗಿರುವುದು ಈ ಕುಟುಂಬದ ಮೇಲೆ. ಕುಟುಂಬವಿಲ್ಲದೆ ಸಮಾಜ ಇರಲು ಸಾಧ್ಯವಿಲ್ಲ.

ಇಂತಹ ವೃತ್ತಿ ಸಂಬಂಧಿತ ಕುಟುಂಬಗಳು ಹಿಂದಿನ ಕಾಲದಲ್ಲಿ ತಮ್ಮ ವೃತ್ತಿಗೆ ತಕ್ಕಂತೆ ಪ್ರತ್ಯೇಕ ವಾಸಸ್ಥಳದಲ್ಲಿರುತ್ತಿದ್ದವು. ಅವುಗಳಲ್ಲಿ ಕುಂಬಾರ ಓಣಿ, ನೇಕಾರ ಓಣಿ, ಮೇದಾರ ಓಣಿ, ತಳವಾರ ಕೇರಿ ಇತ್ಯಾದಿಗಳಿರುವುದನ್ನು ಕಾಣುತ್ತೇವೆ. ಇವರ ಕೇರಿಗಳು ಪ್ರತ್ಯೇಕವಾಗಿದ್ದರೂ ಸಹ ತಳವಾರರು ಇತರೆ ಸಮುದಾಯಗಳಾದ ಬ್ರಾಹ್ಮಣ, ಲಿಂಗಾಯತ, ಗೌಡ, ಕುರುಬ, ನಾಯಕ, ಗೊಲ್ಲ, ಮುಸ್ಲಿಂ ಮುಂತಾದವರೊಂದಿಗೆ ಆಚಾರ-ವಿಚಾರ, ಜನನ-ಮರಣ, ಮದುವೆ, ದೈವಾಚರಣೆ, ಹಬ್ಬ-ಹರಿದಿನ ಇತ್ಯಾದಿ ಶುಭ, ಅಶುಭ ಸಂದರ್ಭಗಳಲ್ಲಿ ಅವಿನಾಭಾವ ಸಂಬಂಧವನ್ನು ಇಟ್ಟುಕೊಂಡಿದ್ದಾರೆ. ತಳವಾರರ ಕೆಲಸ ಮತ್ತು ಸಂಬಂಧವನ್ನು ಮೂರು ರೀತಿಯಾಗಿ ವಿಂಡಗಿಸಿ ವಿವರಿಸಬಹುದು.

೧. ತಳವಾರ ಮತ್ತು ಇತರೆ ವೃತ್ತಿಯವರೊಂದಿಗಿನ ಸಂಬಂಧ

೨. ತಳವಾರ ಮತ್ತು ಇತರೆ ಸಮುದಾಯಗಳೊಂದಿಗಿನ ಸಾಂಸ್ಕೃತಿಕ ಸಂಬಂಧ

೩. ಧಾರ್ಮಿಕ ಆಚರಣೆಗಳ ಸಂಬಂಧ

**೧. ತಳವಾರ ಮತ್ತು ಇತರೆ ವೃತ್ತಿಯವರೊಂದಿಗಿನ ಸಂಬಂಧ**

ಪುರಾತನ ಕಾಲದಿಂದಲೂ ಗ್ರಾಮೀಣ ಪ್ರದೇಶಗಳಲ್ಲಿ ಬಡವ-ಶ್ರೀಮಂತ, ಭೂಮಾಲೀಕ-ಗೇಣಿದಾರ, ಒಡೆಯ-ಆಳು, ಬಂಡವಾಳದಾರ-ಕಾರ್ಮಿಕ ಹೀಗೆ ಮುಂತಾದ ವರ್ಗಗಳು ಬೆಳೆದುಕೊಂಡು ಬಂದಿವೆ. ಉಳ್ಳವರು ಬಲಾಢ್ಯರು, ಭೂಮಾಲಿಕರು ತಮ್ಮ ಅಧಿಕಾರ ದರ್ಪದಿಂದ ತಮ್ಮ ಜೀವನಕ್ಕೆ ಬೇಕಾಗುವ ವಸ್ತು ಮತ್ತು ಸೇವೆಗಳನ್ನು ನೀಡಿ ವರ್ಗವನ್ನು ಹುಟ್ಟು ಹಾಕಿಕೊಂಡು ಬಂದಿದ್ದಾರೆ ಅಥವಾ ಅವರೇ ಶ್ರಮ ವಿಭಜನೆ ಮಾಡಿರುವ ಸಾಧ್ಯತೆಯೂ ಇದೆ. "ವಿವಿಧ ಪ್ರದೇಶಗಳಲ್ಲಿ ಜೀವನ ಮಾಡುವ ಬಡವರು, ಅಲ್ಪಸಂಖ್ಯಾತರು, ತುಳಿತಕ್ಕೊಳಗಾದವರು, ಭೂಮಿ ಇಲ್ಲದವರು ತಮ್ಮ ಹೊಟ್ಟೆ ಹೊರೆಯುವುದಕ್ಕಾಗಿ ಮತ್ತು ತಮ್ಮ ಒಡೆಯ ಅಥವಾ ನಾಯಕರ ಒತ್ತಾಯಕ್ಕಾಗಿ ಅವರು ಕೇಳುವ ವಸ್ತು ಸೇವೆಗಳನ್ನು ಮಾಡಿಕೊಂಡು ಬರುತ್ತಿದ್ದಾರೆ. ಈ ವರ್ಗದವರು ಹೊಟ್ಟೆ ಹೊರೆಯುವುದಕ್ಕಾಗಿ ತಲೆ ತಲಾರಂತರದಿಂದ ಕೈಗೊಂಡು ಬಂದ ಅನುವಂಶಿಕ ವೃತ್ತಿ ಅಥವಾ ಕಸಬುಗಳೇ ಕುಲಕಸಬುಗಳಾಗಿವೆ. ಈ ಕಸಬುಗಳಿಗೆ ಪರಂಪರೆ ಇದೆಯೇ ಹೊರತು ನಿರ್ದಿಷ್ಟ ತರಬೇತಿಯಿಲ್ಲ. ಹೆಚ್ಚಾಗಿ ಕೃಷಿಕರ ಆಶ್ರಯದಲ್ಲಿಯೇ ಪಡೆದಂತಹುಗಳಾಗಿವೆ. ಪ್ರಮುಖವಾಗಿ ಮೂಲಭೂತ ಜೀವನಾವಶ್ಯಕತೆಗಳನ್ನು ಪೂರೈಸಿಕೊಳ್ಳುವುದಕ್ಕಾಗಿಯೇ ಇವು ಉದಯವಾದವು. ಸಾಮಾಜಿಕ ಜೀವನದಲ್ಲಿ ಜಮೀನು ಇಲ್ಲದವ ತನಗೆ ಇಷ್ಟವಾದ ಅಥವಾ ಒತ್ತಾಯಪೂರ್ವಕವಾದ ತನ್ನ ಶಕ್ತಿ ಸಾಮರ್ಥ್ಯಕ್ಕಾನುಗುಣವಾದ ಕಸಬನ್ನು ಆಯ್ಕೆ ಮಾಡಿಕೊಂಡು ಅದರಲ್ಲಿ ತನ್ನ ಪರಿಣಿತಿಯನ್ನು ತೋರ್ಪಡಿಸಿಕೊಳ್ಳುತ್ತ ಅದನ್ನು ತನ್ನ ಉಪಜೀವನದ ವೃತ್ತಿಯನ್ನಾಗಿಸಿಕೊಂಡ ಒಂದು ವರ್ಗ ಸಾಮಾಜಿಕ ಜೀವನದಲ್ಲಿ ರೂಪಗೊಂಡಿದೆ"[೩] ಎನ್ನುವಲ್ಲಿ ಒಂದು ಸಾಮಾಜಿಕ ಪರಿಸರದಲ್ಲಿ ವೃತ್ತಿಗಳು ಪಡೆದ ಸ್ಥಾನ ಮತ್ತು ಆ ಮೂಲಕ ಹುಟ್ಟಿಕೊಂಡ ಸಮುದಾಯದ ಹಿನ್ನೆಲೆಗೆ ಪುಷ್ಠಿ ದೊರೆಯುತ್ತದೆ.

ಸಮಾಜದಲ್ಲಿ ರೂಪುಗೊಂಡಿರುವ ವೃತ್ತಿ ಅಥವಾ ಕಸುಬುಗಳು ವಿಸ್ತೃತವಾಗಿವೆ. ಇವುಗಳಲ್ಲಿ ಪ್ರಮುಖವಾದವುಗಳನ್ನು ಈ ಕೆಳಗಿನಂತೆ ವಿಂಗಡಿಸಬಹುದು. ಪಶುಪಾಲಕ ಮತ್ತು ವ್ಯವಸಾಯ ಮಾಡುವ ಒಕ್ಕಲುತನ, ಬಟ್ಟೆ ಶುಭ್ರಗೊಳಿಸುವ ಮಡಿವಾಳಿಕೆ, ತಲೆ ಬೋಳಿಸುವ ಕ್ಷೌರಿಕ ವೃತ್ತಿ, ಬಟ್ಟೆ ನೇಯುವ ನೇಕಾರಿಕೆ, ಬಟ್ಟೆ ಹೊಲಿಯುವ ಸಿಂಪಿಗಾರಿಕೆ, ಮನೆ ಕಟ್ಟುವ ವಡ್ಡ, ಶಿಲ್ಪ ತಯಾರಿಸುವ ಶಿಲ್ಪಿಗಾರಿಕೆ, ಬಳೆ ತಯಾರಿಸುವ ಬಳೆಗಾರಿಕೆ, ಪೂಜೆ ಮಾಡುವ ಪೂಜಾರಿಕೆ, ಮರದ ಸಾಧನ ಸಲಕರಣೆ ಮಾಡುವ ಬಡಿಗ, ಕಬ್ಬಿಣದ ಕೆಲಸ ಮಾಡುವ ಕಮ್ಮಾರ, ಮಣ್ಣಿನ

ಮಡಿಕೆ, ಕುಡಿಕೆ ತಯಾರಿಸುವ ಕುಂಬಾರ, ಲೋಹದ ವಸ್ತು ಮಾಡುವ ಕಂಚುಗಾರ, ಓಲೆ ಹಂಚುವ ಓಲೆಕಾರ, ಊರ ಕಾಯುವ ತಳವಾರ, ಕೆರೆ ನೀರು ಕಾಲುವೆ ಕಾಯುವ ನೀರಗಂಟಿ, ಊರಲ್ಲಿ ಡಂಗುರ ಹೊಡೆಯುವ ಕೋಲುಕಾರ ಇವರುಗಳು ಮಾಡುವ ಕೆಲಸಗಳೆಲ್ಲವು ಕುಲಕಸುಬುಗಳಾಗಿವೆ. ಇವೆಲ್ಲವುಗಳು ವಂಶಪಾರಂಪರ್ಯವಾಗಿ ಬೆಳೆದು ಬಂದವುಗಳು. ಈ ಎಲ್ಲ ಕಸಬುಗಳು ಕರ್ನಾಟಕದ ಎಲ್ಲ ಭಾಗಗಳಲ್ಲಿ ಕಾಣಬಹುದು.

ಕುಲಕಸಬುಗಳು ಹೆಚ್ಚಾಗಿ ಗ್ರಾಮೀಣ ಪ್ರದೇಶಗಳಲ್ಲಿ ಕಂಡುಬರುತ್ತವೆ. ಸಮಾಜದಲ್ಲಿ ಪ್ರತಿಯೊಬ್ಬರು ಒಂದಲ್ಲ ಒಂದು ಕಸಬನ್ನು ನಿರ್ವಹಿಸುತ್ತಿರುವುದರಿಂದ ಅವುಗಳಲ್ಲಿ ಪರಸ್ಪರ ಅವಲಂಬನೆಯನ್ನು ಕಾಣಬಹುದು. ಕುಲಕಸುಬುಗಳೆಲ್ಲವೂ ಒಂದಕ್ಕೊಂದು ಪೂರಕವಾಗಿವೆ. ಇದರಿಂದ ಸಮಾಜದಲ್ಲಿ ಸಹಾಯ, ಸಹಕಾರ, ಸಮಾನತೆ, ಏಕತೆ ಮತ್ತು ಐಕ್ಯತೆಯೂ ಕಾಣಬಹುದು. ಸಮಾಜದಲ್ಲಿ ಪ್ರತಿಯೊಬ್ಬರ ನಡುವೆ ಸಾಮರಸ್ಯವನ್ನು ಈ ವೃತ್ತಿಯ ಸೃಷ್ಟಿ ಮಾಡಿವೆ. ತಳವಾರ ಎನ್ನುವುದು ಒಂದು ಸೇವಾವರ್ಗವನ್ನು ಸೂಚಿಸುವ ಪದ. ಸೇವೆ ಎನ್ನುವುದು ಒಂದು ಸಮಾಜದಲ್ಲಿ ವಾಸಿಸುವ ಎಲ್ಲಾ ಜನರ ಸೇವೆಯೇ ಆಗಿದೆ. ಆದ್ದರಿಂದ ತಳವಾರ ಸಮಾಜದ ಸೇವಕನಾಗಿ ಸಮಾಜದೊಂದಿಗೆ ಅವಿನಾಭಾವ ಸಂಬಂಧ ಹೊಂದಿದ್ದಾನೆ. ಸಮಾಜದ ವಿವಿಧ ಸಮುದಾಯಗಳೊಂದಿಗೆ ಅನನ್ಯತೆಯನ್ನು ಇಟ್ಟುಕೊಂಡು ಸಾಂಸ್ಕೃತಿಕ ರಾಯಭಾರಿಯಾಗಿರುತ್ತಾನೆ. ಇಲ್ಲಿ ತಳವಾರರ ಸಂಸ್ಕೃತಿ ಆಚರಣೆಗಳಲ್ಲಿ ಇತರೆ ಸಮುದಾಯದ ಆಚಾರ-ವಿಚಾರಗಳಲ್ಲಿ ಅಷ್ಟೇನೂ ಭಿನ್ನತೆಗಳಿರದೆ ಪರಸ್ಪರ ಸಂಬಂಧವಿರುವುದನ್ನು ಗುರುತಿಸ ಬಹುದಾಗಿದೆ. ಇವರ ಜೀವನಾವರ್ತನ ಆಚರಣೆಗಳು, ಮದುವೆ, ಸಂಸ್ಕಾರಗಳು ಹಾಗೂ ಹಬ್ಬ-ಹರಿದಿನಗಳಲ್ಲಿ ಆಯಾ ಪರಿಸರದ ಎಲ್ಲಾ ಜನರಂತೆಯೇ ಇರುತ್ತದೆ. ಅವರ ವೃತ್ತಿಗೆ ಸಂಬಂಧಿಸಿದ ಆಚಾರ-ವಿಚಾರಗಳು ಮಾತ್ರ ಬೇರೆಯಾಗಿರುತ್ತವೆ.

**ಗೌಡ:** ಹಿಂದಿನ ಕಾಲದಲ್ಲಿ ರಾಜರ ಆಡಳಿತ ಅನುಕೂಲವಾಗುವಂತೆ ರಾಜ್ಯದಲ್ಲಿ ಪ್ರಾಂತ್ಯ, ಮಂಡಲ, ದೇಶ, ರಾಷ್ಟ್ರ ಎಂದು ವಿಭಾಗಿಸಲಾಗಿತ್ತು. ಪ್ರಾಂತ್ಯಗಳಿಗೆ ಜಿಲ್ಲೆಗಳನ್ನು ಅಧೀನ ಘಟಕವಾಗಿ ಸೇರಿಸಲಾಗಿತ್ತು. ನಾಡು ಜಿಲ್ಲೆಯ ಪ್ರತೀಕವಾಗಿ ಗೊತ್ತಾದ ಕೆಲವು ಸಂಖ್ಯೆಯ ಗ್ರಾಮಗಳು ಹೊಂದಿದ ನಾಡನ್ನು ವಿಷಯವೆಂದು ಕರೆಯಲಾಗಿತ್ತು. ಜಿಲ್ಲೆಯ ಆಡಳಿತದಲ್ಲಿ ಕೆಲವು ನಿರ್ದಿಷ್ಟ ಅಧಿಕಾರ ಹೊಂದಿದ್ದ ನಾಡಗಾವುಂಡನನ್ನು ಗ್ರಾಮ ಮುಖ್ಯಸ್ಥನಾಗಿ ನೇಮಿಸಲಾಗಿತ್ತು. ಇವರಿಗೆ ಪಟೇಲ, ಗೌಡ ಎಂದು ಕರೆಯುತ್ತಿದ್ದರು. ಗ್ರಾಮದ ಮುಖ್ಯಸ್ಥನಾಗಿ ಗ್ರಾಮ ರಕ್ಷಣೆಯ ಆರಕ್ಷಕ ಹೊಣೆಯನ್ನು ಗೌಡನೇ ವಹಿಸಿಕೊಳ್ಳಬೇಕಾಗಿತ್ತು. ಅದಕ್ಕಾಗಿ ತಳವಾರರನ್ನು ಹತ್ತಿರದಲ್ಲೆ ಇಟ್ಟುಕೊಂಡು ರಕ್ಷಣಾ ಉಸ್ತುವಾರಿಯನ್ನು ತಳವಾರನಿಗೆ ವಹಿಸಿದ್ದನು. ಗ್ರಾಮದ ದಾಖಲೆಗಳನ್ನು ಹಾಗೂ ಕಂದಾಯವನ್ನು ಶ್ಯಾನುಭೋಗ ನೋಡಿಕೊಂಡರೆ, ತಳವಾರ ರಕ್ಷಣಾ ಜವಾಬ್ದಾರಿಯನ್ನು ಹೊಂದಿದ್ದ. ಹೀಗಾಗಿ ಗೌಡ ಎಲ್ಲಿಯೇ ಹೋಗಲಿ ಅವರ ಹಿಂದೆ ತಳವಾರನಿರುತ್ತಿದ್ದ. ಗೌಡ

ಹೇಳಿದ ಕೆಲಸವನ್ನು ತಳವಾರ ಚಾಚು ತಪ್ಪದೆ ಮಾಡುತ್ತಿದ್ದ. ಅದಕ್ಕಾಗಿ ತಳವಾರನೆಂದರೆ ಗೌಡನ ಬಲಗೈ ಭಂಟ ಎಂದು ಕರೆಯುತ್ತಿದ್ದರು. ಗೌಡರ ವೈಯಕ್ತಿಕ ಕೆಲಸ ಕಾರ್ಯಗಳನ್ನು ಮಾಡುತ್ತಿದ್ದ ತಳವಾರ ಹೆಚ್ಚಾಗಿ ಅವರ ಮನೆಯಲ್ಲೇ ಮಲಗುತ್ತಿದ್ದ. ಅವನ ಊಟೋಪಚಾರಗಳೆಲ್ಲವು ಗೌಡರ ಮನೆಯಲ್ಲಿರುತ್ತಿತ್ತು. ಗೌಡರ ಮನೆಯ ಒಬ್ಬ ಸದಸ್ಯನಂತೆಯೇ ಅವರ ಎಲ್ಲ ಕಾರ್ಯಕ್ರಮಗಳಲ್ಲಿ ಸಕ್ರಿಯವಾಗಿ ಪಾಲ್ಗೊಂಡು ಅವರೊಂದಿಗೆ ಅನ್ಯೂನತೆಯಿಂದ ಅವರ ಮಗನೆಂಬಂತೆಯೇ ಅವರೊಂದಿಗಿರುತ್ತಿದ್ದನು.

**ಶ್ಯಾನುಭೋಗ:** ಇಂದು ಜಿಲ್ಲಾಧಿಕಾರಿಯಿಂದ ಗ್ರಾಮ ಲೆಕ್ಕಿಗನವರೆಗೆ ಶ್ರೇಣೀಕೃತ ಆಡಳಿತ ವ್ಯವಸ್ಥೆ ಇದೆಯಾದರೂ ಇದು ಒಮ್ಮೆಗೆ ಸೃಷ್ಟಿಯಾದುದಲ್ಲ. ಹಲವು ಶತಮಾನ ಅನುಭವ ಮತ್ತು ವಿಕಸನಗಳಿಂದ ರೂಪ ತಾಳಿದೆ. ಈಗಿರುವ ಗ್ರಾಮಲೆಕ್ಕಿಗನ ಸ್ಥಾನದಲ್ಲಿ ಎರಡು ದಶಕಗಳ ಹಿಂದೆ ಕುಲಕರ್ಣಿ ಅಥವಾ ಶ್ಯಾನುಭೋಗ ಇದ್ದ. ಪ್ರಾಚೀನ ಕಾಲದ ರಾಜ್ಯಾದಾಯದ ಭಾಗವಾಗಿದ್ದ ಕಂದಾಯ ಸಂಗ್ರಹಣೆ ಮತ್ತು ಅವುಗಳ ಕಡತಗಳ ರಕ್ಷಕನಾಗಿ ಶ್ಯಾನಭೋಗನಿದ್ದ. ಈತನಿಗೆ ಸಹಾಯಕನಾಗಿ ತೋಟಿ, ತಳವಾರ, ಓಲೆಕಾರ, ಹಳಬ ಎಂಬ ಸಹಾಯಕನಿರುತ್ತಿದ್ದ. ಅಂದಿನ ಕಾಲದ ತೆರಿಗೆ ವಸೂಲಿ ಮತ್ತು ಶಿಕ್ಷೆಗಳನ್ನು ತಳವಾರನೇ ಮಾಡುತ್ತಿದ್ದ. ಹಾಗಾಗಿ ತಳವಾರ ಶ್ಯಾನಭೋಗರು ಕಂದಾಯ ವಸೂಲಿಗೆ ಹೋದರೆ ಅವರಿಗೆ ರಕ್ಷಣೆ ಒದಗಿಸಲು ಹಿಂಬಾಲಕನಾಗಿ ತಳವಾರ ಹೋಗುತ್ತಿದ್ದನು. ಹಾಗಾಗಿ ತಳವಾರನ ಊಟೋಪಚಾರಗಳನ್ನು ಶ್ಯಾನಭೋಗರೇ ನೋಡಿಕೊಳ್ಳುತ್ತಿದ್ದರು ಹಾಗೂ ಅವರ ಮನೆಯ ಸಣ್ಣಪುಟ್ಟ ಕೆಲಸಗಳನ್ನು ಮಾಡಿ ಅವರಿಂದ ದವಸ-ಧಾನ್ಯಗಳನ್ನು ದಾನವಾಗಿ ಪಡೆಯುತ್ತಿದ್ದನು.

**ಮಡಿವಾಳ:** ಕರ್ನಾಟಕದ ಪ್ರದೇಶಗಳ ಸೇವಕವರ್ಗಗಳಲ್ಲಿ ಮಡಿವಾಳರಿಗೆ ಮಹತ್ವದ ಸ್ಥಾನವಿದೆ. ಮಗುವಿನ ಹುಟ್ಟಿನಿಂದಲೇ ಆರಂಭವಾಗುವ ಇವರ ಸೇವೆ ಸತ್ತಾಗ ಸೂತಕ ಕಳೆಯುವವರೆಗೆ ಇವರ ಸೇವೆ ಹಾಗೂ ವೃತ್ತಿಯ ಪರಂಪರೆ ಬೆಳೆದುಬಂದಿದೆ. ಗ್ರಾಮಗಳಲ್ಲಿ ಜರುಗುವ ಹುಟ್ಟು, ಸಾವು, ಮದುವೆ, ಹಬ್ಬ-ಹರಿದಿನಗಳಲ್ಲಿ ಮಡಿವಾಳರ ಸೇವೆ ಅವಶ್ಯಕವಾಗಿ ಬೇಕು. ತಳವಾರನಂತೆಯೇ ಇಡೀ ಗ್ರಾಮಕ್ಕೆ ಬೇಕಾದ ವ್ಯಕ್ತಿ ಮಡಿವಾಳನಾಗಿರುತ್ತಾನೆ. ಮಡಿವಾಳ ಆಯಗಾರರಲ್ಲಿ ಒಬ್ಬನಾಗಿದ್ದಾನೆ. ಹಾಗಾಗಿ ತಳವಾರನಿಗೆ ಮಡಿವಾಳ ಸಹ ವೃತ್ತಿ ಬಾಂಧವನಾಗಿ ಊರಲ್ಲಿ ಏನೇ ಕಾರ್ಯಕ್ರಮ ನಡೆದರೂ ಅಲ್ಲಿ ತಳವಾರನ ಜೊತೆ ಮಡಿವಾಳನೂ ಹಾಜರಿರುತ್ತಾನೆ. ಹಾಗಾಗಿ ಇವರ ಸಂಬಂಧಗಳು ಕೇವಲ ವೃತ್ತಿಗೆ ಮಾತ್ರ ಸಂಬಂಧಿಸಿರದೇ ಭಾವನಾತ್ಮಕ ಸಂಬಂಧವನ್ನು ಕೂಡ ಹೊಂದಿದ್ದರು.

**ಕುಂಬಾರ:** ಬೆಂಕಿಯ ಆವಿಷ್ಕಾರದ ನಂತರ ಪ್ರಾಚೀನ ಮಾನವ ಒಂದೆಡೆ ನೆಲೆಯೂರಿದ ಮೇಲೆ ಆಹಾರವನ್ನು ಬೇಯಿಸಿ ತಿನ್ನುವುದನ್ನು ಕಲಿತ. ಇದರಿಂದಾಗಿ ಮಡಿಕೆಗಳ ಅವಶ್ಯಕತೆ ಕಂಡುಬಂದಿತು. ಪ್ರಾಚೀನ ಮಾನವ ಸಾಮಾನ್ಯವಾಗಿ ನದಿ ಬಯಲುಗಳ ಹತ್ತಿರ ನೆಲೆಸಿರುವುದು ಕಂಡುಬರುತ್ತದೆ.

ಇದು ಅವನಿಗೆ ಬೇಸಾಯಕ್ಕೆ ಅನುಕೂಲವಾದುದಲ್ಲದೆ ವಿಫುಲವಾಗಿ ದೊರೆಯುತ್ತಿದ್ದ ಜೇಡಿ ಮಣ್ಣಿನಿಂದ ಮಡಿಕೆಗಳನ್ನು ಮಾಡಲು ಕೂಡ ನೆರವಾಯಿತು. ಮೊದ ಮೊದಲು ಮಣ್ಣಿನ ಮಡಿಕೆಗಳನ್ನು ಸುಡದೇ ಉಪಯೋಗಿಸುತ್ತಿದ್ದರು. ಈಗ ಅವುಗಳ ಬಾಳಿಕೆಗಾಗಿ ಸುಟ್ಟು ಉಪಯೋಗಿಸುತ್ತಾರೆ. ಈ ಮಡಿಕೆಗಳನ್ನು ಮಾಡುವವರೆಲ್ಲಾ ಕುಂಬಾರರೆಂದು ಹೆಸರಿಸಲ್ಪಟ್ಟರು. ಕುಂಬಾರಿಕೆ ಸಹ ಪ್ರಾಚೀನ ವೃತ್ತಿಗಳಲ್ಲಿ ಒಂದಾಗಿದೆ. ಈ ವೃತ್ತಿಯವರು ಆಯಗಾರರಲ್ಲಿ ಬರುವುದರಿಂದ ಊರಿನ ಕಾರ್ಯಕ್ರಮಗಳಲ್ಲಿ ತಳವಾರನೊಂದಿಗೆ ಭಾಗಿಯಾಗುತ್ತಿದ್ದರು. ಆಯಗಾರ ರೆಂದರೆ ಎಲ್ಲ ಅಣ್ಣ ತಮ್ಮಂದಿರು ಎಂಬ ಭಾವನೆ ಅವರಲ್ಲಿತ್ತು. ಈಗ ಮದುವೆ ಸಂದರ್ಭದಲ್ಲಿ ಕುಂಬಾರನ ಮನೆಗೆ ಐರಾಣಿ ತರಲು ಎಲ್ಲರೂ ಹೋಗಲೇಬೇಕು ಆದ್ದರಿಂದ ತಳವಾರನೊಂದಿಗೆ ಕುಂಬಾರ ಸಹ ಮದುವೆ, ಮುಂಜಿ, ಹಬ್ಬ-ಹರಿದಿನಗಳಲ್ಲಿ ಸಕ್ರಿಯವಾಗಿ ಪಾಲ್ಗೊಂಡು ತಮ್ಮ ಕರ್ತವ್ಯವನ್ನು ನಿರ್ವಹಿಸುತ್ತಿದ್ದರು.

**ಬಡಿಗ:** ಕೃಷಿ ಹಾಗೂ ಕೃಷಿಗೆ ಸಂಬಂಧಿಸಿದ ಸಲಕರಣೆಗಳನ್ನು ಮಾಡುತ್ತಿದ್ದ ಬಡಿಗನು ತಳವಾರನಿಗೆ ಆತ್ಮೀಯನಾಗಿದ್ದ. ತಳವಾರ ತನ್ನ ವೃತ್ತಿಯ ಜೊತೆಗೆ ಕೃಷಿಯನ್ನು ಮಾಡುತ್ತಿದ್ದರಿಂದ ಬಡಿಗನ ಅವಲಂಬನೆ ತಳವಾರನಿಗೂ ಇತ್ತು. ಹಾಗಾಗಿ ತಳವಾರ ಮತ್ತು ಬಡಿಗ ಇಬ್ಬರೂ ಆಯ ಪಡೆಯಲು ಹಾಗೂ ಊರಿನ ಜಾತ್ರೆ, ಉತ್ಸವಗಳಲ್ಲಿ ತೇರು ಕಟ್ಟುವುದು, ಅಡಿಪಾಯ ಹಾಕುವುದು ಮುಂತಾದ ಕಾರ್ಯಕ್ರಮಗಳಿಗೆ ಜೊತೆಗೂಡಿ ಮಾಡುತ್ತಿದ್ದರು. ಆದ್ದರಿಂದ ಇವರೊಂದಿಗೂ ಅವಿನಾಭಾವ ಸಂಬಂಧವನ್ನು ತಳವಾರನು ಹೊಂದಿದ್ದನು.

**ಕೋಲುಕಾರ:** ಸರ್ಕಾರ ಇಲ್ಲವೇ ಗೌಡನ ಆದೇಶಗಳನ್ನು ಊರಲ್ಲಿ ಡಂಗುರ ಹೊಡೆದು ಸಾರುವವನೇ ಕೋಲುಕಾರನಾಗಿದ್ದ. ಈತನು ಕೇವಲ ಸಾರುವ ಕೆಲಸವಲ್ಲದೆ, ಊರಿನ ಜಾತ್ರೆ ಉತ್ಸವಗಳಲ್ಲಿ ಕೋಲು ಹಿಡಿದು ರಕ್ಷಣಾ ಉಸ್ತುವಾರಿಯನ್ನು ಹೊಂದಿರಬೇಕಾಗಿತ್ತು. ತಳವಾರ ಮತ್ತು ಕೋಲುಕಾರ ಹುದ್ದೆಗಳಲ್ಲಿ ಕೆಲವು ಸಾಮ್ಯತೆಗಳಿದ್ದವು. ಹಲವಾರು ಕಡೆ ತಳವಾರನೇ ಕೋಲುಕಾರನಾಗಿ ಡಂಗುರ ಹೊಡೆಯುತ್ತಿದ್ದನು. ಕೋಲುಕಾರನೂ ಆಯಗಾರರಲ್ಲಿ ಒಬ್ಬನಾಗಿದ್ದರಿಂದ ಇವನು ಆಯಕ್ಕೆ ಹೋಗುವಾಗ ತಳವಾರನನ್ನು ಅವನ ಅನುಪಸ್ಥಿತಿಯಲ್ಲಿ ತಾನೇ ಅವನ ಆಯ ಪಡೆದು ತಂದು ತಳವಾರನಿಗೆ ಒಪ್ಪಿಸುತ್ತಿದ್ದ. ಕೋಲುಕಾರರಲ್ಲಿ ಹೆಚ್ಚಾಗಿ ದಲಿತರು ಮತ್ತು ಹಿಂದುಳಿದವರೇ ಅಧಿಕ ಸಂಖ್ಯೆಯಲ್ಲಿದ್ದರು. ಅವರೆಲ್ಲರು ತಳವಾರನೊಂದಿಗೆ ಸಹೋದರ ಭಾವನೆ ಹೊಂದಿದ್ದರು.

ಒಟ್ಟಿನಲ್ಲಿ ಸಮಾಜದಲ್ಲಿ ಜನರು ಪರಸ್ಪರ ಸಹಾಯ ಸಹಕಾರ, ಭಾವೈಕ್ಯತೆಯಿಂದ ಬದುಕಲು ದೇಶದ ಅಭಿವೃದ್ಧಿಗೆ ನೆರವಾಗಲು ವೃತ್ತಿಕಸಬುಗಳು ಅಗತ್ಯವಾಗಿವೆ. ಈ ಕಸಬುಗಳು ಹಾಗೂ ವೃತ್ತಿಗಳಿಂದ ಸಾಮಾಜಿಕ ಸಂಬಂಧಗಳು ಗಟ್ಟಿಗೊಂಡಿವೆ. ಆದರೆ ಇಂದಿನ ಕಾಲದಲ್ಲಿ ಕುಲವೃತ್ತಿ, ಕಸಬುಗಳು ವಿನಾಶದ ಅಂಚಿನಲ್ಲಿವೆ. ಗ್ರಾಮ, ಉದ್ಯೋಗಗಳು ನಿರ್ನಾಮಗೊಂಡರೆ,

ಹಳ್ಳಿಗಳು ವಿನಾಶವಾದಂತೆಯೇ ಆಗುತ್ತದೆ. ಆದ್ದರಿಂದ ಸರ್ಕಾರ ವೃತ್ತಿಯನ್ನು ಅವಲಂಬಿಸಿ ಜೀವನ ನಡೆಸುವವರಿಗೆ ಅವರ ಉದ್ಯೋಗಗಳ ಪುನರುಜ್ಜೀವನ ಕಾರ್ಯಕ್ರಮಗಳನ್ನು ಹಾಕಿಕೊಂಡು ಅವರ ಕುಲಕಸುಬು, ವೃತ್ತಿಗಳಿಗೆ ಉತ್ತೇಜನ ನೀಡಬೇಕು ಅಂದಾಗ ಮಾತ್ರ ಪಾರಂಪರಿಕ ವೃತ್ತಿ, ಕಸುಬುಗಳೊಂದಿಗೆ ಮಾನವೀಯ ಸಾಂಸ್ಕೃತಿಕ ಸಮಾಜ ಪರಸ್ಪರ ಸಹಾಯ, ಸಹಕಾರ ಸಂಬಂಧದಿಂದ ಅನ್ಯೋನ್ಯವಾಗಿರಲು ಸಾಧ್ಯ.

### ೨. ತಳವಾರ ಮತ್ತು ಇತರೆ ಸಮುದಾಯಗಳೊಂದಿಗಿನ ಸಾಂಸ್ಕೃತಿಕ ಸಂಬಂಧ

ಪ್ರಾಚೀನ ಕಾಲದಿಂದ ತಳವಾರರು ಸಮಾಜದ ಎಲ್ಲಾ ಸಮುದಾಯದೊಂದಿಗೆ ಅವಿನಾಭಾವ ಸಂಬಂಧವನ್ನು ಹೊಂದಿದ್ದಾರೆ. ಹಿಂದಿನ ಕಾಲದ ತಳವಾರರು ತಮ್ಮ ಸಾಂಪ್ರದಾಯಿಕ ವೃತ್ತಿಯನ್ನು ನಿರ್ವಹಿಸುತ್ತಲೇ ಕೃಷಿ ಚಟುವಟಿಕೆಯಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿದ್ದರು. ಈ ಕೆಲಸ ಸಾಂಸ್ಕೃತಿಕ ಆಚರಣೆಗಳಾದ ಹಬ್ಬ-ಹರಿದಿನಗಳಲ್ಲಿ ಅವರ ಪಾಲುದಾರಿಕೆ ಸಹಜವಾಗಿರುತ್ತಿತ್ತು. ತಳವಾರರು ಒಂದು ಗ್ರಾಮವನ್ನು ತನ್ನ ಕುಟುಂಬ ಎಂಬ ರೀತಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದರು. ಊರಿನ ಪ್ರತಿಯೊಂದು ಕಾರ್ಯಕ್ರಮಕ್ಕೂ ತಳವಾರನ ಉಪಸ್ಥಿತಿ ಇದ್ದೇ ಇರುತ್ತದೆ. ಉತ್ತರ ಕರ್ನಾಟಕದ ಬಹುಪಾಲು ಹಳ್ಳಿಗಳಲ್ಲಿ ತೇರು ಕಟ್ಟುವುದು, ಜಾತ್ರೆ ನಡೆಸುವುದು, ದೇವರು ಹೊರಡಿಸುವುದು, ನ್ಯಾಯ ಪಂಚಾಯ್ತಿ ಮಾಡುವುದು, ಸುಗ್ಗಿಯ ಆಚರಣೆ. ಹೀಗೆ ಯಾವುದೇ ಸಂದರ್ಭದಲ್ಲಿ ಅವರ ಹಾಜರಾತಿಯಿರುತ್ತದೆ. ಗ್ರಾಮದ ಪ್ರತಿಯೊಂದು ಸಾಮಾಜಿಕ ಸಾಂಸ್ಕೃತಿಕ ಕಾರ್ಯಕ್ಕೂ ತಳವಾರನು ಬೇಕಾಗಿರುತ್ತಿದ್ದ. ಆದ್ದರಿಂದ ಈತನು ಊರಿನ ಪ್ರಮುಖ ವ್ಯಕ್ತಿಗಳಲ್ಲಿ ಒಬ್ಬನಾಗಿ ಕಾಣಸಿಕೊಂಡು ಸಾಮಾಜಿಕ ಸ್ಥಾನಮಾನವನ್ನು ಪಡೆದುಕೊಂಡಿದ್ದರು.

ಸಾಮಾಜಿಕ ಪರಿವರ್ತನೆಯ ಹಾದಿಯಲ್ಲಿ ತಳವಾರರು ಮುಖ್ಯವಾಗಿ ಹಿಂದೂ ಧರ್ಮದ ಸಾಂಸ್ಕೃತಿಕ ಏಕರೂಪತೆಯನ್ನು ಪಡೆಯುವಲ್ಲಿ ಯಶಸ್ವಿಯಾಗಿದ್ದಾರೆ. ಪ್ರತಿಯೊಂದು ಹಳ್ಳಿಗಳಲ್ಲಿ ತಳವಾರರು ಗ್ರಾಮ ಜೀವನದ ಮುಖ್ಯ ಪಾಲುದಾರರಾಗಿದ್ದಾರೆ. ಮುಖ್ಯವಾಗಿ ಗ್ರಾಮಗಳಲ್ಲಿ ಬ್ರಾಹ್ಮಣ, ಲಿಂಗಾಯತ, ಕುರುಬ, ನಾಯಕ, ಬಾರಿಕ, ಮುಸ್ಲಿಂ ಮುಂತಾದ ಸಮುದಾಯದವ ರೊಂದಿಗೆ ಅತ್ಯಂತ ಭಾವನಾತ್ಮಕ ಸಂಬಂಧವನ್ನು ಹೊಂದಿದ್ದಾರೆ. ಊರಿನ ಹಾಗುಹೋಗುಗಳ ಕುರಿತಾದ ಮಾಹಿತಿಯನ್ನು ತಳವಾರನೇ ಎಲ್ಲರಿಗೂ ತಿಳಿಸಬೇಕಾಗಿದ್ದರಿಂದ ಇವನೊಬ್ಬ ಸಾಂಸ್ಕೃತಿಕ ನಾಯಕನಾಗಿರುತ್ತಾನೆ ಹಾಗೂ ಎಲ್ಲರಿಗೂ ಬೇಕಾದ ವ್ಯಕ್ತಿಯಾಗಿರುತ್ತಾನೆ. ಅದಕ್ಕಾಗಿ ಊರಲ್ಲಿ ಬೇರೆ ಬೇರೆ ಸಮುದಾಯದವರು ಈತನನ್ನು ಅಣ್ಣ, ಮಾವ, ತಮ್ಮ, ಅಳಿಯ ಎಂದೆಲ್ಲಾ ಕರೆದರೆ, ಈತನು ಸಹ ಅಕ್ಕ, ಮಾವ, ಚಿಕ್ಕಪ್ಪ, ದೊಡ್ಡಪ್ಪ ಎಂದು ಬೇರೆ ಜನಾಂಗದ ವ್ಯಕ್ತಿಗಳನ್ನು ಕರೆಯುವುದುಂಟು. ಈ ಮೂಲಕ ಪ್ರತಿಯೊಂದು ಗ್ರಾಮದಲ್ಲಿ ತಳವಾರರು ಇತರೆ ಸಮುದಾಯದವರೊಂದಿಗೆ ಭಾವನಾತ್ಮಕ ಸಂಬಂಧ ಹೊಂದಿದ್ದಾರೆ.

ತಳವಾರರು ಬೇರೆ ಸಮುದಾಯದ ಮದುವೆ ಸಂದರ್ಭದಲ್ಲಿ ಪ್ರಮುಖವಾಗಿ ಉಪಸ್ಥಿತ ನಿರುತ್ತಾನೆ. ಮದುವೆಯ ವಿಳ್ಯೆಶಾಸ್ತ್ರದಿಂದ ಹಿಡಿದು ಲಗ್ನದ ಮೆರವಣಿಗೆ ಆಗುವವರೆಗೂ ಅವರ ಜೊತೆಗಿದ್ದು ಸಹಕರಿಸುತ್ತಾನೆ. ಇನ್ನು ಊರಲ್ಲಿ ಯಾರಾದರು ಸತ್ತರೂ ಅದರ ಸುದ್ಧಿ ಮೊದಲು ತಳವಾರನಿಗೆ ತಿಳಿಯುತ್ತಿತ್ತು. ಆನಂತರ ಊರಿನ ಗೌಡ, ಪಟೇಲ, ಕುಲಕರ್ಣಿ ಹಾಗೂ ಇತರೆ ಮುಖಂಡರಿಗೆ ತಳವಾರನೇ ತಿಳಿಸುತ್ತಿದ್ದನು. ಒಂದು ವೇಳೆ ಯಾವುದೇ ದುರ್ಘಟನೆ, ಆತ್ಮಹತ್ಯೆ, ಕೊಲೆಯಂತಹ ಘಟನೆಗಳು ನಡೆದಾಗ ಅಲ್ಲಿ ಮೊದಲು ತಳವಾರನು ಹಾಜರಿದ್ದು, ಅಲ್ಲಿಯ ಸಾಕ್ಷ್ಯಗಳು ನಾಶವಾಗದಂತೆ ನೋಡಿಕೊಳ್ಳುವ ಜವಾಬ್ದಾರಿ ತಳವಾರನದಾಗಿತ್ತು. ಹಲವು ಸಲ ತಳವಾರನು ರಾತ್ರಿಯಿಡಿ ಹೆಣ ಕಾಯುವ ಕೆಲಸವನ್ನು ಮಾಡಬೇಕಾಗಿತ್ತು. ಹೀಗೆ ಸತ್ತ ಮನೆಯಲ್ಲಿನ ಎಲ್ಲಾ ವಿಧಿ-ವಿಧಾನಗಳು ಮುಗಿಯುವವರೆಗೂ ತಳವಾರ ಅವರ ಜೊತೆಗಿದ್ದು ಸಹಕರಿಸುತ್ತಾನೆ ಹಾಗೂ ಊರಲ್ಲಿ ಯಾರಾದರೂ ಪ್ರಮುಖರು ತೀರಿಕೊಂಡರೆ ಅವರ ಶವಯಾತ್ರೆಯ ಮುಂದೆ ಖಡ್ಗ ಹಿಡಿದು ಹೋಗಬೇಕಾಗಿತ್ತು. ಈ ಪದ್ಧತಿ ಇನ್ನು ಕೊಪ್ಪಳ, ಗದಗ, ಬಾಗಲಕೋಟೆ ಮತ್ತು ಬಿಜಾಪುರದ ಅಲ್ಲಲ್ಲಿ ಜಾರಿಯಲ್ಲಿದೆ. ಇಂತಹ ಸಾಮಾಜಿಕ ಕಾರ್ಯಗಳಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುತ್ತಿದ್ದ ತಳವಾರನು ಇತರೆ ಸಮುದಾಯದವರಿಗೂ ಬೇಕಾದ ವ್ಯಕ್ತಿಯಾಗಿದ್ದ.

ಇವತ್ತಿನ ತಳವಾರರ ಸಾಮಾಜಿಕ, ಆರ್ಥಿಕ ಸ್ಥಿತಿಗತಿಗಳು ಸಮಾಧಾನಕಾರವಾಗಿಲ್ಲ. ಇವರ ಮೂಲ ವೃತ್ತಿ ಇಂದು ಇಲ್ಲವಾಗಿದೆ. ಅದಕ್ಕಾಗಿ ಕೃಷಿ, ಪಶುಪಾಲನೆ, ಗಾರೆಕೆಲಸ ಮುಂತಾದ ಕೆಲಸ ಕಾರ್ಯಗಳನ್ನು ಮಾಡುವವರಿದ್ದಾರೆ. ತಳವಾರರ ನಿತ್ಯ ಕಷ್ಟ ನಷ್ಟಗಳಿಗೆ ಬಡತನ, ಅನಕ್ಷರತೆ ಹಾಗೂ ಮೇಲ್ಜಾತಿಯವರು ಇವರನ್ನು ನೋಡುವ ದೃಷ್ಟಿಕೋನ ಕಾರಣವಾಗಿದೆ. ತಳವಾರರು ಎಲ್ಲಾ ಸಮುದಾಯದ ಜನರೊಂದಿಗೆ ಭಾವನಾತ್ಮಕವಾಗಿ ಬೆರೆತರೂ ಇವರನ್ನು ಕೀಳು ಎಂಬ ಭಾವನೆ ಅವರಲ್ಲಿ ಬೇರೂರಿರುವುದರಿಂದ ಇವರು ಅಸ್ಪೃಶ್ಯರಾಗೇ ಉಳಿದಿದ್ದಾರೆ.

**೩. ಧಾರ್ಮಿಕ ಆಚರಣೆ**

ಸಮುದಾಯವೊಂದು ಸಾಂಸ್ಕೃತಿಕವಾಗಿ ಗುರುತಿಸಿಕೊಳ್ಳಲು ಅವರ ನಂಬಿಕೆ, ಶ್ರದ್ಧೆ, ಕ್ರಿಯಾಚರಣೆಗಳು ಮುಖ್ಯವಾಗಿರುತ್ತವೆ. ಅಲ್ಲದೆ ಕೆಲವು ಪಾರಂಪರಿಕ ಆಚರಣೆಗಳನ್ನು ಮಾಡುತ್ತಾ ಸಮಾಜದೊಂದಿಗೆ ತನ್ನ ಸಾಂಸ್ಕೃತಿಕ ಅನನ್ಯತೆಯನ್ನು ಉಳಿಸಿಕೊಂಡು ಬಂದಿರುವ ಹಲವಾರು ಸಮುದಾಯಗಳಲ್ಲಿ ತಳವಾರರು ಒಬ್ಬರಾಗಿದ್ದಾರೆ. ಅದೇ ರೀತಿ ದೈವಿ ಆಚರಣೆಗಳಲ್ಲಿ ತಳವಾರರು ತಾವು ನಿರ್ವಹಿಸುವ ಕಾರ್ಯ ಹಾಗೂ ತನ್ಮೂಲಕ ಸಮಾಜದೊಂದಿಗೆ ಸಂಬಂಧ ಕುರಿತು ಇಲ್ಲಿ ಚರ್ಚಿಸಲಾಗಿದೆ.

ತಳವಾರ ಇಡೀ ಊರಿಗೆ ಬೇಕಾದ ವ್ಯಕ್ತಿ. ಈತನು ಊರಿನ ಯಾವುದೇ ಧಾರ್ಮಿಕ ಆಚರಣೆಗಳಿದ್ದರೂ ಅವುಗಳನ್ನು ಮುಂದೆ ನಿಂತು ನಡೆಸಿಕೊಡಬೇಕಾಗಿತ್ತು. ಅದರಲ್ಲಿ ಮುಖ್ಯವಾಗಿ

ಜಾತ್ರೆ ಸಂದರ್ಭದಲ್ಲಿ ದೇವರಿಗೆ ಉಡಿ ತುಂಬಿಸುವುದು, ತೇರು ಕಟ್ಟುವುದು, ತೇರಿಗೆ ಸನ್ನೆ ಹಾಕುವುದು, ಮೆರವಣಿಗೆ ಮಾಡುವುದು ಹಾಗೂ ಮೆರವಣಿಗೆಯಲ್ಲಿ ಪಂಜು ಹಿಡಿದು ರಕ್ಷಣೆ ಒದಗಿಸುವುದು ಮುಂತಾದ ಕಾರ್ಯಕ್ರಮಗಳಲ್ಲಿ ತಳವಾರನ ಹಾಜರಾತಿ ಇರುತ್ತದೆ. ಅದರಲ್ಲೂ ಮುಖ್ಯವಾಗಿ ಕಾರಹುಣ್ಣಿಮೆಯಂದು ಕರಿ ಕಟ್ಟಿಸುವ ಕಾರ್ಯ ತಳವಾರನದಾಗಿರುತ್ತದೆ. ಅದೇ ರೀತಿ ವಿಜಯದಶಮಿ ಸಮಯದಲ್ಲಿ ತಳವಾರ ತನ್ನ ಖಡ್ಗ ಹಿಡಿದು ದೇವಿ ಮೆರವಣಿಗೆಯೊಂದಿಗೆ ಸಾಗಿ ಬನ್ನಿಗಿಡಕ್ಕೆ ತನ್ನ ಖಡ್ಗದಿಂದ ಮುಟ್ಟಿಸಿದ ನಂತರವೇ ಊರಲ್ಲಿ ಪರಸ್ಪರರು ಬನ್ನಿ ಮುಡಿಯುತ್ತಾರೆ. ಇಂತಹ ಒಂದು ಆಚರಣೆ ಬಹುತೇಕ ಗ್ರಾಮಗಳಲ್ಲಿದೆ.

ತಳವಾರರಲ್ಲಿ ಹೆಚ್ಚಾಗಿ ಬೇಡ ನಾಯಕರೇ ಹೆಚ್ಚಾಗಿರುವುದರಿಂದ ಊರುಗಳಲ್ಲಿ ಯಾವುದೇ ಬಲಿ ಕೊಡಬೇಕೆಂದರೆ ಅಲ್ಲಿ ತಳವಾರನಿರುತ್ತಾನೆ. ಬಹುತೇಕ ಕಡೆ ಈತನೇ ಬಲಿಮರಿ ಕಡಿಯುತ್ತಾನೆ. ಇನ್ನು ಕುಲ ವೃತ್ತಿಯವರೆಲ್ಲರೂ ಏಕ ರೀತಿಯ ಹಬ್ಬ ಹರಿದಿನ, ಜಾತ್ರೆ ಉತ್ಸವ ಗಳನ್ನು ಆಚರಿಸುವುದಿಲ್ಲ. ಹಲವರು ತಮ್ಮ ಕುಲಕ್ಕೆ ಸಂಬಂಧಿಸಿದ ದೇವರ ಹಬ್ಬ, ಜಾತ್ರೆ ಗಳನ್ನು ಮಾಡುತ್ತಾರೆ. ಇನ್ನು ಊರುಗಳಲ್ಲಿ ಸಾಮಾನ್ಯವಾಗಿ ಆಚರಿಸುವ ಯುಗಾದಿ, ದೀಪಾವಳಿ, ಹೋಳಿ, ಮೋಹರಂನಂತಹ ಜಾತ್ರೆ ಉತ್ಸವಗಳಲ್ಲಿ ಎಲ್ಲರೂ ಒಟ್ಟಾರೆ ಭಾಗವಹಿಸಿ ಆಚರಿಸಿ ಸಂಭ್ರಮಿಸುತ್ತಾರೆ.

ಒಟ್ಟಾರೆಯಾಗಿ ಸಮಾಜವು ಸಂಘಟನೆಯ ಫಲವಾದುದರಿಂದ ಇಲ್ಲಿ ಎಲ್ಲರ ಸೇವೆ ಅವಶ್ಯಕ. ಇಲ್ಲಿ ಮೇಲು-ಕೀಳೆಂಬ ಭಾವನೆ ಸರಿಯಲ್ಲ. ಏಕೆಂದರೆ ಆಯಾ ಕುಲ ವೃತ್ತಿ ಮಾಡುವ ಜನರು ತಮ್ಮ ತಮ್ಮ ಕಾಯಕವನ್ನು ಶ್ರದ್ಧೆ, ಭಕ್ತಿ ಹಾಗೂ ಗೌರವದಿಂದ ಕಾಣುವಂತಾಗಬೇಕು. ಅದಕ್ಕಾಗಿ ಪರಸ್ಪರರು ಸಹಾಯ, ಸಹಭಾಳ್ವೆ ಹಾಗೂ ಸಾಂಸ್ಕೃತಿಕ ಬಾಂಧವ್ಯವನ್ನು ಇರಿಸಿಕೊಂಡಲ್ಲಿ ಮಾತ್ರ ಅವರು ತಮ್ಮ ವೃತ್ತಿಯ ಜೊತೆ ಜೊತೆಗೆ ಗಾಢವಾದ ಸಾಮಾಜಿಕ ಸಂಬಂಧವನ್ನು ಉಳಿಸಿ ಬೆಳೆಸಿಕೊಳ್ಳಲು ಸಾಧ್ಯವಾಗುತ್ತದೆ.

**ಕೊನೆ ಟಿಪ್ಪಣಿಗಳು**

೧. ಕುಲಕಸುಬುಗಳು ಮತ್ತು ಆಧುನಿಕತೆ, ತಿಮ್ಮಾರೆಡ್ಡಿ ಎಸ್.ವೈ., ೨೦೧೦, ಪು.೬೩

೨. ಅದೇ, ಪು.೨೩೧

೩. ಅದೇ, ಪು.೭೫-೭೬

## ಅಧ್ಯಾಯ ಎಂಟು

# ಸಮಕಾಲೀನ ಸಂದರ್ಭದಲ್ಲಿ ತಳವಾರರು

ತಲೆಮಾರಿನಿಂದ ತಲೆಮಾರಿಗೆ ಪಾರಂಪರಿಕವಾಗಿ ಬೆಳೆದು ಬಂದ ಸಾಂಸ್ಕೃತಿಕ ಅಂಶಗಳಾದ ನಂಬಿಕೆ, ರೂಢಿ, ಪದ್ಧತಿ, ಸಂಪ್ರದಾಯಗಳನ್ನು ಜನರು ಗೌರವಿಸುವುದರ ಜೊತೆಗೆ ಆರಾಧಿಸುತ್ತಾರೆ. ಹಾಗೂ ಇದರೊಂದಿಗೆ ತಾದಾತ್ಮ್ಯ ಸಂಬಂಧವನ್ನು ಇಟ್ಟುಕೊಂಡಿದ್ದಾರೆ. ನೂತನ ವಿಧಾನಗಳನ್ನು ಹಂತ ಹಂತವಾಗಿ ಜೀವನ ವಿಧಾನಗಳಿಗೆ ಅನುಸರಿಸಿದರೂ ಪಾರಂಪರಿಕ ಮೂಲ ವೃತ್ತಿ, ಕಸುಬನ್ನು ಬಿಟ್ಟು ಕೊಡುತ್ತಿದ್ದಾರೆ. ಈ ಹಿನ್ನೆಲೆಯಲ್ಲಿ ವಿವಿಧ ಸ್ವರೂಪದಲ್ಲಾದ ಪರಿವರ್ತನೆ ಎನ್ನುವುದು ಯಾವುದೇ ಸಮಾಜವು ಕಾಲಪ್ರವಾಹದ ಜೊತೆ ಹರಿದು ಬಂದಾಗ ಅದರ ಬದಲಾವಣೆ ಸಹಜ. ಈ ಸಮಾಜದ ಬದಲಾವಣೆಯೇ ಪರಂಪರೆಯ ಪರಿವರ್ತನೆಯಾಗಿರುತ್ತದೆ. ಸಮಾಜದ ಬದಲಾವಣೆ ಎನ್ನುವುದು ಸಾಮಾಜಿಕ ಪ್ರಕ್ರಿಯೆ, ಸಾಮಾಜಿಕ ಮಾದರಿ, ಸಾಮಾಜಿಕ ಅಂತಃ ಕ್ರಿಯೆ ವೃತ್ತಿ ಮತ್ತು ಸಂಘಟನೆ ಹಾಗೂ ಜೀವನ ಮಾದರಿ ಇವುಗಳನ್ನು ಒಳಗೊಂಡಿದೆ. ಕಾಲ ಬದಲಾದಂತೆ ಸಮಾಜವೂ ಬದಲಾಗುತ್ತ ಬಂದಿದೆ. ಇದರೊಂದಿಗೆ ಜನರ ರೀತಿ-ನೀತಿ, ಸಂಪ್ರದಾಯಗಳು ಬದಲಾಗಿವೆ. ಅದರಂತೆ ತಳವಾರರ ಸಾಮಾಜಿಕ, ಆರ್ಥಿಕ ಹಾಗೂ ವೃತ್ತಿ ಮೊದಲಾದವುಗಳಲ್ಲಿ ಪರಿವರ್ತನೆಗಳಾಗಿರುವುದು ಸ್ಪಷ್ಟವಾಗಿದೆ.

ಮುಂಚಿನ ಕಾಲಕ್ಕೆ ಊರ ರಕ್ಷಣೆಯ ಭಾರ ತಳವಾರನ ಮೇಲೆ ಇರುತ್ತಿದ್ದರಿಂದ ತಾನೊಂದು ಗುರುತರ ಕಾರ್ಯ ನಿರ್ವಹಿಸುತ್ತಿದ್ದನೆಂಬ ಹೆಮ್ಮೆ, ಅಭಿಮಾನಗಳು ಆತನಿಗಿದ್ದು ಸಮಾಜದಲ್ಲಿ ದೊಡ್ಡ ಸ್ಥಾನವನ್ನು ಪಡೆದುಕೊಂಡಿದ್ದ. ಕೋಟೆಗಳು ಉರುಳಿ ಅಗಸಿಯ ಬಾಗಿಲುಗಳೂ ಬಿದ್ದ ಮೇಲೆ ಇವನ ಜೀವನವೂ ಹೀನಾಯವಾಯಿತು. ಪೊಲೀಸರ ಕಾರ್ಯವ್ಯಾಪ್ತಿ ದೊಡ್ಡ ದಾಗುವುದಕ್ಕಿಂತ ಮೊದಲು, ಊರು ಕಾವಲಿಗೆ ಹಾಗೂ ಸೇವೆಗೆ ತಳವಾರರೇ ಮುಖ್ಯರಾಗಿದ್ದರು. ಹಲವಾರು ಸಂಸ್ಥಾನಗಳಲ್ಲಿ ನಾಯಕರೆನಿಸಿಕೊಂಡಿದ್ದ ತಳವಾರರು ನಾಯಕತ್ವ ಕಳೆದುಕೊಂಡ ಮೇಲೆ, ಕಾವಲುಗಾರರಾಗಿ ಕೋಲುಕಾರರಾಗಿ ಸೇವೆ ಸಲ್ಲಿಸಿದ್ದಾರೆ.

ಇಂದು ತಳವಾರರ ಬದುಕು ಇತರರಿಗಿಂತ ಭಿನ್ನವಾಗಿಲ್ಲವಾದರೂ, ದುಡಿದು ತಿನ್ನುವ ಸಾಹಸಿಗಳು ಮತ್ತು ಕೃಷಿ ಕೂಲಿಯಿಂದಲೇ ಬದುಕುವ ಕುಶಾಗ್ರಮತಿಗಳಾಗಿದ್ದಾರೆ. ಸರಿಸಮಾನ ಕೂಲಿಕಾರರಾಗಿ ಕೆಲಸ ಮಾಡಲಿಚ್ಛಿಸುತ್ತಾರೆ. ಕೆಲವು ಕಡೆ ಗೌಡ, ಕುಲಕರ್ಣಿಯರ ಜೀತದಾಳುಗಳಾಗಿ ದುಡಿದ ಉದಾಹರಣೆಗಳಿವೆ. ಇಂತಹ ಜಟಿಲ ಬದುಕಿನೊಂದಿಗೆ ಹಗಲು ರಾತ್ರಿಯೆನ್ನದೆ ದುಡಿದ ತಳವಾರರ ಸ್ಥಿತಿ ಇಂದು ಹೀನಾಯವಾಗಿದೆ. ಧೈರ್ಯ, ಸಾಹಸ, ಪರಾಕ್ರಮ ನಾಯಕತ್ವದಿಂದ ಹೋರಾಡಿದ್ದ ಇವರ ಜೀವನ ಇಂದಿನ ಆಧುನಿಕ ವ್ಯವಸ್ಥೆಯಲ್ಲಿ ಗೌಣವಾಗಿದೆ. ನಾಗರೀಕತೆ ಬೆಳೆದಂತೆ ಜೀವನ ವಿಧಾನ ವೃತ್ತಿ ಬದುಕಿನಲ್ಲಿ ನಾನಾ ಬದಲಾವಣೆಗಳಾಗಿವೆ. ಅವರ ಸಂಸ್ಕೃತಿ ಆಚಾರ–ವಿಚಾರ, ನಂಬಿಕೆಗಳಲ್ಲಿ ಅಷ್ಟಾಗಿ ಬದಲಾವಣೆಗಳಾಗಿಲ್ಲ. ಪಾರಂಪರಿಕವಾಗಿ ಬಂದ ಕೆಲವು ರೂಢಿ ಆಚರಣೆಗಳು ಇಂದಿಗೂ ಉಳಿದಿವೆ. ತಳವಾರಿಕೆ ಕುಟುಂಬದ ಅನೇಕ ಮನೆಗಳಲ್ಲಿ ಪ್ರಾಚೀನ ಕಾಲದ ತಳವಾರಿಕೆಯ ಕುರುಹಾಗಿ ಇಂದಿಗೂ ಖಡ್ಗ, ಗುರಾಣಿ, ಬಿಚ್ಚುಗತ್ತಿ, ಭರ್ಜಿ, ಗಂಡುಕೊಡಲಿಗಳಿರುವುದನ್ನು ಕಾಣಬಹುದು. ಇವುಗಳನ್ನು ನಿತ್ಯ ಪೂಜಿಸುವ ಇವರು ತಮ್ಮ ಕ್ಷಾತ್ರ ತೇಜಸ್ಸನ್ನು ಈ ಮೂಲಕ ತೋರ್ಪಡಿಸಿಕೊಳ್ಳುತ್ತಾರೆ. ಇನ್ನು ಕೆಲವರು ಆಧುನಿಕತೆಯ ಭರಾಟೆಗೆ ಮಾರು ಹೋಗಿ ಸಂಪ್ರದಾಯ, ಆಚಾರ–ನಂಬಿಕೆಗಳನ್ನು ಗಾಳಿಗೆ ತೂರಿ ವಿಲಾಸಿಗಳಾಗಿ ಜೀವನ ನಡೆಸುವವರನ್ನು ಕಾಣಬಹುದು.

ಬೇಟೆಯ ಜೊತೆಗೆ ಕೃಷಿಯಲ್ಲಿಯೂ ತಮ್ಮ ಅವಲಂಬನೆಯನ್ನು ಕಳೆದುಕೊಂಡ ಬೇಡ ನಾಯಕರು ತಳವಾರಿಕೆ ವೃತ್ತಿಯ ಮೂಲಕ ತಮ್ಮ ಅಸ್ತಿತ್ವವನ್ನು ಉಳಿಸಿಕೊಂಡಿದ್ದಾರೆ. ಕರ್ನಾಟಕದಲ್ಲಿ ಸುಮಾರು ೭೦ ಲಕ್ಷಕ್ಕೂ ಅಧಿಕವಿರುವ ಬೇಡ ನಾಯಕರು ವಿವಿಧ ರೀತಿಯ ವೃತ್ತಿಗಳಲ್ಲಿ ತೊಡಗಿದ್ದಾರೆ. ಮೂಲದಲ್ಲಿ ಬೇಟೆ, ಕೃಷಿ, ಪಶುಪಾಲನೆ, ತಳವಾರಿಕೆಯಲ್ಲಿ ತೊಡಗಿದ್ದ ಇವರು ಇಂದು ಕೃಷಿ, ವ್ಯಾಪಾರ, ಕೂಲಿ ಮೊದಲಾದ ವೃತ್ತಿಗಳಲ್ಲಿ ತೊಡಗಿಕೊಂಡಿದ್ದಾರೆ. ಬ್ರಿಟಿಷರು ಮತ್ತು ನಿಜಾಮರ ನೀತಿಯಿಂದಾಗಿ ಸಾಮಾಜಿಕ ಮತ್ತು ಸಾಂಸ್ಕೃತಿಕ ರಂಗಗಳಲ್ಲಿ ವಿಶೇಷ ಮಾನ್ಯತೆ ಪಡೆದಿದ್ದ ತಳವಾರಿಕೆಗೆ ಹೊಡೆತ ಬಿದ್ದಿತು. ಇಡೀ ಊರಿನ ರಕ್ಷಣೆಯ ಜವಾಬ್ದಾರಿ ಹಾಗೂ ಗೌರವಯುತ ಕಾಯಕವಾಗಿದ್ದ ತಳವಾರಿಕೆ ಹುದ್ದೆಯನ್ನು ಗೌಡ, ಕುಲಕರ್ಣಿ, ಗ್ರಾಮಲೆಕ್ಕಗರ ಕೈ ಚೀಲ ಹಿಡಿಯುವಂತೆ ಪರಿವರ್ತಿಸಲಾಯಿತು. ಮದ್ರಾಸ್ ಕರ್ನಾಟಕದಲ್ಲಿ ಕ್ರಿ.ಶ.೧೮೫೯ರಲ್ಲಿ ಪೊಲೀಸ್ ಕಾನೂನುಗಳು ಜಾರಿಗೆ ಬಂದವು. ಈ ಸಂದರ್ಭದಲ್ಲಿ ತಳವಾರರು ಗ್ರಾಮೀಣ ಅಧಿಕಾರಿಗಳ ಕೆಳಗೆ ಭೂಕಂದಾಯ ಕ್ಷೇತ್ರದಲ್ಲಿ ಮುಂದುವರೆದರು. ಊರ ಗೌಡನ ನಿಯಂತ್ರಣದಲ್ಲಿ ಕುಲಕರ್ಣಿ, ಹಳಬ, ತಳವಾರ ಕೆಲಸ ನಿರ್ವಹಿಸಬೇಕಿತ್ತು. ಕ್ರಿ.ಶ.೧೮೬೮ರಲ್ಲಿ ತಳವಾರರಿಗೆ ಖಡ್ಗದ ಬದಲಾಗಿ ಹಿತ್ತಾಳೆ ಪಟ್ಟಿಯನ್ನು, ಲಾಠಿಯನ್ನು ನೀಡಲಾಯಿತು.

ಉತ್ತರ ಕರ್ನಾಟಕದಲ್ಲಿ ಬೇಡ ನಾಯಕರೇ ಹೆಚ್ಚಾಗಿ ತಳವಾರಿಕೆ ವೃತ್ತಿಯನ್ನು ಮಾಡಿಕೊಂಡು ಬಂದಿದ್ದಾರೆ. ಮೊದಲಿನಿಂದ ಬೇಟೆ, ತಳವಾರಿಕೆ, ಸೈನಿಕ, ಕಾವಲುಗಾರರಾಗಿ ಸೇವೆ ಸಲ್ಲಿಸಿದ

ನಾಯಕರು ಬ್ರಿಟಿಷರ ನೀತಿಯಿಂದಾಗಿ ಈ ವೃತ್ತಿಯನ್ನು ಕಳೆದುಕೊಳ್ಳಬೇಕಾಯಿತು. ಬ್ರಿಟಿಷರ ಕಾಲದಲ್ಲಿ ತಳವಾರಿಕೆಯನ್ನು ವಿವಿಧ ಸಮುದಾಯದವರಿಗೆ ನೀಡಲಾಯಿತು. ಮೈಸೂರು ಭಾಗದಲ್ಲಿ ಗಿರಿಜನ, ನಾಯಕ, ಹೊಲೆಯ, ಮಾದಿಗರು ತಳವಾರಿಕೆಯಲ್ಲಿದ್ದರೆ, ಉತ್ತರ ಕರ್ನಾಟಕದಲ್ಲಿ ಬೇಡ ನಾಯಕ, ಗಂಗಾಮತಸ್ಥ, ಬಾರಿಕೇರ, ಬೆಸ್ತ, ಕುರುಬರು ಈ ವೃತ್ತಿಯಲ್ಲಿರುವುದು ಕಂಡುಬರುತ್ತದೆ. ಮದ್ರಾಸ್ ಕರ್ನಾಟಕದಲ್ಲಿ ಬೇಡ ನಾಯಕರೇ ಹೆಚ್ಚಾಗಿ ಕಂಡುಬರುತ್ತಾರೆ. ಅಲ್ಲಲ್ಲಿ ಹಿಂದುಳಿದ ವರ್ಗದವರು ಈ ವೃತ್ತಿಯಲ್ಲಿ ಇತ್ತೀಚೆಗೆ ಕಂಡುಬರುತ್ತಿದ್ದಾರೆ. ಕೊಳ್ಳೆಗಾಲ ಪ್ರದೇಶದಲ್ಲಿ ಪರಿಶಿಷ್ಟ ಜಾತಿಗೆ ಸೇರಿದ ಹೊಲೆಯ ಮಾದಿಗರಲ್ಲಿ ತೋಟಿ(ತಳವಾರ) ನಿರ್ವಹಣೆ ಇರುವುದನ್ನು ಕಾಣಬಹುದು. ಒಟ್ಟಾರೆಯಾಗಿ ಊರಿನ ರಕ್ಷಣೆಯ ಜವಾಬ್ದಾರಿಯುತ ಕಾಯಕ ವಾಗಿದ್ದ ತಳವಾರಿಕೆ ಹುದ್ದೆಯನ್ನು ಗೌಡ, ಕುಲಕರ್ಣಿ, ಗ್ರಾಮಲೆಕ್ಕಿಗರ ಕೈ ಚೀಲ ಹಿಡಿಯುವಂತೆ ಪರಿವರ್ತಿಸಲಾಯಿತು.

ತಳವಾರರು ಸಮಾಜ ಸೇವಕರಾಗಿ ಇತರರ ರಕ್ಷಣೆಗಾಗಿ ದುಡಿದಿದ್ದಾರೆ. ಅದರಲ್ಲೂ ತಳವಾರಿಕೆ ವೃತ್ತಿಯೂ ಇಂದಿಗೂ ಉಳಿದುಕೊಂಡು ಬಂದಿದೆ. ತಳವಾರ ತೀರಿಗೊಂಡರೆ ಅವನ ಹಿರಿಯ ಮಗ ಈ ವೃತ್ತಿಯನ್ನು ಮಾಡುತ್ತಾನೆ. ಇಂದಿನ ಈ ವೃತ್ತಿಯಲ್ಲಿ ವಿವಿಧ ಸಮುದಾಯಕ್ಕೆ ಸೇರಿದವರಿದ್ದರೂ, ಬೇಡ ನಾಯಕರೇ ಅಧಿಕ ಸಂಖ್ಯೆಯಲ್ಲಿದ್ದಾರೆ. ಕ್ರಿ.ಶ.೧೯೭೫ರಲ್ಲಿ ಎಲ್.ಜಿ.ಹಾವನೂರ ಅವರ ನೇತೃತ್ವದಲ್ಲಿ ಹಿಂದುಳಿದ ವರ್ಗಗಳ ಆಯೋಗದ ಯೋಜನೆಯನ್ನು ರೂಪಿಸಲಾಯಿತು. ಅದರಲ್ಲಿ ಬೇಡ ನಾಯಕ ಸಮುದಾಯದೊಂದಿಗೆ ಇತರೆ ೧೮ ವಿವಿಧ ಪರ್ಯಾಯ ಪಂಗಡಗಳನ್ನು ಪರಿಶಿಷ್ಟ ಪಂಗಡ ಮೀಸಲಾತಿಗೆ ಶಿಫಾರಸ್ಸು ಮಾಡಲಾಯಿತು. ಇದರಲ್ಲಿ ಬೇಡ ನಾಯಕ ಸಮುದಾಯಕ್ಕೆ ಸೇರಿದ ತಳವಾರರಲ್ಲಿ ಶೇ.೮೦ರಷ್ಟು ಜನರು ಎಸ್.ಟಿ ಮೀಸಲಾತಿ ಪಡೆದುಕೊಂಡಿದ್ದಾರೆ. ತಳವಾರ, ಪರಿವಾರ ಎಂದು ಉಪಪಂಗಡ ಜಾತಿಪಟ್ಟಿಯಲ್ಲಿದ್ದವರು ಈ ಮೀಸಲಾತಿಯಿಂದ ವಂಚಿತರಾಗಿದ್ದಾರೆ. ಇವರನ್ನು ೨ಎ ಮತ್ತು ೩ಬಿ ಕೆಟಗರಿ ಎಂದು ಮೀಸಲಾತಿ ನೀಡಲಾಗಿದೆ.

ಸಮಾಜ ಬದಲಾದಂತೆ ಗ್ರಾಮಾಡಳಿತದಲ್ಲಿ ಹಲವಾರು ಬದಲಾವಣೆಗಳಾಗಿವೆ. ಹಿಂದಿನ ಕಾಲದಲ್ಲಿದ್ದ ಗ್ರಾಮಾಡಳಿತ ವ್ಯವಸ್ಥೆ ಇಂದು ಇಲ್ಲವಾಗಿದೆ. ಅಂದಿನ ಗೌಡ, ಕುಲಕರ್ಣಿ, ತಳವಾರ, ಓಲೆಕಾರ, ನೀರಗಂಟಿಗಳೆಲ್ಲರೂ ಗ್ರಾಮ ನೌಕರಿ ರದ್ಧತಿ ಕಾಯ್ದೆಯಿಂದಾಗಿ ಇವರ ಪ್ರಾಶಸ್ತ್ಯ ಹಾಗೂ ಕಾರ್ಯ ಕೆಲಸಗಳು ನಿಂತಿದೆ. ಆದರೂ ಕೆಲವು ಗ್ರಾಮಗಳಲ್ಲಿ ಇಂದಿಗೂ ಈ ವ್ಯವಸ್ಥೆ ಜೀವಂತವಾಗಿರುವುದನ್ನು ಕಾಣಬಹುದಾಗಿದೆ. ತಳವಾರಿಕೆಯ ವೃತ್ತಿಯ ಮೂಲಕ ಜೀವನ ನಡೆಸುತ್ತಾ ಬಂದ ಅನೇಕರು ಕೃಷಿಯೊಂದಿಗೆ ಪಶುಪಾಲನೆಯನ್ನು ಮಾಡಿಕೊಂಡು ಜೀವನ ನಡೆಸುತ್ತಿದ್ದಾರೆ.

ತಳವಾರಿಕೆ ವೃತ್ತಿ ರದ್ದಾದ ಬಳಿಕ ಇವರು ಕೃಷಿ ಮತ್ತು ಪಶುಪಾಲನೆಯಲ್ಲಿಯೇ ಬದುಕು ಕಟ್ಟಿಕೊಂಡಿದ್ದಾರೆ. ಇವರಲ್ಲಿ ಅನೇಕರು ಬಡತನದಿಂದ ನರಳುತ್ತಿದ್ದು ಕೆಲವರು ಮಾತ್ರ ಸರ್ಕಾರದ ಪಿಂಚಿಣಿ ಸೌಲಭ್ಯಗಳನ್ನು ಪಡೆದುಕೊಂಡಿದ್ದಾರೆ. ಹಿಂದೆ ಗ್ರಾಮದಲ್ಲಿ ತಳವಾರರಿಗೆ ಕೆಲವು ವಿಶೇಷ ಮಾನ್ಯತೆಗಳಿದ್ದರೂ ಸಹ ಇವರನ್ನು ಮೇಲ್ವರ್ಗದವರು ಅಸ್ಪೃಶ್ಯರಂತೆ ನಡೆಸಿಕೊಂಡಿದ್ದಾರೆ. ಈ ಪದ್ಧತಿ ಇನ್ನು ಕೆಲವು ಗ್ರಾಮಗಳಲ್ಲಿ ಜೀವಂತವಿರುವುದನ್ನು ಕಾಣಬಹುದಾಗಿದೆ. ಮಹಿಳೆಯ ರಂತೂ ಅನಕ್ಷರಿಗಳಾಗಿ ಮನೆಕೆಲಸ, ಕೃಷಿ ಕೂಲಿಯಲ್ಲಿ ದುಡಿಯುವವರಿದ್ದಾರೆ. ಬಳ್ಳಾರಿ, ಕೊಪ್ಪಳ, ಹಾವೇರಿ ಜಿಲ್ಲೆಯ ಕೆಲವು ಭಾಗಗಳಲ್ಲಿ ತಳವಾರರ ಕುಟುಂಬದ ಹೆಣ್ಣು ಮಕ್ಕಳನ್ನು ದೇವದಾಸಿ ಬಿಡುವ ಪದ್ಧತಿ ಇತ್ತು. ಅದಕ್ಕೆ ಅವರ ಬಡತನ ಹಾಗೂ ಅಸಹಾಯಕತೆ ಕಾರಣವಾಗಿತ್ತು. ಆದರೆ ಇಂದು ದೇವದಾಸಿ ಪದ್ಧತಿ ನಿಷೇಧ ಕಾಯ್ದೆಯಿಂದಾಗಿ ಇಂದು ಈ ಪದ್ಧತಿ ನಿಂತಿದೆ.

ಶೈಕ್ಷಣಿಕವಾಗಿ ತಳವಾರರು ಅಷ್ಟಾಗಿ ಪ್ರಗತಿ ಸಾಧಿಸಿಲ್ಲ. ಇವರ ವೃತ್ತಿ ಪಾರಂಪರಿಕವಾಗಿದ್ದರಿಂದ ಇವರು ಅಷ್ಟಾಗಿ ಶಿಕ್ಷಣಕ್ಕೆ ಮಹತ್ವ ನೀಡಿಲ್ಲ. ಜೊತೆಗೆ ಸೇವಾರ್ಥವಾಗಿ ನೀಡಿದ್ದ ಇನಾಂ ಭೂಮಿ, ಜಮೀನುಗಳ ನೋಡಿಕೊಳ್ಳುವ ಜವಾಬ್ದಾರಿಯನ್ನು ಇವರ ಕುಟುಂಬಸ್ಥರ ಮೇಲಿದ್ದರಿಂದ ಅವರು ಶಿಕ್ಷಣದಿಂದ ವಂಚಿತರಾಗಿದ್ದಾರೆ. ಕ್ಷೇತ್ರಕಾರ್ಯದ ಮಾಹಿತಿ ಪ್ರಕಾರ ಶೇ.೩೫ರಷ್ಟು ಜನರು ಮಾತ್ರ ಶಿಕ್ಷಿತ ತಳವಾರರಿದ್ದಾರೆ. ಅದರಲ್ಲಿ ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಹಂತದವರೆಗೆ ಓದಿದವರು ಶೇ.೨೦ರಷ್ಟು ಜನರಿದ್ದರೆ, ಪಿಯುಸಿ ಪದವಿ ಹಂತಕ್ಕೆ ಓದಿದವರು ಶೇ.೧೦ರಷ್ಟು ಜನರು ಸಿಗುತ್ತಾರೆ. ಇನ್ನುಳಿದಂತೆ ಶೇ.೫ರಷ್ಟು ಜನರು ಉನ್ನತ ವ್ಯಾಸಂಗ ಮಾಡಿದ ಮತ್ತು ಮಾಡುತ್ತಿರುವವರನ್ನು ಕಾಣಬಹುದು. ಶೇ.೧೦ರಷ್ಟು ಜನರು ಮಾತ್ರ ಸರ್ಕಾರಿ ನೌಕರಿಯಲ್ಲಿದ್ದಾರೆ. ಇನ್ನು ರಾಜಕೀಯ ಕ್ಷೇತ್ರದಲ್ಲಿ ಶೇ.೫ರಷ್ಟು ಜನರು ಗ್ರಾಮ ಪಂಚಾಯ್ತಿ, ತಾಲೂಕು ಪಂಚಾಯ್ತಿ ಮಟ್ಟದಲ್ಲಿ ಗುರುತಿಸಿಕೊಂಡಿದ್ದಾರೆ.

ಸ್ವಾತಂತ್ರ್ಯ ನಂತರದಲ್ಲಿ ತಳವಾರರನ್ನು ವಂಶಪಾರಂಪರ್ಯದಿಂದ ಬಂದ ವೃತ್ತಿ ಎಂದು ಪರಿಗಣಿಸದೇ ಇವರನ್ನು ಆಡಳಿತದಿಂದ ದೂರ ಇಡಲಾಗಿದೆ. ಇಂತಿಷ್ಟು ಗೌರವ ಸಂಭಾವನೆ ನೀಡಿ ಗೌಡ, ಕುಲಕರ್ಣಿ, ಗ್ರಾಮಾಧಿಕಾರಿಗಳ ಸೇವೆಗಾಗಿ ನೇಮಿಸಲಾಗಿದೆ. ಗೌಡ, ಕುಲಕರ್ಣಿಯರು ತಾಲೂಕು ಕಚೇರಿಗೆ ಕಂದಾಯದ ಹಣ ತುಂಬಲು ಹೋಗುವಾಗ ಅವರಿಗೆ ರಕ್ಷಕನಾಗಿ ಹೋಗಬೇಕಾಗಿತ್ತು. ಜೊತೆಗೆ ಅಮಲ್ದಾರನ ಕೈಕೆಳಗೆ ನಿಂತು ಅವರು ಹೇಳಿದ ಕಾರ್ಯಗಳನ್ನು ಮಾಡಬೇಕಾಗಿತ್ತು. ಅಲ್ಲದೆ ಸಮಾಜದ ಮಂಗಳಾಕಾರ್ಯಗಳ ಪ್ರಸಂಗಗಳಲ್ಲಿ, ಜಾತ್ರೆ, ಉತ್ಸವ, ಹಬ್ಬ, ಹರಿದಿನಗಳಲ್ಲಿ ಭಾಗಿಯಾಗಿ ರಕ್ಷಣೆ ಮತ್ತು ಶಾಂತಿಯನ್ನು ಕಾಪಾಡುವುದು ತಳವಾರನ ಕರ್ತವ್ಯವಾಗಿತ್ತು.

ಗ್ರಾಮದ ಜನನ-ಮರಣ ಸುದ್ದಿಗಳನ್ನು ಗೌಡ-ಕುಲಕರ್ಣಿಯರಿಗೆ ಮುಟ್ಟಿಸುವುದು. ಕಂದಾಯ ವಸೂಲಿಗೆ ಬರುವ ಅಧಿಕಾರಿಗಳ ಜೊತೆಗಿದ್ದು ಸಹಕರಿಸುವುದು ಅಂದಿನ ತಳವಾರನ ಪ್ರಮುಖ ಕಾರ್ಯಗಳಲ್ಲಿ ಒಂದಾಗಿತ್ತು. ಆದರೆ ಇಂದು ಈ ವೃತ್ತಿಯವರು ಅತ್ಯಂತ ಕೀಳಾಗಿ ಕಾಣಲಾಗುತ್ತದೆ. ಇತ್ತಿತ್ತಲಾಗಿ ಸಮಾಜದ ದೇವರ ಕಾರ್ಯಗಳಲ್ಲಿ ಮದುವೆ ಮುಂಜಿಗಳಲ್ಲಿ ಸಾರ್ವಜನಿಕರ ಸೇವೆಗಾಗಿ ನೇಮಿಸಲಾಗುತ್ತಿದೆ. ಕೆಲವು ಕಡೆ ತಳವಾರರು ಗ್ರಾಮದ ಹನುಮಂತ ದೇವರ ಪೂಜಾರಿಕೆಯನ್ನು ಮಾಡಿಕೊಂಡು ಜೀವನ ನಡೆಸುತ್ತಿದ್ದಾರೆ. ಮತ್ತೆ ಕೆಲವು ಕಡೆ ಮದುವೆ, ಜಾತ್ರೆ, ಉತ್ಸವಗಳಲ್ಲಿ ಹಲಗೆಯವರನ್ನು ಕರೆ ತರುವುದು, ಮದುವೆ ಊಟಕ್ಕೆ ಜನರನ್ನು ಕರೆ ತರುವುದು, ಮದುವೆಯಲ್ಲಿ ಗ್ಯಾಸ್ ಲೈಟ್‌ಗಳನ್ನು ಹೊರುವುದು. ಗ್ರಾಮದ ಹೋಳಿ, ಮೊಹರಂ ಹಬ್ಬಗಳಲ್ಲಿ ಕೈಯಲ್ಲೊಂದು ಕೋಲು ಹಿಡಿದು ಮೆರವಣಿಗೆ ಮುಂದೆ ಸಾಗುವುದು ಇತ್ತೀಚಿನ ತಳವಾರರ ಕೆಲಸವಾಗಿದೆ.

ಮದುವೆಯ ಸಂದರ್ಭದಲ್ಲಿ ತಳವಾರನನ್ನು ಹಂದರಕ್ಕೆ ಮಾವಿನ ತಳಿರು ತೋರಣ ತರುವುದು, ಮದುವೆಯ ಪಾತ್ರೆಗಳನ್ನು ತೊಳೆಯುವುದು, ಮದುವೆಯ ಮಂಟಪದ ಪಕ್ಕ ಖಡ್ಗ ಹಿಡಿದು ಮದುಮಕ್ಕಳಿಗೆ ರಕ್ಷಕನಾಗಿ ನಿಲ್ಲುವುದನ್ನು ಮಾಡಿಸಲಾಗುತ್ತದೆ. ಇನ್ನು ಕೆಲವು ಕಡೆ ಊರಲ್ಲಿ ಯಾರಾದರೂ ಹಿರಿಯರು ತೀರಿಕೊಂಡರೆ ಅವರ ಶವಸಂಸ್ಕಾರ ಆಗುವವರೆಗೂ ಅಲ್ಲೇ ಇದ್ದು, ಅವರ ಶವಯಾತ್ರೆಯ ಮುಂದೆ ಖಡ್ಗ ಹಿಡಿದು ಹೋಗುವ ಪದ್ಧತಿಯಿದೆ. ಇತ್ತೀಚಿಗೆ ಅನೇಕರು ಇಂತಹ ಹೀನಾಯ ವೃತ್ತಿ ಮಾಡದೇ ಈ ವೃತ್ತಿಯನ್ನು ತೊರೆದು ಕೃಷಿಯಲ್ಲಿ ತೊಡಗಿಕೊಂಡಿದ್ದಾರೆ. ಇವರಿಗೆ ಸೇವಾರ್ಥವಾಗಿ ನೀಡಿದ್ದ ಭೂಮಿಯು ಬರಡು ಮತ್ತು ಒಣ ಬೇಸಾಯಕ್ಕೆ ಒಳಪಟ್ಟಿದ್ದು ಬರಗಾಲ ಮತ್ತು ಆರ್ಥಿಕ ಸಂಕಷ್ಟ ಕಾಲದಲ್ಲಿ ಕೂಲಿ ಕೆಲಸವನ್ನು ಮಾಡಿಕೊಂಡಿದ್ದಾರೆ. ಕೆಲವರು ಚಿಕ್ಕ ಚಿಕ್ಕ ಅಂಗಡಿ ಮುಂಗಟ್ಟುಗಳನ್ನು ಹಾಕಿಕೊಂಡು ವ್ಯಾಪಾರ ನಡೆಸುತ್ತಿದ್ದಾರೆ. ಇವರಲ್ಲಿ ಅನೇಕರು ದುಶ್ಚಟಗಳಿಗೆ ಬಲಿಯಾಗಿ ಇದ್ದ ಅಲ್ಪಸ್ವಲ್ಪ ಆಸ್ತಿಯನ್ನು ಕಳೆದುಕೊಂಡು ದೇಶಾಂತರ ವಲಸೆ ಹೋಗಿದ್ದಾರೆ. ರಾಯಚೂರು, ಕೊಪ್ಪಳ, ಬಳ್ಳಾರಿ ಜಿಲ್ಲೆಯ ತಳವಾರರಿಗೆ ಅಷ್ಟಾಗಿ ಇನಾಂ ಭೂಮಿಗಳಿಲ್ಲ. ಇದ್ದರೂ ಅವುಗಳು ಜನಸಂಖ್ಯೆ ಬೆಳೆದಂತೆ ಹಿಡುವಳಿಗಳಾಗಿ ಹರಿದು ಹಂಚಿ ಹೋಗಿವೆ. ಒಟ್ಟಾರೆಯಾಗಿ ಇವರ ಕುಟುಂಬದ ಆರ್ಥಿಕ ಸ್ಥಿತಿ ಅಷ್ಟೇನು ಉತ್ತಮವಾಗಿಲ್ಲವೆಂಬುದು ಅವರ ಕುಟುಂಬಸ್ಥರಲ್ಲಿ ಶೇ.೯೦ರಷ್ಟು ಜನರು ಬಿಪಿಎಲ್ ಕಾರ್ಡ್ ಹೊಂದಿರುವುದು ಸಾಕ್ಷಿಯಾಗುತ್ತದೆ.

ಹೀಗೆ, ಜಾಗತೀಕರಣಗೊಳ್ಳುವ ಪ್ರಕ್ರಿಯೆಯಲ್ಲಿ ತಳವಾರರ ಬದುಕು ನಾನಾ ಹಂತಗಳಲ್ಲಿ ಪರಿವರ್ತನೆಗೊಂಡಿರುವುದನ್ನು ಕಾಣಬಹುದಾಗಿದೆ. ಕೆಲವು ಕಾಯ್ದೆ, ಕಾನೂನುಗಳ ಮೂಲಕ ಅವರ ವೃತ್ತಿ ಬದುಕಿನಲ್ಲಿ ಅನೇಕ ಬದಲಾವಣೆಗಳಾದರೂ ಅವರ ಸಂಸ್ಕೃತಿ, ಆಚಾರ-ವಿಚಾರ, ನಂಬಿಕೆಗಳಲ್ಲಿ ಬದಲಾವಣೆಗಳಾಗಿಲ್ಲ. ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಕೆಲವು ಜೀವನ ವಿಧಾನ,

ಸಂಪ್ರದಾಯಗಳಲ್ಲಿ ಸುಧಾರಣೆ ಕಂಡಿದ್ದಾರೆ. ಪರಿಶಿಷ್ಟ ಪಂಗಡ ಮೀಸಲಾತಿಯಿಂದ ವಂಚಿತರಾದ ಕೆಲವು ತಳವಾರ, ಪರಿವಾರದವರು ಮೀಸಲಾತಿಗಾಗಿ ಹೋರಾಡುತ್ತಿದ್ದಾರೆ. ಜೊತೆಗೆ ಗ್ರಾಮ ಸಹಾಯಕರಾಗಿ ಸೇವೆ ಸಲ್ಲಿಸುತ್ತಿರುವ ಅನೇಕರು ತಮ್ಮ ವೃತ್ತಿ ಪರಂಪರೆ ಹಾಗೂ ಸೇವಾ ಭದ್ರತೆ ಮತ್ತು ಸೌಲಭ್ಯಗಳಿಗಾಗಿ ದಶಕಗಳಿಂದ ಹೋರಾಟ ಮಾಡುತ್ತಲೇ ಇದ್ದಾರೆ. ಇದಕ್ಕಾಗಿ ರಾಷ್ಟ್ರೀಯ, ರಾಜ್ಯಮಟ್ಟದ ಜಿಲ್ಲಾಮಟ್ಟದ ಹಾಗೂ ತಾಲೂಕು ಮಟ್ಟದಲ್ಲಿ ಸಂಘಟನೆಯನ್ನು ಹೊಂದಿ, ಹೋರಾಟ ಮಾಡುತ್ತಲೇ ಬಂದಿದ್ದಾರೆ. ಸರ್ಕಾರ ಇದುವರೆಗೂ ಇವರನ್ನು ಖಾಯಂ ಮಾಡುವ ಹಾಗೂ ಇವರ ಬೇಡಿಕೆಗಳನ್ನು ಇಡೇರಿಸುವ ಗೋಜಲಿಗೆ ಹೋಗಿಲ್ಲ. ರಾಜ್ಯದಲ್ಲಿ ಈಗ ೧೦,೯೫೦ ಜನ ಗ್ರಾಮಸಹಾಯಕರು ಸೇವೆ ಸಲ್ಲಿಸುತ್ತಿದ್ದು, ಇವರಲ್ಲಿ ಮುಕ್ಕಾಲು ಭಾಗ ತಳವಾರರ ವಂಶಸ್ಥರಿದ್ದಾರೆ.

ಕಂದಾಯ ಇಲಾಖೆಯಲ್ಲಿ ಆಡಳಿತಾತ್ಮಕ ಅನುಕೂಲಕ್ಕಾಗಿ ತೋಟಿ ತಳವಾರರಾಗಿ ವಂಶ ಪಾರಂಪರ್ಯವಾಗಿ ಕೆಲಸ ಮಾಡುತ್ತಾ ಬಂದಿರುವ ಇವರನ್ನು ಇಂದಿನ ಸರ್ಕಾರ ಇವರ ಹೋರಾಟ, ಶ್ರಮವನ್ನು ಗಮನಿಸಿ 'ಡಿ'ದರ್ಜೆ ನೌಕರರೆಂದು ಪರಿಗಣಿಸಿ, ವೇತನ, ಪಿಂಚಣಿ ಮತ್ತಿತರ ಸೌಲಭ್ಯ ಕಲ್ಪಿಸಲು ಸರ್ಕಾರ ಅಶ್ವಾಸನೆ ನೀಡಿತ್ತು. ಆದರೆ ಆರ್ಥಿಕ ಹೊರೆಯಾಗಲಿದೆ ಎಂಬ ಕಾರಣಕ್ಕೆ ೨೦೧೬-೧೭ನೇ ಸಾಲಿನ ಬಜೆಟ್‌ನಲ್ಲಿ ಈ ನಿರ್ಣಯವನ್ನು ಪ್ರಕಟಿಸದೇ ಇವರಿಗೆ ಅನ್ಯಾಯ ಮಾಡಿದ್ದಾರೆ. ವಿವಿಧ ವೃತ್ತಿ, ಸಂಸ್ಕೃತಿ ಹಾಗೂ ಪರಂಪರೆ ರಕ್ಷಣೆಗೆ ಸರ್ಕಾರ ಕೋಟ್ಯಂತರ ರೂಪಾಯಿ ವ್ಯಯಿಸುತ್ತದೆ. ಅಂತಹದ್ದರಲ್ಲಿ ಪ್ರಾಚೀನ ಕಾಲದಿಂದಲೂ ರಕ್ಷಣಾ ಜವಾಬ್ದಾರಿಯನ್ನು ಹೊತ್ತ ತಳವಾರರ ರಕ್ಷಣೆಗೆ ಮಾತ್ರ ಸರ್ಕಾರ ನಿಲ್ಲದಿರುವುದು ದುರದೃಷ್ಟಕರ ಸಂಗತಿಯಾಗಿದೆ. ಸಾಮಾಜಿಕವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ ಹಿಂದುಳಿದಿರುವ ತಳವಾರರಿಗೆ, ಸರ್ಕಾರವು ಇನ್ನು ಕೆಲವು ಸೌಲಭ್ಯಗಳನ್ನು ಒದಗಿಸಿ, ಅವರ ಪಾರಂಪರಿಕ ವೃತ್ತಿಯನ್ನು ಉಳಿಸಿ, ಬೆಳೆಸುವ ಅನಿವಾರ್ಯತೆ ಇದೆ.

ಅಧ್ಯಾಯ ಒಂಬತ್ತು

# ಸಮಾರೋಪ

ಭಾರತ ಹಳ್ಳಿಗಳಿಂದ ಕೂಡಿದ ದೇಶವಾಗಿದೆ. ಪ್ರತಿ ಹಳ್ಳಿಯಲ್ಲಿಯೂ ಒಬ್ಬ ಕಾವಲುಗಾರ, ರಕ್ಷಕನಾಗಿ ತಳವಾರ ಇರುತ್ತಾನೆ. ವಿಜಯನಗರ ಕಾಲದಲ್ಲಿ ವಿಜಯನಗರದಲ್ಲೇ ಮುಕ್ಕಲು ಭಾಗ ಬೇಡನಾಯಕರೇ ಇದ್ದರೆಂಬುದಕ್ಕೆ ಅನೇಕ ಕುರುಹುಗಳಿವೆ. ಅವರಲ್ಲಿ ಅನೇಕರು ತಳವಾರರು ಇದ್ದರು. ಅದಕ್ಕೆ ಉದಾಹರಣೆ ತಳವಾರಘಟ್ಟ, ತಳವಾರಕೇರಿ ಮುಂತಾದವು ಅವರ ನೆಲೆಗಳಾಗಿದ್ದ ಬಗೆಗೆ ತಿಳಿಯುತ್ತದೆ. ಇನ್ನು ಶ್ರೀಕೃಷ್ಣದೇವರಾಯನ ತಾತ ತಳವಾರ ಈಶ್ವರ ನಾಯಕನು ಮೂಲದಲ್ಲಿ ತಳವಾರನಾಗಿದ್ದನು ಎಂದು ಹೇಳಲಾಗುತ್ತದೆ. ಹಾಗೂ ವಿಜಯನಗರದ ಅಧೀನದಲ್ಲಿದ್ದ ಸೈನಿಕ, ದಂಡನಾಯಕ, ತಳವಾರ, ಸಾಮಂತರು ಅನಂತರ ಸ್ವತಂತ್ರ ಪಡೆದು ಸ್ವಾಭಿಮಾನದಿಂದ ಪಾಳೆಯಗಾರರಾಗಿ ಆಳ್ವಿಕೆ ನಡೆಸಿದ್ದು ಸ್ಮರಣೀಯವಾಗಿದೆ. ಅಂದಿನ ನಾಡ ತಳವಾರರಿಗೆ ಅಧಿಕಾರ ಬಂದಾಗ ಪಾಳೆಯಗಾರರೆಂದು ಕರೆದುಕೊಂಡರು. ಸುಮಾರು ಎಪ್ಪತ್ತೇಳು ಪಾಳೆಯ ಪಟ್ಟುಗಳು ಅಂದು ಬೇಡ ಹಾಗೂ ಇತರರಿಂದ ನಿರ್ಮಾಣಗೊಂಡಿದ್ದು ತಳವಾರ ಹಿನ್ನಲೆಯೇ ಅದಕ್ಕೆ ಕಾರಣ ಎಂದು ಹೇಳಬಹುದು. ಇಂದಿಗೂ ಇರುವ ಕೆಲವು ಪಾಳೆಯಗಾರ ವಂಶಸ್ಥರು ತಾವು ಮೂಲದಲ್ಲಿ ಬೇಡ ಸಮುದಾಯಕ್ಕೆ ಸೇರಿದ್ದು ತಳವಾರಿಕೆ ಮಾಡುತ್ತಿದ್ದ ಬಗ್ಗೆ ತಿಳಿಸುತ್ತಾರೆ.

ತಳವಾರಿಕೆ ಕರ್ನಾಟಕದಲ್ಲಿ ಬಹು ಪ್ರಾಚೀನ ಕಾಲದಿಂದಲೂ ಇತ್ತು. ಇದಕ್ಕೆ ರಾಜ ಪ್ರಭುತ್ವದಲ್ಲಿ ವಿಶೇಷ ಸ್ಥಾನಮಾನ ಸಿಕ್ಕಿದ್ದು ಸ್ಪಷ್ಟವಾಗಿದೆ. ತಳವಾರರು ಹೆಚ್ಚಾಗಿ ಆಯಾ ಪ್ರದೇಶದ ಸ್ಥಳೀಯರಾಗಿರುತ್ತಾರೆ. ಗ್ರಾಮಸ್ಥರ ನಿಯಂತ್ರಣ ತಳವಾರನ ಮೇಲಿತ್ತು. ಆರಂಭದಲ್ಲಿ ತಳವಾರರಿಗೆ ಆಯ ಕೊಡುವ ಪದ್ಧತಿ ಇತ್ತು. ತಳವಾರನು ಗ್ರಾಮದ ಕಾವಲು, ರಕ್ಷಣೆಯನ್ನು ನಿಯಂತ್ರಿಸುತ್ತಿದ್ದ. ಇದಕ್ಕೆ ರಾಜ ಮಹಾರಾಜರಿಂದ ಇನಾಂ ಭೂಮಿಗಳನ್ನು, ದಾನದತ್ತಿಗಳನ್ನು ಪಡೆಯುತ್ತಿದ್ದರು. ಇದಕ್ಕೆ ಪ್ರತಿಯಾಗಿ ತಳವಾರರು, ರಾಜರು ಹಾಗೂ ಊರಿನ ಪ್ರಮುಖರ ಹೆಸರಿನಲ್ಲಿ ದಾನ ದತ್ತಿಗಳನ್ನು ಬಿಟ್ಟಿರುವುದರ ಜೊತೆಗೆ ದೇವಸ್ಥಾನ, ಕೆರೆ, ಕಟ್ಟೆ, ಬಾವಿಗಳನ್ನು

ತೋಡಿಸುವ ಲೋಕ ಕಲ್ಯಾಣ ಕಾರ್ಯಗಳನ್ನು ಮಾಡಿರುವುದು ಶ್ಲಾಘನೀಯ ಸಂಗತಿಯಾಗಿದೆ. ಕಂದಾಯ, ತೆರಿಗೆ ವಸೂಲಿ ಮಾಡುವುದರ ಜೊತೆಗೆ ರಾಜ್ಯದ ಆರ್ಥಿಕ ಆದಾಯವನ್ನು ಹೆಚ್ಚಿಸುವಲ್ಲಿ ತಳವಾರರು ನೆರವಾಗಿದ್ದಾರೆ.

ತಳವಾರರು ಆದಿಯಲ್ಲಿ ಬೇಡ ಸಮುದಾಯದವರೇ ಆಗಿದ್ದರು. ಭಾರತವು ಬಹುಭಾಷೆ, ಜನಾಂಗ, ಧರ್ಮಗಳಿರುವ ವೈವಿಧ್ಯಮಯ ದೇಶ. ಇಂಥ ಸಂಪ್ರದಾಯಶೀಲ ರಾಷ್ಟ್ರದಲ್ಲಿ ತಳವಾರನ ಪಾತ್ರ ಸೌಹಾರ್ದ ಹಾಗೂ ಸಾಮರಸ್ಯದಿಂದ ಕೂಡಿತ್ತು. ಗ್ರಾಮದಲ್ಲಿ ಕಳ್ಳತನ ಆಗದಂತೆ, ಹಾದರತನ ನಡೆಯದಂತೆ ಕಾವಲು ಕಾಯುತ್ತಿದ್ದ ತಳವಾರ, ರಾಜ್ಯದ ಬೊಕ್ಕಸಕ್ಕೆ ಸಂಪತ್ತನ್ನು ವೃದ್ಧಿಸುವವನಾಗಿದ್ದ. ಹಗಲು ರಾತ್ರಿ ಊರನ್ನು ಇಲ್ಲವೇ ಊರಿನ ಕೋಟೆಯನ್ನು ಗಸ್ತು ತಿರುಗುತ್ತಿದ್ದ. ಊರಿನ ಸಮಸ್ತ ಆಗು ಹೋಗುಗಳ ಪರಿಜ್ಞಾನ ಹೊಂದಿರುತ್ತಿದ್ದನು. ತನ್ನ ವೃತ್ತಿ ಚಾಣಕ್ಷತನ ಹಾಗೂ ನಿಪುಣತೆಯಿಂದ ಗ್ರಾಮದಲ್ಲಿನ ದೈನಂದಿನ ಕಾರ್ಯಚಟುವಟಿಕೆಗಳ ಬಗೆಗೆ ನಿಗಾ ಇರಿಸಿ ತನ್ನ ಮೇಲಾಧಿಕಾರಿಗಳಿಗೆ ವರದಿ ಮಾಡುತ್ತಿದ್ದನು.

ಗ್ರಾಮ ರಕ್ಷಿಸುವ ಪರಿಕಲ್ಪನೆ ಸ್ಥಳೀಯವಾದದ್ದು ಮತ್ತು ದೇಶಿಯದ್ದು. ಸಂಘಟನೆ, ಸಂಘರ್ಷಗಳಿಂದ ಗ್ರಾಮಗಳಲ್ಲಿ ಕೆಟ್ಟ ಚಟುವಟಿಕೆಗಳು ನಡೆಯದಂತೆ ಶಾಂತಿ–ಶಿಸ್ತು ಕಾಪಾಡುವ ಹೊಣೆಗಾರಿಕೆ ಇವರ ಮೇಲಿತ್ತು. ಅದೇ ರೀತಿ ಸರ್ವರೊಂದಿಗೆ ಮಧುರ ಬಾಂಧವ್ಯವನ್ನು ಇಟ್ಟುಕೊಂಡಿದ್ದರು. ಇಂದಿನ ಪೊಲೀಸ್‌ನವರಂತೆ ತಳವಾರರು ಅಂದು ಕೆಲಸ ನಿರ್ವಹಿಸುತ್ತಿದ್ದರು.

ಗ್ರಾಮಾಡಳಿತ ವ್ಯವಸ್ಥೆಯಲ್ಲಿ ಗೌಡ, ಕುಲಕರ್ಣಿಗಿರುವ ಅಧಿಕಾರಕ್ಕಿಂತ ರಕ್ಷಣೆಗಿರುವ ಮಹತ್ವ ಮುಖ್ಯವೆನಿಸುತ್ತದೆ. ಅಂದಿನ ತಳವಾರಿಕೆ ಇಂದಿನ ಗೃಹ ಇಲಾಖೆಯನ್ನು ನೆನಪಿಗೆ ತರುತ್ತದೆ ಎಂದು ಹೇಳಬಹುದು. ತಳವಾರರ ಇತಿಹಾಸ ಅನಾದಿ ಕಾಲದಿಂದ ಇಲ್ಲದಿದ್ದರೂ ಶಾತವಾಹನದ ಕಾಲಕ್ಕೆ ಇವರು ಶಾಸನಗಳಲ್ಲಿ ಉಲ್ಲೇಖವಾಗಿರುವುದನ್ನು ಕಾಣಬಹುದು. ಇಕ್ಷ್ವಾಕು ಅರಸರ ಕಾಲಕ್ಕೆ 'ತಳವಾರ' ಪದ ಸ್ಪಷ್ಟ ರೂಪ ಪಡೆದಿದೆ. ಕ್ರಮೇಣ ಕದಂಬ, ಗಂಗ, ಚಾಲುಕ್ಯರ ಕಾಲದಲ್ಲಿ ತಳವಾರ, ನಾಡ ತಳವಾರ, ಮಹಾನಾಡ ತಳವಾರ ಎಂಬ ಅಧಿಕಾರ ಪಡೆದಿದ್ದರು. ರಾಷ್ಟ್ರಕೂಟರ ಕಾಲಕ್ಕೆ ಸೈನ್ಯದಲ್ಲಿ ಇವರೇ 'ನಾಯಕ' ಎಂದಾದರು, ದಂಡನಾಯಕನ ನಂತರ ತಳವಾರನೇ ಹಿರಿಯ ಅಧಿಕಾರಿಯಂತೆ ಇಲ್ಲಿ ಕಂಡುಬರುತ್ತಾನೆ.

ಬ್ರಿಟಿಷರ ಅವಧಿಯಲ್ಲಿ ತಳವಾರಿಕೆಯ ಶಿಸ್ತು, ದಕ್ಷತೆ ಇಮ್ಮಡಿಗೊಂಡಿತು. ತಳವಾರರಿಗೆ ಬೇಕಾದ ಕೆಲವು ಸೌಲಭ್ಯ ಉಪಕರಣ, ಅಗತ್ಯ ವಸ್ತುಗಳನ್ನು ಒದಗಿಸಿದ್ದರು. ಸ್ವತಂತ್ರ್ಯ ನಂತರ ತಳವಾರರು ಬೀದಿ ಪಾಲಾದರು. ತಮ್ಮ ವಂಶ ಪರಂಪರೆಯಿಂದ ಬಂದ ವೃತ್ತಿಯನ್ನು ಕ್ರಿ.ಶ.೧೯೬೧ರ ಗ್ರಾಮ ನೌಕರರ ರದ್ಧತಿ ಅಧಿನಿಯಮದಂತೆ ಕಳೆದುಕೊಳ್ಳಬೇಕಾಯಿತು. ಸರ್ಕಾರ ಇವರನ್ನು ಸಾಂಪ್ರದಾಯಕವಾಗಿ ನಡೆಸಿಕೊಂಡು ಬಂದರೂ ಸಹ, ಇವರಿಗೆ ಹಿಂದೆ ನೀಡಿದ್ದ

ಪ್ರಾಶಸ್ತ್ಯ ಇಲ್ಲದಂತಾಯಿತು. ಹಿಂದೆ ಇವರ ಸೇವಾರ್ಥವಾಗಿ ನೀಡಿದ್ದ ಇನಾಂ ಭೂಮಿ ಹೊರತುಪಡಿಸಿ ಯಾವುದೇ ಸರ್ಕಾರಿ ಸೇವಾಭದ್ರತೆಯನ್ನು ನೀಡಿಲ್ಲ. ಕೆಲವರು ಪಿಂಚಣಿಯಿಂದ ತೃಪ್ತಿಪಟ್ಟರೆ ಮತ್ತೆ ಕೆಲವರು ತಮ್ಮ ಮಕ್ಕಳು ಇಲ್ಲವೇ ಮೊಮ್ಮಕ್ಕಳಿಗೆ ಕ್ರಿ.ಶ.೧೯೭೮ರ ಗ್ರಾಮ ಸಹಾಯಕ ಅಧಿನಿಯಮದಂತೆ ಗ್ರಾಮ ಲೆಕ್ಕಾಧಿಕಾರಿಯ ಕೈಕೆಳಗೆ ಗ್ರಾಮ ಸಹಾಯಕನಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಇವರ ನಿರಂತರ ಹೋರಾಟ ಮತ್ತು ಶ್ರಮದ ನಡುವೆಯೂ ಸರ್ಕಾರ ಇವರನ್ನು ಇನ್ನೂ ಖಾಯಂಗೊಳಿಸದೆ ಕೇವಲ ಮಾಸಿಕ ಗೌರವಧನದ ಆಧಾರದ ಮೇಲೆ ದುಡಿಸಿಕೊಳ್ಳುತ್ತಿದೆ.

ಪ್ರಾಚೀನ ಪರಂಪರೆಯಿಂದ ಮುಂದುವರೆಸಿಕೊಂಡು ಬಂದಿದ್ದ ತಳವಾರಿಕೆ ಇಂದು ಮರೆಯಾಗಿ 'ಗ್ರಾಮಸಹಾಯಕ'ರೆಂದು ಮರುನಾಮ ಪಡೆದು ಸೇವೆಗೈಯುತ್ತಿರುವುದನ್ನು ಕಾಣ ಬಹುದು. ಇದರ ಜೊತೆಗೆ ತಳವಾರ ಕೆಲಸವನ್ನು ಬೇಡ ನಾಯಕರೇ ಹೆಚ್ಚಾಗಿ ಮಾಡಿಕೊಂಡು ಬಂದಿರುತ್ತಾರೆ. ಆದರೆ ಸ್ವಾತಂತ್ರ್ಯ ನಂತರ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ವೃತ್ತಿಯ ಪ್ರಾಮುಖ್ಯತೆ ಕಡಿಮೆ ಆದಂತೆ ಬೇಡನಾಯಕ ತಳವಾರರು ಈ ವೃತ್ತಿಯಿಂದ ಹಿಂದೆ ಸರಿಯುತ್ತ ಬಂದರು. ಆಗ ಬೇರೆ ಬೇರೆ ಸಮುದಾಯದವರು ತಳವಾರಿಕೆಯನ್ನು ಮಾಡಿಕೊಂಡು ಬಂದಿರುವುದು ಗಮನಾರ್ಹ. ಕುರುಬರು, ಬಾರಿಕೇರ, ಚಲವಾದಿ, ಮುಸ್ಲಿಂ, ಬೆಸ್ತರು, ಹರಿಜನ ಮುಂತಾದ ಸಮುದಾಯದವರೂ ತಳವಾರಿಕೆ ವೃತ್ತಿಯಲ್ಲಿರುವುದನ್ನು ಕಾಣಬಹುದಾಗಿದೆ.

ತಳವಾರಿಕೆ ಒಂದು ಜಾತಿಯಲ್ಲ, ಅದೊಂದು ವೃತ್ತಿ. ಇದನ್ನು ಕೈಗೊಂಡ ಬೇಡ ನಾಯಕ ಸಮುದಾಯವೇ ತಳವಾರರ ಪ್ರಮುಖ ಜಾತಿಯಾಗಿದೆ. ತಳವಾರಿಕೆ ಮಾಡುವುದರಿಂದ ಅವರಿಗೆ ಉಪಜೀವನದ ವೃತ್ತಿಯಿಂದಾಗಿ ಉಪಜಾತಿ ಸೃಷ್ಟಿಯಾದಂತಾಗಿದೆ. ಹಗಲಿರುಳು ಗ್ರಾಮಗಳ ರಕ್ಷಣಾ ಕಾರ್ಯಕ್ಕೆ ನಿಯಮಿಸಲ್ಪಟ್ಟವರ ಸಂತತಿಯವರು ತಮ್ಮನ್ನು ತಾವು ತಳವಾರರೆಂದು ಕರೆದುಕೊಳ್ಳುತ್ತಾರೆ. ಬೇಡರಲ್ಲಿ ಒಂದು ಉಪಪಂಗಡವಾದ ತಳವಾರರನ್ನು ಇಲ್ಲಿ ಕೇಂದ್ರಬಿಂದು ವಾಗಿರಿಸಿಕೊಂಡು ಅಧ್ಯಯನ ಕೈಗೊಳ್ಳಲಾಗಿದೆ.

ಈ ಹಿನ್ನೆಲೆಯಲ್ಲಿ ತಳವಾರರ ಸಾಂಸ್ಕೃತಿಕ ಅಧ್ಯಯನದಡಿಯಲ್ಲಿ ತಳವಾರರ ವೃತ್ತಿ ಪರಂಪರೆ ಹಾಗೂ ಸಾಂಸ್ಕೃತಿಕ ಜೀವನ ವಿಧಾನದ ಕುರಿತು ಈ ಪ್ರಬಂಧದಲ್ಲಿ ಒಟ್ಟು ಒಂಬತ್ತು ಅಧ್ಯಾಯಗಳ ಮೂಲಕ ಕಟ್ಟಿ ಕೊಡಲಾಗಿದೆ.

ಮೊದಲಿಗೆ ಅಧ್ಯಯನದ ಉದ್ದೇಶವನ್ನು ತಳವಾರ ಮೂಲ ಮತ್ತು ಪರಂಪರೆ ಹಾಗೂ ವೃತ್ತಿಯ ಹಿನ್ನೆಲೆಯನ್ನು ವಿವಿಧ ಆಕರಗಳ ಮೂಲಕ ಕಂಡುಕೊಳ್ಳಲಾಗಿದೆ.

ಆರಂಭದ ವೃತ್ತಿಗಳು ಹೆಚ್ಚು ನೈಸರ್ಗಿಕವಾಗಿದ್ದವು. ಕಾಲಕ್ರಮೇಣ ನಿಸರ್ಗ ಜೀವಿಯಾದ ಮಾನವನು ಸಮಾಜ ಜೀವಿಯಾಗಿ ಬೆಳೆದಂತೆ ಈ ನೈಸರ್ಗಿಕ ವೃತ್ತಿಯೊಂದಿಗೆ ಸಾಮಾಜಿಕ

ವೃತ್ತಿಗಳು ಹುಟ್ಟಿಕೊಂಡಿವೆ. ಅನುವಂಶಿಕ ವೃತ್ತಿಗಳಾಗಿದ್ದ ಇವುಗಳು ಕಾಲಕ್ರಮೇಣ ಜಾತಿ ಸ್ವರೂಪವನ್ನು ಪಡೆದುಕೊಂಡು ಬಂದಿವೆ. ಇದರಲ್ಲಿ 'ತಳವಾರಿಕೆ' ಸಹ ಒಂದಾಗಿದೆ. ತಳವಾರಿಕೆ ಹಲವಾರು ಸಮುದಾಯಗಳ ಸಂಸ್ಕೃತಿಯೊಂದಿಗೆ ಮಿಳಿತಗೊಂಡು ಬಂದಿದೆ. ಈ ಹಿನ್ನೆಲೆಯಲ್ಲಿ ಪ್ರತಿಯೊಂದು ಜಾತಿಯಲ್ಲಿ ವೃತ್ತಿ ಮೂಲದಿಂದಲೇ ಜಾತಿಗಳು ವಿಕಾಸ ಹೊಂದಿವೆ ಎಂಬುದನ್ನು ತಿಳಿಯಲಾಗಿದೆ.

ತಳವಾರಿಕೆಯಲ್ಲಿ ಅಧಿಕ ಸಂಖ್ಯೆಯಲ್ಲಿ ಕಂಡುಬರುವ ಬೇಡ ನಾಯಕರ ಮೂಲದಿಂದಲೇ ತಳವಾರರ ಮೂಲವನ್ನು ನೋಡಲಾಗಿದೆ. ಬೇಟೆಯ ಪರಂಪರೆಯಿಂದ ಗುರುತಿಸಿಕೊಂಡ ಬೇಡ ನಾಯಕರನ್ನು ಪುಳಿಂದ, ಶಬರ, ಕಿರಾತ, ನಿಷಾದ, ವಾಲ್ಮೀಕಿ, ತಳವಾರ ಎಂದು ವಿವಿಧ ಪರ್ಯಾಯ ಹೆಸರುಗಳಿಂದ ಕರೆಯುತ್ತಾರೆ. ಆರ್ಯ ಸಂಸ್ಕೃತಿಯ ಆಕ್ರಮಣ, ವಿಸ್ತರಣೆಯಿಂದಾಗಿ ಹಲವು ಸಮುದಾಯಗಳು ಭಾರತದ ಒಂದೊಂದು ಪ್ರದೇಶಗಳಿಗೆ ವಲಸೆ ಬಂದಿದ್ದಾರೆ. ಅದರಲ್ಲಿ ಬೇಡರು ದಕ್ಷಿಣ ಭಾರತದ ಕಡೆಗೆ ವಲಸೆ ಬಂದು ವಿಂಧ್ಯಪರ್ವತ ಪ್ರದೇಶದಲ್ಲಿ ವಾಸಿಸ ತೊಡಗಿದರು. ಆ ಮೂಲಕವಾಗಿ ಇವರನ್ನು ಆರ್ಯೇತರ ಪಂಗಡಕ್ಕೆ ಸೇರಿದ ಬುಡಕಟ್ಟು ಎಂದು ಹೇಳಲಾಗಿದೆ.

ಕರ್ನಾಟಕದಲ್ಲಿ ತಳವಾರರ ಚರಿತ್ರೆಯನ್ನು ಶಾತವಾಹನರ ಕಾಲದಿಂದ ಗುರುತಿಸಲಾಗಿದೆ. ಗುಲಬರ್ಗಾ ಜಿಲ್ಲೆಯ ಸನ್ನತಿ ಶಾಸನದಲ್ಲಿ 'ತಳಾರ', 'ತಳಾರಿಣಿ' ಎಂಬ ಪದಗಳು ಪ್ರಯೋಗ ಗೊಂಡಿವೆ. ಅದೇ ರೀತಿ ನಾಗಾರ್ಜುನಕೊಂಡದ ಇಕ್ಷ್ವಾಕು ವಂಶದ ದೊರೆತಳಿಂದ 'ತಲವರ', 'ಮಹಾ ತಲವರ' ಎಂಬ ಪದಗಳು ಶಾಸನಗಳಲ್ಲಿ ಬಳಕೆಯಾಗಿವೆ. ಈ ಪದಗಳನ್ನು ರಕ್ಷಕ, ಕಾವಲುಗಾರ ಎಂಬರ್ಥದಲ್ಲಿ ಬಳಸಲಾಗಿದೆ. ಇದರೊಂದಿಗೆ ಅಂದಿನ ಕಾಲದಲ್ಲಿ ಒಂದು ಪ್ರದೇಶದ ರಕ್ಷಣಾಧಿಕಾರಿಯಾಗಿ ತಳವಾರನಿದ್ದ ಎಂಬುದು ಖಚಿತವಾಗಿ ಹೇಳಬಹುದು.

ಕಾಡಿನ ಸಂಸ್ಕೃತಿಯಿಂದ ನಾಡಿನ ಸಂಸ್ಕೃತಿಯೆಡೆಗೆ ಧಾವಿಸಿಬಂದ ಈ ಸಮುದಾಯ, ದೈಹಿಕ ಸದೃಢತೆ ಮತ್ತು ಧೈರ್ಯಶಾಲಿತನ, ಬೇಟೆಯ ಕುಶಲತೆಯಿಂದಾಗಿಯೇ ತಳವಾರರನ್ನು ದುರ್ಗದ, ಪಾಳೆಯ ಪಟ್ಟಿನ ರಕ್ಷಣೆ ಹಾಗೂ ಆಯಾ ಊರಿನ ಗೂಢಚಾರಿಕೆ ಕೆಲಸವನ್ನು ತಳವಾರನೇ ನಿರ್ವಹಿಸಿರುವುದು ಸ್ಪಷ್ಟವಾಗಿದೆ. ಬ್ರಿಟಿಷರ ಕಾಲದಲ್ಲಿ ತಳವಾರಿಕೆಗೆ ಪ್ರಾಶಸ್ತ್ಯ ಕಡಿಮೆಯಾಯಿತು. ಅಲ್ಲಿಂದ ಇವರನ್ನು ಗೌಡ, ಕುಲಕರ್ಣಿಯರ ಸಹಾಯಕನಾಗಿ, ಭೂ ಕಂದಾಯ, ತಲೆಗಂದಾಯವನ್ನು ವಸೂಲಿಗೆ ನಿಲ್ಲಿಸಲಾಯಿತು. ೧೯೪೭ರಿಂದ ೧೯೭೬ರ ವರೆಗೆ ಇವರಿಗೆ ಇನಾಂ ಭೂಮಿಗಳನ್ನು, ಪಿಂಚಣಿಯನ್ನು ನೀಡಲಾಗುತ್ತಿತ್ತು. ತದನಂತರ ಅದನ್ನು ನಿಲ್ಲಿಸಿ ೧೯೭೮ರಿಂದ ಗ್ರಾಮಲೆಕ್ಕಾಧಿಕಾರಿಯ ಸಹಾಯಕನಾಗಿ 'ಗ್ರಾಮ ಸಹಾಯಕ'ಎಂಬ ವೃತ್ತಿಯಲ್ಲಿ ಮುಂದುವರಿಸಿದ್ದಾರೆ.

ತಳವಾರರ ಕುರಿತಾಗಿ ಪ್ರಾಚೀನ ಸಾಹಿತ್ಯ, ಶಾಸನಗಳಲ್ಲಿ ಉಲ್ಲೇಖಗಳಿವೆ. ಅಲ್ಲಿನ ದಾಖಲೆಗಳನ್ನು ಸಂಗ್ರಹಿಸಿ ಅಲ್ಲಿ ಬರುವ ತಳವಾರರ ಉಲ್ಲೇಖದ ಕುರಿತು ಚರ್ಚಿಸಲಾಗಿದೆ. ಅವುಗಳಲ್ಲಿ ಪ್ರಮುಖವಾಗಿ, ವಡ್ಡಾರಾಧನೆ, ಯಶೋಧರ ಚರಿತ್ರೆ, ನೇಮಿನಾಥ ಪುರಾಣ, ಅಜಿತ ತೀರ್ಥಂಕರ ಪುರಾಣ, ತೊರವೆ ರಾಮಾಯಣ, ಮೋಹನತರಂಗಿಣಿ, ಕರ್ಣಾಟ ಭಾರತ ಕಥಾಮಂಜರಿ, ಧರ್ಮನಾಥ ಪುರಾಣ, ಅನಂತನಾಥ ಪುರಾಣ, ಪಂಚತಂತ್ರ, ಬಸವ ಪುರಾಣ ಮುಂತಾದ ಪ್ರಾಚೀನ ಕನ್ನಡ ಗದ್ಯಪದ್ಯಗಳು ಹಾಗೂ ವಚನ, ಜಾನಪದ ಸಾಹಿತ್ಯದ ಹತ್ತಾರು ಬಗೆಗಳಾದ ಗಾದೆ, ಒಗಟು, ನುಡಿಗಟ್ಟು, ಜಾನಪದ ಗೀತೆ ಮುಂತಾದ ಪ್ರಕಾರಗಳಲ್ಲಿ ಬಂದಿರುವ ತಳವಾರರ ಉಲ್ಲೇಖದ ಸಂದರ್ಭದ ಕುರಿತಾದ ಮಾಹಿತಿಯನ್ನು ಸಂಗ್ರಹಿಸಿ ಚರ್ಚಿಸಲಾಗಿದೆ. ಇವುಗಳಲ್ಲಿ ಮುಖ್ಯವಾಗಿ ಉಲ್ಲೇಖಗೊಳ್ಳುವ ತಳವಾರ ತನ್ನ ಸೇವೆ ಮತ್ತು ಕರ್ತವ್ಯದ ಭಾಗವಾಗಿ ಆತನು ಇಡೀ ಸಮಾಜ, ಸಮುದಾಯದೊಂದಿಗೆ ಬೆರೆತುಕೊಂಡಿದ್ದ. ಆ ಕಾರಣದಿಂದ ಎಲ್ಲ ರೊಂದಿಗೆ ಅವಿನಾಭಾವ ಸಂಬಂಧ ಹೊಂದಿದ್ದ. ತಳವಾರ ವೃತ್ತಿ ಒಂದು ಗೌರವಯುತವಾದ ಹುದ್ದೆಯಾಗಿತ್ತು. ಇಂತಹ ಒಂದು ವೃತ್ತಿಯ ಘನತೆಯನ್ನು ಶಾಸನಗಳು, ಸಾಹಿತ್ಯದಲ್ಲಿ ಹೇಳಲಾಗಿದೆ.

ಆಯಗಾರರಲ್ಲಿ ತಳವಾರರು ಒಬ್ಬರಾಗಿದ್ದಾರೆ. ಇವರು ತಾವು ನೀಡುವ ಸೇವೆಗೆ ರೈತರಿಂದ ಇಂತಿಷ್ಟು ಪಾಲು ದವಸ, ಧಾನ್ಯದ ರೂಪದಲ್ಲಿ ಪಡೆಯುವ ಪ್ರತಿಫಲಕ್ಕೆ 'ಆಯ' ಎಂದು ಕರೆಯಲಾಗಿದೆ. ಆಯ ಪಡೆಯುವ ಹಕ್ಕು ಅಷ್ಟಾದಶ ವರ್ಗಗಳಿಗಿದೆ. ಇಂತಹ ಅಷ್ಟದಶ ವರ್ಗದಲ್ಲಿ ಬರುವ ತಳವಾರ ಒಬ್ಬ ಜವಾಬ್ದಾರಿಯುತ ಕರ್ತವ್ಯವನ್ನು ನಿರ್ವಹಿಸಿದ್ದಾನೆ. ಈ ಕಾರಣಕ್ಕಾಗಿ ಈತನನ್ನು ಒಬ್ಬ ಗ್ರಾಮಾಧಿಕಾರಿ ಎಂದು ಕರೆಯಲಾಗುತ್ತಿತ್ತು.

ತಳವಾರರ ಸಾಮಾಜಿಕ, ಕೌಟಂಬಿಕ, ಆರ್ಥಿಕ ವ್ಯವಸ್ಥೆಯನ್ನು ಕ್ಷೇತ್ರಕಾರ್ಯದ ಮಾಹಿತಿ ಆಧರಿಸಿ ವಿಶ್ಲೇಷಿಸಲಾಗಿದೆ. ಗ್ರಾಮದಲ್ಲಿ ನಡೆಯುವ ಸಮಸ್ತ ಕಾರ್ಯಗಳಿಗೂ ತಳವಾರನ ಉಪಸ್ಥಿತಿ ಮುಖ್ಯವಾಗಿರುತ್ತಿತ್ತು. ಅಲ್ಲಿ ಗೌಡನ ಆಜ್ಞೆಗಳನ್ನು ಚಾಚು ತಪ್ಪದೆ ಪಾಲಿಸುವ ತಳವಾರ, ಗ್ರಾಮದ ಜನರ ಆಶೋತ್ತರಗಳನ್ನು ಗೌಡನಿಗೆ ಮತ್ತು ಮೇಲಾಧಿಕಾರಿಗಳಿಗೆ ತಿಳಿಸುವವನಾಗಿದ್ದ. ಈ ಕಾರಣಕ್ಕಾಗಿ ತಳವಾರನೆಂದರೆ ಎಲ್ಲರಿಗೂ ಅಚ್ಚುಮೆಚ್ಚು. ಗ್ರಾಮದಲ್ಲಿನ ಎಲ್ಲಾ ಸಾಂಸ್ಕೃತಿಕ ಚಟುವಟಿಕೆಯಿಂದ ಹಿಡಿದು ಊರಲ್ಲಿ ಯಾರದೇ ಸಾವಾದರು ಅಲ್ಲಿ ತಳವಾರ ಪ್ರಮುಖವಾಗಿ ಹಾಜರಿದ್ದು, ಅಲ್ಲಿನ ಕಾರ್ಯಕ್ರಮಗಳನ್ನು ಯಶಸ್ವಿಗೊಳಿಸುತ್ತಿದ್ದ.

ತಳವಾರನಿಗೆ ಅವನದೇ ಆದ ಕುಲ, ಕುಟುಂಬ, ಸಂಸಾರವಿದೆ. ತಳವಾರಿಕೆ ಕೇವಲ ಒಂದೇ ಜಾತಿ, ಜನಾಂಗಕ್ಕೆ ಸೀಮಿತವಾಗಿಲ್ಲ. ಇಲ್ಲಿ ತಳವಾರಿಕೆಯಲ್ಲಿ ಹೆಚ್ಚಿನ ಪ್ರಮಾಣದಲ್ಲಿರುವ ಬೇಡನಾಯಕ ತಳವಾರರ ಹಿನ್ನೆಲೆಯಲ್ಲಿ ಸಾಂಸ್ಕೃತಿಕ ಅಂಶಗಳನ್ನು ಹೇಳಲಾಗಿದೆ. ತಳವಾರರ ಜೀವನಾವರ್ತನ ಆಚರಣೆಗಳಲ್ಲಿ ಅಂತಹ ವಿಶೇಷತೆಗಳೇನು ಇಲ್ಲ. ಹಿಂದೂ ಧರ್ಮದ

ಆದರ್ಶ ತತ್ವಗಳ ಅಡಿ ಅವರ ಆಚರಣೆ, ಸಂಪ್ರದಾಯಗಳಿರುವುದನ್ನು ನೋಡಬಹುದು. ಇನ್ನು ಇವರ ವಿಶೇಷ ಆಚರಣೆಗಳು, ಸಂಸ್ಕಾರಗಳು, ನಂಬಿಕೆ, ನಿಷೇಧಗಳು ಸ್ವಲ್ಪ ಭಿನ್ನವಾಗಿರುವುದನ್ನು ಗುರುತಿಸಬಹುದು.

ವಂಶಪಾರಂಪರೆಯಿಂದ ತಳವಾರಿಕೆ ವೃತ್ತಿಯನ್ನು ಮಾಡಿಕೊಂಡು ಬಂದಿದ್ದ ತಳವಾರರು ಸಮಕಾಲೀನ ಸಂದರ್ಭದಲ್ಲಿ ಬಡತನ, ದಾರಿದ್ರ್ಯ, ಶೋಷಣೆಯಿಂದ ಬಳಲುತ್ತಿರುವುದನ್ನು ನೋಡಬಹುದು. ಅದಕ್ಕೆ ಇವರ ಪ್ರಾಶಸ್ತ್ಯ ಕಡಿಮೆಯಾಗಿರುವುದು ಒಂದು ಕಡೆಯಾದರೆ, ಸಮಾಜ ಇವರನ್ನು ನೋಡುವ ದೃಷ್ಟಿಕೋನ ಬದಲಾಗಿದೆ. ಇವರ ಸೇವಾರ್ಥವಾಗಿ ನೀಡಿದ್ದ ಭೂಮಿಗಳೆಲ್ಲ ಹಿಡುವಳಿಗಳಾಗಿವೆ. ಇದರಿಂದ ಜೀವನ ನಿರ್ವಹಣೆ ಅಸಾಧ್ಯ. ಹೆಚ್ಚಿನ ಅನಕ್ಷರತೆ ಹೊಂದಿರುವ ತಳವಾರರು ವಸತಿ, ಆರೋಗ್ಯ ಮುಂತಾದ ಮೂಲಭೂತ ಸೌಲಭ್ಯಗಳನ್ನು ಹೊಂದಿರದೆ ಕಡುಬಡತನದಲ್ಲಿ ಜೀವನ ನಿರ್ವಹಿಸುತ್ತಿರುವುದನ್ನು ಕಾಣಬಹುದು.

## ಅಧ್ಯಯನ ಫಲಿತಗಳು

ವಿವಿಧ ಆಕರಗಳ ಮೂಲಕ ಸಂಗ್ರಹಿಸಿದ ಮಾಹಿತಿಗಳನ್ನು ಈ ಮಹಾಪ್ರಬಂಧವು ಅವಲಂಬಿಸಿದೆ. ತಳವಾರರ ವೃತ್ತಿ ಮತ್ತು ಸಾಮಾಜಿಕ, ಸಾಂಸ್ಕೃತಿಕ ವ್ಯವಸ್ಥೆಯನ್ನು ಆಧರಿಸಿ ತಳವಾರರು ಸಾಂಸ್ಕೃತಿಕ ಅಧ್ಯಯನ ಎಂಬ ಈ ಮಹಾಪ್ರಬಂಧವನ್ನು ಸಿದ್ಧಪಡಿಸಲಾಗಿದೆ. ಈ ಅಧ್ಯಯನದ ಪ್ರಮುಖ ಫಲಶೃತಿಯನ್ನು ಹೀಗೆ ಪಟ್ಟಿ ಮಾಡಬಹುದು.

೧. ತಳವಾರಿಕೆ ಪ್ರಾಚೀನ ವೃತ್ತಿಗಳಲ್ಲಿ ಒಂದಾಗಿದೆ.

೨. ತಳವಾರರಲ್ಲಿ ಅವರದೇ ಆದ ವೃತ್ತಿ ಕೌಶಲ್ಯತೆ ಮತ್ತು ಪರಂಪರೆ ವ್ಯವಸ್ಥಿತವಾಗಿ ರೂಪುಗೊಂಡಿದೆ.

೩. ತಳವಾರರ ಸೇವೆಗಳು ಸಮಾಜಮುಖಿಯಾದವುಗಳಾಗಿವೆ. ಇವರ ಸೇವೆ ಯಾವುದೇ ಸ್ಪರ್ಧೆಗಳಿಂದ ಕೂಡಿರದ ನಿಸ್ವಾರ್ಥ ಸೇವೆಯಾಗಿದೆ.

೪. ತಳವಾರಿಕೆ ಒಂದು ಗೌರವಯುತವಾದ ಹುದ್ದೆ, ಇದನ್ನು ಇಂದು ಕೀಳುಮಟ್ಟಕ್ಕೆ ಇಳಿಸಲಾಗಿದೆ.

೫. ಸಮಾಜ ಸೇವೆ ಮತ್ತು ರಕ್ಷಣಾಕಾರ್ಯದ ನಿರಂತರ ಚಲನಶೀಲ ಸಂಸ್ಕೃತಿಯನ್ನು ತಳವಾರರು ಹೊಂದಿದ್ದಾರೆ.

೬. ಸಾಮಾಜಿಕ ಸಹಭಾಗಿತ್ವದಲ್ಲಿ ಪ್ರಮುಖವಾಗಿರುವ ತಳವಾರರು ಆಯಾ ಸಮಾಜದ ಆಗು ಹೋಗುಗಳಲ್ಲಿ ಸಕ್ರಿಯ ಪಾಲುದಾರನಾಗಿರುತ್ತಿದ್ದ.

೭. ಗ್ರಾಮಾಡಳಿತ ವ್ಯವಸ್ಥೆಯಲ್ಲಿ ಗೌಡ, ಕುಲಕರ್ಣಿ, ತೋಟಿ, ತಳವಾರ ಎಂಬ ಆಡಳಿತ ವರ್ಗಗಳಿದ್ದವು. ಅಲ್ಲಿನ ನೀತಿ–ನಿರ್ಣಯಗಳನ್ನು ಜಾರಿಗೆ ತರುವ ಕಾರ್ಯವನ್ನು ತಳವಾರ ಮಾಡುತ್ತಿದ್ದ.

೮. ತಳವಾರರು ತಮ್ಮ ದೈಹಿಕ ಸಾಮರ್ಥ್ಯ ಮತ್ತು ವೃತ್ತಿ ಕೌಶಲ್ಯದಿಂದ ತಳವಾರಿಕೆಯನ್ನು ವಂಶಪಾರಂಪರ್ಯೆಯಿಂದ ಉಳಿಸಿಕೊಂಡು ಬಂದಿದ್ದಾರೆ.

೯. ಸಮಾಜದ ಅನಿಷ್ಠ ಪದ್ಧತಿಗಳನ್ನು ಹೋಗಲಾಡಿಸುವ ಜಾಗೃತ ಮನಸ್ಸಿದ್ದರು, ವ್ಯವಸ್ಥೆಗೆ ಬಲಿಯಾದ ತಳವಾರರು ಕೆಲವು ಅನಿಷ್ಠ ಪದ್ಧತಿಗಳನ್ನು ಆಚರಿಸುತ್ತಾ ಬಂದಿದ್ದಾರೆ.

೧೦. ಇಂದಿನ ಪೊಲೀಸ್ ಮತ್ತು ತಳವಾರನ ಕರ್ತವ್ಯದ ಸ್ವರೂಪದಲ್ಲಿ ಹಲವಾರು ಸಾಮ್ಯತೆಗಳಿವೆ. ಅಂದಿನ ತಳವಾರನ ಚಾವಡಿಯಂತೆಯೇ ಇಂದಿನ ಪೊಲೀಸ್ ಠಾಣೆ ರೂಪಗೊಂಡಿದೆ.

೧೧. ತಳವಾರರ ವೃತ್ತಿ ಮತ್ತು ಜೀವನದಲ್ಲಿ ಅನೇಕ ಸ್ಥಿತ್ಯಂತರಗಳಾಗಿವೆ. ಇವರ ಜೀವನಮಟ್ಟ ಈ ಹಿಂದೆಗಿಂತ ಇಂದು ಅಯೋಮಯವಾಗಿದೆ.

೧೨. ಕರ್ನಾಟಕದಲ್ಲಿ ಗ್ರಾಮಾಡಳಿತ ವ್ಯವಸ್ಥೆ ರದ್ದಾಗಿದ್ದರೂ ಸಹ ಗ್ರಾಮಗಳಲ್ಲಿ ತಳವಾರಿಕೆ ಇನ್ನು ಜೀವಂತವಾಗಿರುವುದನ್ನು ಕಾಣಬಹುದು.

**ಅನುಬಂಧಗಳು**

* ಪ್ರಶ್ನಾವಳಿಗಳು
* ವಕ್ತೃಗಳ ವಿವರ
* ಪರಾಮರ್ಶನ ಗ್ರಂಥಗಳು
* ಛಾಯಾಚಿತ್ರಗಳು

# ಕರ್ನಾಟಕ ತಳವಾರರ ಗ್ರಾಮವಾರು ವಿಸ್ತೃತ ಅಧ್ಯಯನ ಪ್ರಶ್ನಾವಳಿ ಮಾದರಿ

೧. ಮಾಹಿತಿದಾರರ ಹೆಸರು ಮತ್ತು ವಿಳಾಸ:

೨. ಆಯ್ಕೆ ಮಾಡಿದ ಊರು:

ತಾಲೂಕು:

ಜಿಲ್ಲೆ:

೩. ಊರಿನ ಒಟ್ಟು ಜನಸಂಖ್ಯೆ:

೪. ಊರಲ್ಲಿರುವ ಜಾತಿಗಳು:

೫. ಊರಲ್ಲಿರುವ ದೇವರು/ದೇವಸ್ಥಾನಗಳು:

೬. ಸ್ಥಳ ಐತಿಹ್ಯ:

೭. ತಳವಾರರ ಕುಟುಂಬ, ಕುಲ, ಬಂಧುತ್ವ ವ್ಯವಸ್ಥೆ:

೮. ತಳವಾರರ ಜನಸಂಖ್ಯೆ:

೯. ಮೂಲಸ್ಥಾನ:

೧೦. ಭಾಷೆ:

೧೧. ಕುಲ ಅಥವಾ ಉಪಕುಲ/ಗೋತ್ರಗಳು ಪದ ನಿಷ್ಪತ್ತಿಯ ಹಿಂದಿನ ನಂಬಿಕೆಗಳು, ಪುರಾಣ ಐತಿಹ್ಯ:

೧೨. ತಳವಾರರನ್ನು ಕುರಿತ ಕಥೆ ಹಾಗೂ ಹಾಡು, ಗಾದೆ, ನುಡಿಗಟ್ಟುಗಳು.:

೧೩. ತಳವಾರರನ್ನು ಕುರಿತ ಶಾಸನ, ಹಸ್ತಪ್ರತಿ, ವೀರಗಲ್ಲುಗಳು:

೧೪. ಚರಿತ್ರೆಗೆ ಸಂಬಂಧಿಸಿದಂತೆ ಸಮುದಾಯದ ಹೆಸರಿಗೆ ಸಂಬಂಧಿಸಿದಂತೆ ಐತಿಹ್ಯ:

೧೫. ಮನೆತನದ ಹೆಸರುಗಳು:

೧೬. ಕುಟುಂಬ ವ್ಯವಸ್ಥೆ:

* ವಿಭಕ್ತ * ಅವಿಭಕ್ತ * ಮಾತೃಪ್ರಧಾನ * ಪಿತೃಪ್ರಧಾನ

೧೭. ಮನೆತನದ ವೃತ್ತಿ ಮತ್ತು ಲಿಂಗವಾರು ಸ್ಥಾನಮಾನ:

* ಗ್ರಾಮ ಸಹಾಯಕ

* ಗೌಡ

* ಆಯಗಾರ

* ಸೂಲಗಿತ್ತಿ

* ಕೊಲುಕಾರ

* ವಾಲೇಕಾರ

* ತಳವಾರ

* ತಳವಾರಗಿತ್ತಿ

* ಕೊತ್ವಾಲ

* ಪೂಜಾರಿ

* ದಾಸಯ್ಯ

* ಇತರೆ

೧೮. ಕುಲ ಮತ್ತು ಉಪಕುಲ/ಗೋತ್ರ(ಬೆಡಗು):

೧೯. ಬೇಟೆ ಪದ್ಧತಿ:

೨೦. ಸಾಮಾಜಿಕ ಶ್ರೇಣೀಕರಣ ಮತ್ತು ತಳವಾರರ ಸ್ಥಾನಮಾನ:

೨೧. ಬುಡಕಟ್ಟೋ/ಅಲೆಮಾರಿ ಬುಡಕಟ್ಟೋ, ಪರಿವರ್ತಿತ ಜನಾಂಗವೋ?

೨೨. ಆಹಾರ ಪದ್ಧತಿ:

೨೩. ಬೇರೆಯವರು ತಳವಾರರನ್ನು ಕರೆಯುವ ಪದಗಳು:

೨೪. ವ್ಯಕ್ತಿ ನಾಮಗಳು:

೨೫. ಕುಲಕಸುಬುಗಳು/ವೃತ್ತಿ ಮತ್ತು ಪರಂಪರೆ, ಉಪವೃತ್ತಿಗಳ ನಿಷ್ಪತ್ತಿ:

೨೬. ಸಾಮಾಜಿಕ ಸ್ಥರವಿನ್ಯಾಸದಲ್ಲಿ ತಳವಾರರ ಸ್ಥಾನಮಾನ:

೨೭. ತಳವಾರರ ನಿಷೇಧ ಮತ್ತು ನಿರ್ಬಂಧಗಳು:

೨೮. ತಳವಾರರ ಜೀವನಾವರ್ತನ ಆಚರಣೆಗಳು:

* ಹುಟ್ಟು-ಜನನ
* ನಾಮಕರಣ
* ಜವುಳ
* ಋತುಮತಿ
* ಮದುವೆ
* ಮದ್ರೆ
* ಸೀಮಂತ
* ಹೆರಿಗೆ
* ಸಾವು-ಶವಸಂಸ್ಕಾರ
* ವೃತ್ತಿ ಆಚರಣೆಗಳು

೨೯. ತಳವಾರರ ಜೀವನ ಮಟ್ಟ:

೩೦. ನಂಬಿಕೆಗಳು ನಿಷೇಧಗಳು:

* ಪ್ರಾಕೃತಿಕ
* ಧಾರ್ಮಿಕ
* ಸಾಮಾಜಿಕ

೩೧. ಮನೋರಂಜನೆ ಮತ್ತು ಕೀಡೆಗಳು:

೩೨. ಸಾಮಾಜಿಕ ಸ್ಥಿತಿಗತಿ:

* ಬಾಲ್ಯವಿವಾಹ
* ಬಾಲ ಕಾರ್ಮಿಕರು
* ಅನಕ್ಷರತೆ
* ಮೂಢನಂಬಿಕೆಗಳು
* ಜಾತಿ ಪದ್ಧತಿ
* ನಿರುದ್ಯೋಗ

* ವಿಧವಾ ವಿವಾಹ

* ದೇವದಾಸಿ/ಸೂಳೆಗಾರಿಕೆ

೩೩. ಆರ್ಥಿಕ ಸ್ಥಿತಿಗತಿ:

* ಆದಾಯದ ಮೂಲ

* ಪಶುಪಾಲನೆ

* ಪಾರಂಪರಿಕ ವೃತ್ತಿಗಳು

* ಇತರೆ

೩೪. ರಾಜಕೀಯ ಸ್ಥಿತಿಗತಿ:

* ಪಂಚಾಯ್ತಿ ಕಟ್ಟೆ/ನ್ಯಾಯ ಪಂಚಾಯ್ತಿ

* ಸಮೂಹ ಸಹಭಾಗಿತ್ವ ಮತ್ತು ಸಂಘಟನೆ

೩೫. ಮೀಸಲಾತಿ/ಅಭಿವೃದ್ಧಿ ಯೋಜನೆಗಳು:

* ರಾಜ್ಯ ಸರ್ಕಾರದ ಅಭಿವೃದ್ಧಿ ಯೋಜನೆಗಳು

* ಕೇಂದ್ರಸರ್ಕಾರದ ಅಭಿವೃದ್ಧಿ ಯೋಜನೆಗಳು

* ಇತರೆ ಸಂಘ ಸಂಸ್ಥೆ, ಸಂಘಟನೆಗಳ ಅಭಿವೃದ್ಧಿ ಯೋಜನೆಗಳು

೩೬. ರಾಜಕೀಯ ಸಂಘಟನೆ, ಸಂಘ ಸಂಸ್ಥೆಗಳು:

೩೭. ದೌರ್ಜನ್ಯ ಮತ್ತು ಶೋಷಣೆ ವಿರುದ್ಧ ಹೋರಾಟಗಳು:

* ವೃತ್ತಿ ಸಂಬಂಧಿ ಹೋರಾಟಗಳು

* ಮೀಸಲಾತಿ ಸಂಬಂಧಿ ಹೋರಾಟಗಳು

೩೮. ಶೈಕ್ಷಣಿಕ ಪ್ರಗತಿ:

೩೯. ತಳವಾರ ಸಮುದಾಯದಲ್ಲಿನ ವಿವಿಧ ಕ್ಷೇತ್ರದಲ್ಲಿ ಸಾಧನೆಗೈದ ವ್ಯಕ್ತಿಗಳ ವಿವರ:

* ಶೈಕ್ಷಣಿಕ ಕ್ಷೇತ್ರ

* ಪ್ರೌಢಶಿಕ್ಷಣ

* ಪದವಿ

* ಉನ್ನತ

* ಸಾಹಿತ್ಯ ಕ್ಷೇತ್ರ

* ಸಾಹಿತಿಗಳು/ಕವಿಗಳು
* ಶಿಕ್ಷಣ ತಜ್ಞರು
* ಪಂಡಿತರು
* ಸಾಮಾಜಿಕ ಕ್ಷೇತ್ರ
* ಆಡಳಿತ ಕ್ಷೇತ್ರ
* ರಾಜಕೀಯ ಕ್ಷೇತ್ರ
* ಇತರೆ
* ವಿವಿಧ ಪ್ರಶಸ್ತಿ ಪುರಸ್ಕಾರಗಳು

೩೯. ವರ್ತಮಾನದಲ್ಲಾದ ಸ್ಥಿತ್ಯಂತರಗಳು:

* ಸಾಮಾಜಿಕ
* ಆರ್ಥಿಕ
* ಶೈಕ್ಷಣಿಕ
* ಧಾರ್ಮಿಕ

# ವಕ್ತೃಗಳ ವಿವರ

| ಕ್ರ.ಸಂ. | ಹೆಸರು | ವಯಸ್ಸು | ವೃತ್ತಿ | ಗ್ರಾಮ | ತಾಲೂಕು | ಜಿಲ್ಲೆ |
|---|---|---|---|---|---|---|
| ೧. | ತಳವಾರ ಅಡಿವೆಪ್ಪ | ೫೨ | ತಳವಾರಿಕೆ | ಕಿತ್ತನೂರು | ಹ.ಬೊ.ಹಳ್ಳಿ | ಬಳ್ಳಾರಿ |
| ೨. | ಬಾಲನ್ನರ ರಮೇಶ | ೪೫ | ವ್ಯವಸಾಯ | ಬನ್ನಿಕಲ್ಲು | ಹ.ಬೊ.ಹಳ್ಳಿ | ಬಳ್ಳಾರಿ |
| ೩. | ತಳವಾರ ಶಾಂತಪ್ಪ | ೫೨ | ವ್ಯವಸಾಯ | ಉಪ್ಪಿನಾಯಕನಹಳ್ಳಿ | ಹ.ಬೊ.ಹಳ್ಳಿ | ಬಳ್ಳಾರಿ |
| ೪. | ತಳವಾರ ಹುಲುಗಪ್ಪ | ೭೩ | ವ್ಯವಸಾಯ | ಮರಿಯಮ್ಮನಹಳ್ಳಿ | ಹೊಸಪೇಟೆ | ಬಳ್ಳಾರಿ |
| ೫. | ಅಂಕಮ್ಮನಾಳ ಕುಮಾರಸ್ವಾಮಿ | ೫೨ | ವ್ಯವಸಾಯ | ಗರಗ | ಹೊಸಪೇಟೆ | ಬಳ್ಳಾರಿ |
| ೬. | ತಳವಾರ ಪಂಪಣ್ಣ | ೬೫ | ತಳವಾರಿಕೆ | ಹಂಪಿ | ಹೊಸಪೇಟೆ | ಬಳ್ಳಾರಿ |
| ೭ | ನಾರಾಯಣಪ್ಪ ತಳವಾರ | ೬೪ | ಗ್ರಾಮ ಸಹಾಯಕ | ಸಂಡೂರು | ಸಂಡೂರು | ಬಳ್ಳಾರಿ |
| ೮. | ಹನುಮಂತಪ್ಪ ಕೋಲುಕಾರ | ೬೨ | ವ್ಯವಸಾಯ | ಸಿರಗುಪ್ಪ | ಸಿರಗುಪ್ಪ | ಬಳ್ಳಾರಿ |
| ೯. | ಭೀಮಪ್ಪ ಹನುಮಂತಪ್ಪ | ೫೦ | ವ್ಯವಸಾಯ | ಕಾಗನೂರು | ಹಡಗಲಿ | ಬಳ್ಳಾರಿ |

| ಕ್ರ.ಸಂ. | ಹೆಸರು | ವಯಸ್ಸು | ವೃತ್ತಿ | ಗ್ರಾಮ | ತಾಲೂಕು | ಜಿಲ್ಲೆ |
|---|---|---|---|---|---|---|
| ೧೦. | ಮಾರುತಿ ತಳವಾರ | ೫೦ | ವ್ಯಾಪಾರ | ಉತ್ತಂಗಿ | ಹಡಗಲಿ | ಬಳ್ಳಾರಿ |
| ೧೧. | ದ್ಯಾಮನಾಯಕ ವಾಲೇಕಾರ | ೭೨ | ವ್ಯವಸಾಯ | ಕೂಕನಪಳ್ಳಿ | ಕೊಪ್ಪಳ | ಕೊಪ್ಪಳ |
| ೧೨. | ಅಂದಪ್ಪ ರಾಮಪ್ಪ ತಳವಾರ | ೪೦ | ಗ್ರಾಮ ಸಹಾಯಕ | ಅಳವಂಡಿ | ಕೊಪ್ಪಳ | ಕೊಪ್ಪಳ |
| ೧೩. | ತಳವಾರ ಹನುಮಂತಪ್ಪ | ೭೫ | ನಿವೃತ್ತ ತಳವಾರ | ಹಲಗೇರಿ | ಕೊಪ್ಪಳ | ಕೊಪ್ಪಳ |
| ೧೪. | ಹನುಮಂತಪ್ಪ ಕಣಗೇರಿ | ೯೨ | ನಿವೃತ್ತ ತಳವಾರ | ಅಗಳಕೇರಿ | ಕೊಪ್ಪಳ | ಕೊಪ್ಪಳ |
| ೧೫. | ಲಿಂಗಪ್ಪ ತಳವಾರ | ೫೮ | ನಿವೃತ್ತ ತಳವಾರ | ಮಕರಬ್ಬಿ | ಗಂಗಾವತಿ | ಕೊಪ್ಪಳ |
| ೧೬. | ನಾಗಪ್ಪ ಪರಸಪ್ಪ ತಳವಾರ | ೪೮ | ತಳವಾರಿಕೆ | ಪುಟಗಮರಿ | ಯಲಬುರ್ಗಾ | ಕೊಪ್ಪಳ |
| ೧೭. | ಚನ್ನನಗೌಡ ಮಲ್ಲೇಶಗೌಡ | ೭೦ | ವ್ಯವಸಾಯ | ತುಳವಗೇರಿ | ಕುಷ್ಟಗಿ | ಕೊಪ್ಪಳ |
| ೧೮. | ರಾಘವೇಂದ್ರ ಪ್ರಹ್ಲಾದರಾವ್ | ೭೫ | ನಿವೃತ್ತ ಅಧಿಕಾರಿ | ಹುಯಿಲಗೊಳ | ಗದಗ | ಗದಗ |
| ೧೯. | ಸಹದೇವಪ್ಪ ನಿಂಗಪ್ಪ ಬಗನಾಳ | ೫೨ | ವಾಲೀಕಾರಿಕೆ | ಬಳಗಾನೂರು | ಗದಗ | ಗದಗ |
| ೨೦. | ಸೋಮನಾಯಕ ಬಿಳಿಕುದುರೆ | ೭೫ | ನಿವೃತ್ತ ವಾಲೇಕಾರ | ಲಕ್ಕುಂಡಿ | ಗದಗ | ಗದಗ |
| ೨೧. | ವಿರೂಪಾಕ್ಷಪ್ಪ | ೭೨ | ವ್ಯವಸಾಯ | ಡಂಬಳ | ಗದಗ | ಗದಗ |

| ಕ್ರ.ಸಂ. | ಹೆಸರು | ವಯಸ್ಸು | ವೃತ್ತಿ | ಗ್ರಾಮ | ತಾಲೂಕು | ಜಿಲ್ಲೆ |
|---|---|---|---|---|---|---|
| ೨೨. | ಭೋಜಪ್ಪ ನಿಂಗಪ್ಪ ತಳವಾರ | ೪೫ | ಗ್ರಾಮ ಸಹಾಯಕ | ಕಲಕೇರಿ | ಮುಂಡರಗಿ | ಗದಗ |
| ೨೩. | ಕೆಂಚಪ್ಪ ಈರಪ್ಪ ಮಾದಣ್ಣವರ | ೭೨ | ಮನೆಕೆಲಸ | ಅಣ್ಣಿಗೇರಿ | ನವಲಗುಂದ | ಗದಗ |
| ೨೪. | ಬಸಪ್ಪ ರಾಮಪ್ಪ ತಳವಾರ | ೬೦ | ಗ್ರಾಮ ಸಹಾಯಕ | ಮಾಚೇನಹಳ್ಳಿ | ಶಿರಹಟ್ಟಿ | ಗದಗ |
| ೨೫. | ಕನಕಪ್ಪ ಪಕ್ಕಿರಪ್ಪ ಆದವಾನಿ | ೮೩ | ನಿವೃತ್ತ ತಳವಾರ | ಬೆಳವಣಿಕೆ | ರೋಣ | ಗದಗ |
| ೨೬. | ಹೂವಪ್ಪ ಶರಣಪ್ಪ ಹಂಡಿ | ೪೮ | ವ್ಯವಸಾಯ | ತರಳಿಹಾಳ | ರೋಣ | ಗದಗ |
| ೨೭. | ಭೀಮಪ್ಪ ಫಕ್ಕಿರಪ್ಪ ಚಿಂದಿ | ೭೨ | ನಿವೃತ್ತ ತಳವಾರ | ಅಮ್ಮಿನಬಾವಿ | ಧಾರವಾಡ | ಧಾರವಾಡ |
| ೨೮. | ಮಲ್ಲೇಶಪ್ಪ ಫಕ್ಕೀರಪ್ಪ ತುರಮರಿ | ೪೦ | ಗ್ರಾಮ ಸಹಾಯಕ | ಸಿಗನಹಳ್ಳಿ(ಗರಗ) | ಧಾರವಾಡ | ಧಾರವಾಡ |
| ೨೯. | ಅಡಿವೆಪ್ಪ ಬಸಪ್ಪ | ೫೦ | ಗ್ರಾಮ ಸಹಾಯಕ | ಗರಗ | ಧಾರವಾಡ | ಧಾರವಾಡ |
| ೩೦. | ಸಿದ್ಧಪ್ಪ ಪಕ್ಕಿರಪ್ಪ | ೭೦ | ನಿವೃತ್ತ ವಾಲೇಕಾರ | ಶಿರೂರು | ನವಲಗುಂದ | ಧಾರವಾಡ |
| ೩೧. | ಮಹಾದೇವಪ್ಪ ಸೊರಟಿ | ೬೮ | ನಿವೃತ್ತ ತಳವಾರ | ಸಂಸೆ | ಮುಂಡಗೊಡ | ಧಾರವಾಡ |
| ೩೨. | ಬಸಪ್ಪ ಅಮ್ಮೇಲನವರ | ೬೦ | ನಿವೃತ್ತ ವಾಲೇಕಾರ | ಆಯಟ್ಟಿ | ಗರಗ | ಧಾರವಾಡ |
| ೩೩. | ಭೀಮನಗೌಡ ಪಾಟೀಲ | ೬೦ | ವ್ಯವಸಾಯ | ಬಿಸಿಲದಿನ್ನಿ | ಹುನಗುಂದ | ಬಾಗಲಕೋಟೆ |

| ಕ್ರ.ಸಂ. | ಹೆಸರು | ವಯಸ್ಸು | ವೃತ್ತಿ | ಗ್ರಾಮ | ತಾಲೂಕು | ಜಿಲ್ಲೆ |
|---|---|---|---|---|---|---|
| ೩೪. | ಯಮುನಪ್ಪ ಹನುಮಪ್ಪ ಕತ್ತಿ | ೬೫ | ಗ್ರಾಮ ಸಹಾಯಕ | ಅಮ್ಮೀನಗಡ | ಹುನಗುಂದ | ಬಾಗಲಕೋಟೆ |
| ೩೫. | ರಾಮಪ್ಪ ಪೂಜಾರ | ೪೦ | ಪೂಜಾರಿ | ಬಸವನಾಳ | ಹುನಗುಂದ | ಬಾಗಲಕೋಟೆ |
| ೩೬. | ಕರಿಯಪ್ಪ ಮಾಯಪ್ಪ ನಾಯಕರ್ | ೭೮ | ನಿವೃತ್ತ ತಳವಾರ | ಬಾದಾಮಿ | ಬಾದಾಮಿ | ಬಾಗಲಕೋಟೆ |
| ೩೭. | ಪರಸಪ್ಪ ಸಾಬು ಗದ್ದಿಹಾಳು | ೫೩ | ದಳಪತಿ | ಬಿದರಿ | ಜಮಖಂಡಿ | ಬಾಗಲಕೋಟೆ |
| ೩೮. | ಗೋಲಶೆಟ್ಟಿ ಶ್ರೀಶೈಲ | ೫೬ | ಸಾಹಿತಿ | ಹಲಗಲಿ | ಮುಧೋಳ | ಬಾಗಲಕೋಟೆ |
| ೩೯. | ಕನಕರೆಡ್ಡಿ | ೬೨ | ವ್ಯವಸಾಯ | ತಾಳಿಕೋಟೆ | ಮುದ್ದೇಬಿಹಾಳ | ವಿಜಯಪುರ |
| ೪೦. | ಚಂದ್ರಪ್ಪ ಭೀಮಪ್ಪ ಕೋಲುಕಾರ | ೭೮ | ನಿವೃತ್ತ ವಾಲೇಕಾರ | ಹೂವಿನ ಹಿಪ್ಪರಗಿ | ಬಸವನ ಬಾಗೇವಾಡಿ | ವಿಜಯಪುರ |
| ೪೧. | ರಾಜಸಾಬ | ೫೦ | ಪೋಸ್ಟ್‌ಮ್ಯಾನ್ | ಮದಿರಿ | ಇಂಡಿ | ವಿಜಯಪುರ |
| ೪೨. | ಕಾಶಿ ನಿಂಗಣ್ಣ ಮೆಟಗಾರ | ೭೦ | ಗ್ರಾಮಮುಖಂಡ | ದೇವರ ಹಿಪ್ಪರಗಿ | ಸಿಂದಗಿ | ವಿಜಯಪುರ |
| ೪೩. | ಪ್ರಮೋದ | ೪೬ | ಉಪನ್ಯಾಸಕ | ತಾಳಿಕೋಟೆ | ಮುದ್ದೇಬಿಹಾಳ | ವಿಜಯಪುರ |
| ೪೪. | ಎಂ.ಎ.ಜಾಮಾದಾರ | ೬೨ | ವಿಲೇಜ್ ಅಕೋಟೆಂಟ್ | ಅಥಣಿ | ಅಥಣಿ | ಬೆಳಗಾವಿ |
| ೪೫. | ಲಕ್ಷ್ಮಪ್ಪ ಯಮನಪ್ಪ ಕನಕನ್ನವರ | ೬೫ | ವಾಲೇಕಾರ | ಗೊಡಚಿ | ರಾಮದುರ್ಗ | ಬೆಳಗಾವಿ |

| ಕ್ರ.ಸಂ. | ಹೆಸರು | ವಯಸ್ಸು | ವೃತ್ತಿ | ಗ್ರಾಮ | ತಾಲೂಕು | ಜಿಲ್ಲೆ |
|---|---|---|---|---|---|---|
| ೪೬. | ಗೋವಿಂದಪ್ಪ ಹನುಮಂತಪ್ಪ ತಳವಾರ | ೬೨ | ಚಾಕರಿಕೆ | ಕೌಜಲಗಿ | ಕೌಜಲಗಿ | ಬೆಳಗಾವಿ |
| ೪೭. | ಮಹಾಂತೇಶ ಸಂಗಪ್ಪ ಕೋಲುಕಾರ | ೩೮ | ಗ್ರಾಮಸಹಾಯಕ | ಕಿತ್ತೂರು | ಬೈಲಹೊಂಗಲ | ಬೆಳಗಾವಿ |
| ೪೮. | ನಾಡಗೌಡ | ೭೮ | ನಿವೃತ್ತ ಶಿಕ್ಷಕ | ಕಿತ್ತೂರು | ಬೈಲಹೊಂಗಲ | ಬೆಳಗಾವಿ |
| ೪೯. | ಭೀಮಪ್ಪ ತಳವಾರ | ೬೬ | ವ್ಯವಸಾಯ | ಕೆ.ಕೆ.ಕೊಪ್ಪ | ಬೆಳಗಾವಿ | ಬೆಳಗಾವಿ |
| ೫೦. | ಯಲ್ಲಪ್ಪ ನಾಯಕ | ೩೪ | ಸಂಶೋಧನಾ ವಿದ್ಯಾರ್ಥಿ | ಗುಡಾಳ್ಳಕೇರಿ ಸುರಪುರ | ಶೋರಾಪುರ | ಯಾದಗಿರಿ |
| ೫೧. | ಸುಸ್ಸೆನಪ್ಪ | ೬೮ | ಮಾಜಿತಳವಾರ | ಗಂಗನಾಳ | ಶೋರಾಪುರ | ಯಾದಗಿರಿ |
| ೫೨. | ಎಂ.ಪಿ.ನಾಯಕ | ೪೦ | ವ್ಯವಸಾಯ | ಪುಲ್‌ದಿನ್ನಿ | ಸಿಂಧನೂರು | ರಾಯಚೂರು |
| ೫೩. | ಪಕ್ಕಿರಪ್ಪ ತಳವಾರ | ೫೦ | ಗ್ರಾಮ ಸಹಾಯಕ | ಜಾನೆಕಲ್ಲು | ಸಿಂಧನೂರು | ರಾಯಚೂರು |
| ೫೪. | ನಾಗಪ್ಪ ಗುಂಜಳ್ಳಿ | ೬೦ | ವ್ಯವಸಾಯ | ಗುಂಜಳ್ಳಿ ಹೊಸಳ್ಳಿ | ಸಿಂಧನೂರು | ರಾಯಚೂರು |
| ೫೫. | ಬಸವರಾಜ ನಾಯಕ | ೫೨ | ಗ್ರಾ.ಪಂ.ಸದಸ್ಯ | ಜಾಲಹಳ್ಳಿ | ದೇವದುರ್ಗ | ರಾಯಚೂರು |
| ೫೬. | ಹುಸೇನಪ್ಪನಾಯಕ | ೫೬ | ಎ.ಎಸ್.ಐ. | ದೇವನಪಲ್ಲಿ | ರಾಯಚೂರು | ರಾಯಚೂರು |
| ೫೭. | ನಾಮದೇವಗೌಡ | ೭೨ | ವ್ಯಾಪಾರಿ | ಉಸುಕಿಹಾಳ್ | ಲಿಂಗಸಗೂರು | ರಾಯಚೂರು |

| ಕ್ರ.ಸಂ. | ಹೆಸರು | ವಯಸ್ಸು | ವೃತ್ತಿ | ಗ್ರಾಮ | ತಾಲೂಕು | ಜಿಲ್ಲೆ |
|---|---|---|---|---|---|---|
| ೫೬. | ಬಸವರಾಜಪ್ಪ ಜಾಗಟಗರ | ೮೨ | ರಾಜಮನೆತನದ ಪೂಜಾರಿ | ಗುರಗುಂಟ | ಲಿಂಗಸನೂರು | ರಾಯಚೂರು |
| ೫೭. | ಬಾಬುಪೂಜಾರಿ | ೩೬ | ಸಂಶೋಧನಾ ವಿದ್ಯಾರ್ಥಿ | ಹಾಗರಗುಂಡಗಿ | ಕಲಬುರ್ಗಿ | ಕಲಬುರ್ಗಿ |
| ೫೮. | ಸುರೇಶ ವಾಲೀಕಾರ | ೪೦ | ವಾಲೇಕಾರ | ಪೇಟಶಿರೂರು | ಚಿತ್ತಾಪುರ | ಕಲಬುರ್ಗಿ |
| ೫೯. | ಮಲ್ಲಯ್ಯ | ೭೨ | ನಿವೃತ್ತ ತಳವಾರ | ಮಲ್ಲವಳ್ಳಿ | ಜೇವರ್ಗಿ | ಕಲಬುರ್ಗಿ |
| ೬೦. | ರತ್ನಾಕರರೆಡ್ಡಿ ಹೊಸಮನಿ | ೪೦ | ಸಂಶೋಧಕರು | ಉಡುಮನಹಳ್ಳಿ | ಹುಮ್ನಾಬಾದ್ | ಬೀದರ್ |
| ೬೧. | ಮಂಜುನಾಥ ಟಿ.ಎಸ್ | ೩೬ | ಶಿಕ್ಷಕ | ಔರಾದ್ | ಔರಾದ್ | ಬೀದರ್ |
| ೬೨. | ಎ.ಸಿ.ಹರಿಹರ | ೬೮ | ನಿವೃತ್ತ ಅಧಿಕಾರಿ | ಗುತ್ತಲ | ರಾಣಿಬೆನ್ನೂರು | ಹಾವೇರಿ |
| ೬೩. | ಹನುಮಂತಪ್ಪ ಕೇತಾಳಿ | ೭೨ | ವ್ಯವಸಾಯ | ಕುಸಗೂರು | ರಾಣಿಬೆನ್ನೂರು | ಹಾವೇರಿ |
| ೬೪. | ಮಾಲತೇಶ ಅಂಗೂರ | ೫೨ | ಪತ್ರಕರ್ತ | ಹಾವೇರಿ | ಹಾವೇರಿ | ಹಾವೇರಿ |
| ೬೫. | ಹೊನ್ನಪ್ಪ ಯಲ್ಲಪ್ಪ | ೬೨ | ಸಮಾಜಸೇವಕ | ಕರ್ಜಗಿ | ಸವಣೂರು | ಹಾವೇರಿ |
| ೬೬. | ಪ್ರಕಾಶ | ೩೬ | ಸಂಶೋಧಕರು | ಮುಳತಳ್ಳಿ | ರಾಣಿಬೆನ್ನೂರು | ಹಾವೇರಿ |

# ಪರಾಮರ್ಶನ ಗ್ರಂಥಗಳು


೧. ಅರವಿಂದ ಮಾಲಗತ್ತಿ(ಸಂ), **ಕನ್ನಡ ವಿಷಯ ವಿಶ್ವಕೋಶ ಜಾನಪದ,** ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, ೨೦೦೬.

೨. ಅರ್ಜುನ ಗೊಳಸಂಗಿ, **ದಲಿತರ ಬದುಕು ಮತ್ತು ಸಂಸ್ಕೃತಿ: ಜಾನಪದಿಯ ಅಧ್ಯಯನ,** ವಿಮೋಚನ ಪ್ರಕಾಶನ, ಅಥಣಿ, ೨೦೦೦.

೩. ಅಭಯ ಕೆ. ಕೌಕ್ರಾಡಿ, **ಮುಗೇರರು ಜನಾಂಗ ಜನಪದ ಅಧ್ಯಯನ,** ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೭೭.

೪. ಅರವಿಂದ ಮಾಲಗತ್ತಿ, **ಜಾನಪದ ವ್ಯಾಸಂಗ,** ಶೈಲಾ ಪ್ರಕಾಶನ, ಮುದ್ದೇಬಿಹಾಳ, ೧೯೯೫.

೫. ಅಮರೇಶ ಯತಗಲ್, **ವಾಲ್ಮೀಕಿ ಸಮುದಾಯ ಮತ್ತು ಚರಿತ್ರೆ,** ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ, ೨೦೦೮.

೬. ಅಂಗಡಿ ಎಸ್.ಎಸ್., **ಕರ್ನಾಟಕ ಬುಡಕಟ್ಟು ಭಾಷೆ,** ಸೃಷ್ಟಿ ಪಬ್ಲಿಕೇಷನ್, ಬೆಂಗಳೂರು, ೨೦೦೮.

೭. ಅಂಗಡಿ ಎಸ್.ಎಸ್., **ಸರಳ ಯಶೋಧರ ಚರಿತೆ,** ಮಂಗಳಾ ಪ್ರಕಾಶನ, ಹೊಸಪೇಟೆ, ೨೦೧೨.

೮. ಅಂಗಡಿ ಎಸ್.ಎಸ್., **ಸಂಕೀರ್ಣ ವೃತ್ತಿ ಪದಕೋಶ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦.

೯. ಅನಂತರಾಮಯ್ಯ ಆರ್.ಎಲ್., **ವಡ್ಡಾರಾಧನ ಕಥಾಲೋಕ,** ಅಪರ್ಣ ಪ್ರಕಾಶನ, ಮೈಸೂರು, ೧೯೭೫.

೧೦. ಕಲಬುರ್ಗಿ ಎಂ.ಎಂ., **ಕರ್ನಾಟಕದ ಕೈಫಿಯತ್ತುಗಳು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೪.

೧೧. ಕಲಬುರ್ಗಿ ಎಂ.ಎಂ., **ಉತ್ತರ ಕರ್ನಾಟಕದ ಜಾನಪದ ಸಾಹಿತ್ಯ,** ಸಮಾಜ ಪುಸ್ತಕಾಲಯ, ಧಾರವಾಡ, ೧೯೭೯.

೧೨. ಕಾಪಸೆ ರೇವಪ್ಪ, **ಮಲ್ಲಿಗೆದಂಡೆ,** ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೧೯೯೪.

೧೩. ಕೃಷ್ಣಮೂರ್ತಿ ಕೆ.ಎಸ್.(ಅನು), **ತೊರೆವೆ ರಾಮಾಯಣ,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೨.

೧೪. **ಕರ್ನಾಟಕ ಜನಪದ ಕಲೆಗಳ ವಿಶ್ವಕೋಶ,** ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೫. ಕಪಟರಾಳ ಕೃಷ್ಣರಾವ್, **ಸುರಪುರ ಸಂಸ್ಥಾನ ಇತಿಹಾಸ,** ಮಂಜುನಾಥ ಪ್ರಕಾಶನ, ಬೆಂಗಳೂರು, ೧೯೭೭.

೧೬. ಕುವೆಂಪು(ಸಂ), **ಕರ್ಣಾಟ ಭಾರತ ಕಥಾಮಂಜರಿ,** ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೮೮.

೧೭. ಕೃಷ್ಣಕುಮಾರ ಸಿ.ಪಿ.(ಸಂ), **ಜನ್ನ ಸಂಪುಟ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭.

೧೮. ಕೆಳದಿ ಗುಂಡಾ ಜೋಯಿಸ(ಅನು), **ಲಿಂಗಣ್ಣ ಕವಿಯ ಕೆಳದಿ ನೃಪವಿಜಯ,** ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು, ೧೯೯೭.

೧೯. ಖಂಡೋಬ ಪಿ.ಕೆ., **ಕರ್ನಾಟಕ ಲಂಬಾಣಿ ಜನಾಂಗದ ಸಾಂಸ್ಕೃತಿಕ ಅಧ್ಯಯನ,** ತೇಜಸಿಂಗ ರಾಥೋಡ್ ಮೆಮೊರಿಯಲ್ ಟ್ರಸ್ಟ್, ಗುಲ್ಬರ್ಗಾ, ೧೯೯೧.

೨೦. ಗದ್ದಗಿ ಮಠ ಬಿ.ಎಸ್., **ಕನ್ನಡ ಜಾನಪದ ಗೀತೆಗಳು,** ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೫೪.

೨೧. ಗೋವಿಂದರಾಜ್, ಚಿನ್ನದೇವಿ ಅಗ್ರಹಾರ: ಜಾನಪದೀಯ ಅಧ್ಯಯನ

೨೨. ಚಂದ್ರಶೇಖರ ಐತಾಳ(ಅನು), **ದುರ್ಗಸಿಂಹ ಕವಿಯ ಕರ್ನಾಟಕ ಪಂಚತಂತ್ರ,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೯.

೨೩. ಚಿದಾನಂದಮೂರ್ತಿ ಎಂ., **ಗ್ರಾಮೀಣ,** ಬಾಪ್ಕೊ ಪ್ರಕಾಶನ, ಬೆಂಗಳೂರು, ೧೯೭೦.

೨೪. ಚಿದಾನಂದಮೂರ್ತಿ ಎಂ., **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ**(೩ನೇ ಮುದ್ರಣ), ಸ್ವಪ್ನ, ಬೆಂಗಳೂರು, ೨೦೦೨.

೨೫. ಜವರೇಗೌಡ ದೇ., **ಜಾನಪದ ಅಧ್ಯಯನ,** ಚೇತನ ಬುಕ್‌ಹೌಸ್, ಮೈಸೂರು, ೧೯೯೧.

೨೬. ತಪಸ್ವಿಕುಮಾರ್, **ಕನ್ನಡ ಒಗಟುಗಳು,** ಪ್ರಸಾರಾಂಗ, ಮಾನಸ ಗಂಗೋತ್ರಿ, ಮೈಸೂರು, ೧೯೭೬.

೨೭. ತೆಕ್ಕಂಜ ಗೋಪಾಲಕೃಷ್ಣ ಭಟ್ಟ(ಅನು), **ಜನ್ನ ಕವಿಯ ಯಶೋಧರ ಚರಿತೆ,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೧೩.

೨೮. ದುರುಗಪ್ಪ ಎಂ.ಕೆ., **ವಿಜಯನಗರೋತ್ತರ ಬೇಡ ಜನಾಂಗ,** ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ, ೨೦೧೦

೨೯. ನರಸಿಂಹಾಚಾರ್ಯ ಎಸ್.ಜಿ.(ಸಂ), **ಅಭಿನವ ದಶಕುಮಾರ ಚರಿತೆ,** ಕಾವ್ಯ ಕಲಾನಿಧಿ, ಮೈಸೂರು, ೧೯೦೨.

೩೦. ನರಸಿಂಹಾಚಾರ್ಯ ಎಸ್.ಜಿ.(ಸಂ), **ಚಿಕದೇವರಾಯ ವಿಜಯ,** ಕರ್ನಾಟಕ ಕಾವ್ಯಮಂಜರಿ, ಮೈಸೂರು, ೧೮೯೬.

೩೧. ನರಸಿಂಹಾಚಾರ್ ಡಿ.ಎಲ್.(ಸಂ), **ವಡ್ಡಾರಾಧನೆ,** ಡಿ.ವಿ.ಕೆ.ಮೂರ್ತಿ ಪ್ರಕಾಶನ, ಮೈಸೂರು, ೨೦೧೪.

೩೨. ನಂಜುಂಡ ಸ್ವಾಮಿ ಎ.ಎಸ್., **ಪಾಳೆಯಗಾರರು ಮತ್ತು ಒಡೆಯರ ಇತಿಹಾಸ,** ೨೦೧೨.

೩೩. ನಾಗೇಶ ಎಚ್.ವಿ., **ಗ್ರಾಮ ವ್ಯಾಸಂಗ,** ಚಂದ್ರನಾಥ ಪ್ರಕಾಶನ, ಧಾರವಾಡ, ೧೯೭೧.

೩೪. ನಾಗರಾಜ ಎಂ., **ಕರ್ನಾಟಕ ಮಡಿವಾಳರು,** ನಾಗಾರ್ಜುನ ಎಜುಕೇಷನಲ್ ಟ್ರಸ್ಟ್, ಬೆಂಗಳೂರು, ೨೦೦೭.

೩೫. ನಾಗೇಂದ್ರಪ್ಪ ಕೆ., **ವಡ್ಡಾರಾಧನೆಯ ಕಥಾಚಿತ್ರ,** ಸಂವಹಣ ಪ್ರಕಾಶನ, ಮೈಸೂರು, ೧೯೯೭.

೩೬. ನಾಗಯ್ಯ ಜೆ.ಎಂ., **ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸ,** ಲೋಹಿಯಾ ಪ್ರಕಾಶನ, ಬಳ್ಳಾರಿ, ೨೦೦೨.

೩೭. ನಾಗೇಗೌಡ ಎಚ್.ಎಲ್.(ಸಂ), **ಪ್ರವಾಸಿ ಕಂಡು ಇಂಡಿಯಾ ಭಾಗ-೨.**

೩೮. ನೇಗಿನಹಾಳ ಎಂ.ಬಿ., **ನೇಗಿನಹಾಳ ಪ್ರಬಂಧಗಳು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯.

೩೯. ಪರಮಶಿವಯ್ಯ ಜಿ.ಶಂ., **ಕನ್ನಡ ವೃತ್ತಿಗಾಯಕ ಕಾವ್ಯಗಳು,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೭೧.

೪೦. ಪ್ರಭಾಕರ ಎ.ಎಸ್., **ಬುಡಕಟ್ಟು ಬದುಕಿನ ಸ್ಥಿತ್ಯಂತರಗಳು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦.

೪೧. ಪುಟ್ಟಣ್ಣ ಎಂ.ಎಸ್., **ಚಿತ್ರದುರ್ಗದ ಪಾಳೆಯಗಾರರು,** ಮದಕರಿ ಪ್ರಕಾಶನ, ಚಿತ್ರದುರ್ಗ, ೧೯೯೮.

೪೨. ಪೂಜಾರ ವ್ಹಿ.ಜಿ., **ಹೂಗಾರ ಸಮಾಜ: ಒಂದು ಸಾಂಸ್ಕೃತಿಕ ಅಧ್ಯಯನ,** ಪಟ್ಟಲಿಂಗೇಶ್ವರ ಪ್ರಕಾಶನ, ಕಲಬುರ್ಗಿ, ೨೦೦೫.

೪೩. ಭೈರೇಗೌಡ ಎಂ., ಇರುಳಿಗರು: **ಜಾನಪದ ಅಧ್ಯಯನ,** ಸಿ.ವಿ.ಜಿ. ಪಬ್ಲಿಕೇಷನ್, ಬೆಂಗಳೂರು, ೨೦೦೦.

೪೪. ಮಂಜುನಾಥ ಬೇವಿನಕಟ್ಟೆ (ಸಂ), **ವ್ಯಾಧ ಚರಿತ್ರೆ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭.

೪೫. ಮಲ್ಲಿಕಾರ್ಜುನ ಕೆ., ವಿ.ಎಸ್.ಮಾಳಿ(ಸಂ), **ಡಾ.ಬಿ.ಆರ್.ಹಿರೇಮಠರ ಶಾಸನ ಅಧ್ಯಯನ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೨.

೪೬. ಮಲ್ಲಾಪುರ ಬ್ಹಿ.ವಿ., **ಜಾನಪದ ಸಂಪದ,** ಕುಮಾರ ವೀರೇಶ ಪ್ರಕಾಶನ, ಕಲಬುರ್ಗಿ.

೪೭. ಮಲ್ಲಿಕಾರ್ಜುನ ಹೊರಪಾಳ್ಯ, **ಕೃಷಿ ಆಚರಣೆ,** ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೮.

೪೮. ಮುನಿಸ್ವಾಮಯ್ಯ ಕೆ.ಟಿ., **ಮಹರ್ಷಿ ವಾಲ್ಮೀಕಿ ಮತ್ತು ನಾಯಕ ಜನಾಂಗದ ಇತಿಹಾಸ(೨ನೇ ಮುದ್ರಣ),** ನಾಯಕರ ಕ್ಷೇಮಾಭಿವೃದ್ಧಿ ಸಂಘ, ನಜಾರಬಾದ್, ಮೈಸೂರು, ೧೯೯೫.

೪೯. ಮೈತ್ರಿ ಕೆ.ಎಂ., **ಬುಡಕಟ್ಟು ಕುಲ ಕಸುಬುಗಳು,** ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨.

೫೦. ರಂಗನಾಯಕ ವಿ., **ವಾಲ್ಮೀಕಿ ವಂಶವಾಹಿನಿ(೨ನೇ ಮುದ್ರಣ) ಭಾಗ-೧,** ಪಾವಗಡ, ೧೯೮೭.

೫೧. ರಾಜನ ರಾಜಣ್ಣ, **ನಾಯಕ ಜನಾಂಗದ ಇತಿಹಾಸ,** ಚಳ್ಳಕೆರೆ, ೧೯೮೨.

೫೨. ರಾಗೌ, **ಜಾನಪದ ಸಂಶೋಧನ,** ತನುಮನ ಪ್ರಕಾಶನ, ಮೈಸೂರು, ೨೦೧೨.

೫೩. ರಾಮಣ್ಣ ಕ್ಯಾತನಹಳ್ಳಿ, **ಫ್ಲೀಟರು ಸಂಗ್ರಹಿಸಿದ ಲಾವಣಿಗಳು,** ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, ೧೯೯೧.

೫೪. ಲಕ್ಕಪ್ಪಗೌಡ, ಎಚ್.ಜಿ., **ಕರ್ನಾಟಕ ಗಿರಿಜನ ಸಂಸ್ಕೃತಿ,** ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೫೫. ಲಕ್ಷ್ಮಣ ತೆಲಗಾವಿ(ಸಂ), **ಹರತಿಸಿರಿ,** ವಾಲ್ಮೀಕಿ ಸಾಹಿತ್ಯ ಸಂಪದ, ಹರತಿಕೋಟೆ, ೧೯೮೭.

೫೬. ಲಕ್ಷ್ಮಣ್ ತೆಲಗಾವಿ, ಡಾ.ಎಂ.ವಿ.ಶ್ರೀನಿವಾಸ(ಸಂ), **ಹುಲ್ಲೂರು ಶ್ರೀನಿವಾಸ್ ಜೋಯಿಸರ ಐತಿಹಾಸಿಕ ಲೇಖನಗಳು,** ಹು.ಶ್ರೀ.ಜೋ. ಗ್ರಂಥ, ಪ್ರಸಮಿತಿ, ಚಿತ್ರದುರ್ಗ, ೧೯೯೭.

೫೭. ಲಕ್ಷ್ಮಣ್ ತೆಲಗಾವಿ, **ಮೌರ್ಯ ಮತ್ತು ಶಾತವಾಹನರ ಯುಗ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪.

೫೮. ವಸುಂಧರಾ ಫಿಲಿಯೋಜ, **ಅಳಿದುಳಿದ ಹಂಪೆ(ದ್ವಿತೀಯ ಮುದ್ರಣ),** ಪ್ರೇಮಸಾಯಿ ಪ್ರಕಾಶನ, ಬೆಂಗಳೂರು, ೧೯೯೨.

೫೯. ವಿರೂಪಾಕ್ಷಿ ಪೂಜಾರಹಳ್ಳಿ, **ಕರ್ನಾಟಕದಲ್ಲಿ ತಳವಾರಿಕೆ,** ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬.

೬೦. ವಿರೂಪಾಕ್ಷಿ ಪೂಜಾರಹಳ್ಳಿ, **ಬೇಟೆ ಮತ್ತು ಬೇಡರು,** ಚಿನ್ನಹಗರಿ ಪ್ರಕಾಶನ, ಚಿತ್ರದುರ್ಗ, ೨೦೦೭.

೬೧. ವಿರೂಪಾಕ್ಷಿ ಪೂಜಾರಹಳ್ಳಿ, ಬಳ್ಳಾರಿ ಜಿಲ್ಲೆಯ **ಪಾಳೆಯಗಾರರು,** ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪.

೬೨. ವೀರನಾಯಕ ಎಚ್.ವಿ., **ಕ್ಷಾತ್ರಾಂಶ ಪ್ರಬೋಧ,** ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ.

೬೩. ವಿರೂಪಾಕ್ಷಿ ಪೂಜಾರಹಳ್ಳಿ, **ಬೇಡ ಬುಡಕಟ್ಟಿನ ಚರಿತ್ರೆ ಮತ್ತು ಸಂಸ್ಕೃತಿ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೮.

೬೪. ವಿರೂಪಾಕ್ಷಿ ಪೂಜಾರಹಳ್ಳಿ, **ವಸಹಾತುಕಾಲೀನ ಬಳ್ಳಾರಿ ಜಿಲ್ಲೆ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೯.

೬೫. ವೀರೇಶ ಬಡಿಗೇರ, **ಶಾಸನಗಳಲ್ಲಿ ಆಯಗಾರಿಕೆ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦.

೬೬. ವೀರೇಶ ಬಡಿಗೇರ, ಎಸ್.ಆರ್.ಚನ್ನವೀರಪ್ಪ, **ವಿಷ್ಣುಶರ್ಮನ ಪಂಚತಂತ್ರ ಕಥೆಗಳ ಕನ್ನಡ ಸಾರ ಸಂಗ್ರಹ,** ಪ್ರಸಾರಾಂಗ, ಕ.ವಿ.ಹಂ., ೨೦೦೨.

೬೭. ವೀರೇಂದ್ರ ಶೀಲವಂತ, **ಕೃಷಿ ಆಚರಣೆಗಳು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦.

೬೮. ವೀರೇಂದ್ರ ಸಿಂಪಿ(ಸಂ), **ಡಾ.ಸಿಂಪಿ ಲಿಂಗಣ್ಣ ಸಮಗ್ರ ಜನಪದ ಸಂಪುಟ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭.

೬೯. ವಿಜಯಶ್ರೀ ಇಟ್ಟಣ್ಣವರ, **ಹದಿನೆಂಟು ಜಾತಿಗಳು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೧.

೭೦. ವೀರನಾಯಕ ಹರತಿ, **ರಾಷ್ಟ್ರಸೇವೆಯಲ್ಲಿ ನಾಯಕ ಜನಾಂಗ**, ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ, ೧೯೯೮.

೭೧. ವೆಂಕಟರತ್ನಂ ಎ.ವಿ., **ವಿಜಯನಗರ ಕಾಲದ ಸ್ಥಳೀಯ ಸರ್ಕಾರ**

೭೨. ವೃಷಭೇಂದ್ರಸ್ವಾಮಿ ಎಸ್.ಎಂ., **ಜಾನಪದ ಸಾಹಿತ್ಯ ದರ್ಶನ ಭಾಗ ೨**, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೦.

೭೩. ಸೋಮಶೇಖರ ನಾ.(ಸಂ), **ವೀರ ಸಂಗೋಳ್ಳಿ ರಾಯಣ್ಣ**, ನವಕರ್ನಾಟಕ ಪ್ರಕಾಶನ, ಬೆಂಗಳೂರು, ೨೦೧೫.

೭೪. ಶಾಮಾಶಾಸ್ತ್ರಿ ಆರ್.(ಸಂ), **ಕಂಠೀರವ ನರಸರಾಜ ವಿಜಯ**, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, ೧೯೭೧.

೭೫. ಶಿವಣ್ಣ ಕೆ.ಎಸ್.(ಸಂ), **ಕರ್ನಾಟಕ ಸಮಗ್ರ ಚರಿತ್ರೆ, ಸಂಪುಟ ೩**, ಪ್ರಸಾರಾಂಗ, ಕ.ವಿ.ಹಂಪಿ, ೧೯೯೭.

೭೬. ಶ್ರೀರಾಮ ಇಟ್ಟಣ್ಣವರ, **ಹಲಗಲಿ: ಗ್ರಾಮ ಜಾನಪದ**, ಲಿಂಗಾಯತ ಸಂಶೋಧನಾ ಕೇಂದ್ರ, ಬೆಳಗಾವಿ, ೧೯೯೫.

೭೭. ಶ್ರೀರಾಮ ಇಟ್ಟಣ್ಣವರ(ಸಂ), **ಜಾನಪದ ಪರಿಕ್ರಮ**, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು, ೨೦೧೦.

೭೮. ಶೇಷಶಾಸ್ತ್ರಿ ಆರ್., **ಕರ್ನಾಟಕದ ವೀರಗಲ್ಲುಗಳು**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೪.

೭೯. ಶೇಷಗಿರಿರಾವ್ ಎಲ್.ಎಸ್., **ಕಿರಿಯರ ಕರ್ನಾಟಕ**.

೮೦. ಸತ್ಯನಾಯಕ ಎ.ಎಮ್., **ಬುಡಕಟ್ಟು ಬದುಕಿನ ಸ್ಥಿತ್ಯಂತರಗಳು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦.

೮೧. ಸಂಧ್ಯಾರೆಡ್ಡಿ ಕೆ.ಆರ್., **ಕನ್ನಡ ಜಾನಪದ ಕಥೆಗಳು**, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು, ೧೯೯೦.

೮೨. ಸೀತಾರಾಮಯ್ಯ ಎಂ.ವಿ., **ಶ್ರೀ ಕೃಷ್ಣದೇವರಾಯನ ದಿನಚರಿ**, ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ಬೆಂಗಳೂರು, ೨೦೧೩.

೮೩. ಸುಧಾಕರ, **ಜಾನಪದ ನುಡಿಗಟ್ಟುಗಳ ಕೋಶ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬.

೮೪. ಸುಚೇತ ನವರತ್ನ(ಸಂ), **ದ್ರಾವಿಡ ಅಧ್ಯಯನ, ಸಂಪುಟ ೭, ಸಂಚಿಕೆ ೧,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮.

೮೫. ಸುಂದರ ಅ.(ಸಂ), **ಕರ್ನಾಟಕ ಸಮಗ್ರ ಚರಿತ್ರೆ, ಸಂಪುಟ ೧,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭.

೮೬. ಹರ್ತಿಕೋಟೆ ವೀರೇಂದ್ರ ಸಿಂಹ, ಅಮರೇಶ ಯತಗಲ್(ಸಂ), **ವಾಲ್ಮೀಕಿ ಮಂದಾರ,** ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ, ೨೦೦೮.

೮೭. ಹಲಸಂಗಿ ಗೆಳೆಯರು, **ಗರತಿಯ ಹಾಡುಗಳು,** ಸಮಾಜ ಪುಸ್ತಕಾಲಯ, ಧಾರವಾಡ, ೨೦೧೨.

೮೮. ಹಲಸಂಗಿ ಗೆಳೆಯರು, **ಹಲಸಂಗಿ ಹಾಡುಗಳು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦.

೮೯. ಹಿರೇಮಠ ಬಿ.ಆರ್., **ಶಾಸನಗಳಲ್ಲಿ ಕರ್ನಾಟಕದ ವರ್ತಕರು,** ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೮೬.

೯೦. ಹಿರೇಮಠ ಆರ್.ಸಿ.(ಸಂ), **ಮೋಹನ ತರಂಗಿಣಿ,** ಕನ್ನಡ ಅಧ್ಯಯನ ಪೀಠ, ಧಾರವಾಡ, ೧೯೭೩.

೯೧. ಹೊರೆಯಾಲ ದೊರೆಸ್ವಾಮಿ, **ಹಳ್ಳಿಯ ಅಧ್ಯಯನ ಕಾಗಿನೆಲೆ,** ಕನ್ನಡ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೩.

**ಇಂಗ್ಲಿಷ್ ಗ್ರಂಥಗಳು**

1. Burton stain, **Vijayanagara,** C.U.P. New Delhi, 1997.
2. Edgar Thurston, K.Rangachari, **Caste and Tribes of Southern India,** Vol-I-II, A.E.S, New Delhi, 1987.
3. Dikshit G.S., **Local Self Government in Mediaeval Karnataka,** Karnataka University, Dharwad, 1964.
4. Iyer LKA, **The Mysore Tribes and Castes, Vol-2,** Mittal publication, Delhi, 1988.

5. Sing K.S., **India's Community, Anthropalogical Survey of India,** Oxford University Prees, Delhi, 1998.

6. Mahalingam T.V., **Administrution and Social life Under Vijayanagara**, University of Madars, 1969.

**ಪಿಎಚ್.ಡಿ.ಮಹಾಪ್ರಬಂಧಗಳು**

೧. ಭಾರತಿ ಬಿ.ಆರ್., **ರಾಷ್ಟ್ರಕೂಟರ ಶಾಸನಗಳ ಸಾಂಸ್ಕೃತಿಕ ಅಧ್ಯಯನ(ಪಿಎಚ್.ಡಿ)**, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨.

೨. ತಿಮ್ಮಾರೆಡ್ಡಿ ಎಸ್.ವೈ., **ಕುಲಕಸಬುಗಳು ಮತ್ತು ಆಧುನಿಕತೆ,(ಪಿಎಚ್.ಡಿ.)**, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦.

೨. ವೆಂಕಟೇಶ ಬಿ., **ಗಂಗಾವತಿ ತಾಲೂಕಿನ ಶಾಸನಗಳು ಸಮಾಜೋಧಾರ್ಮಿಕ ಅಧ್ಯಯನ (ಎಂ.ಫಿಲ್)**, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭.

**ಶಾಸನ ಸಂಪುಟಗಳು**

೧. ಎಫಿಗ್ರಾಫಿಯ ಕರ್ನಾಟಕ ಶಾಸನ ಸಂಪುಟಗಳು.

೨. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟಗಳು.

೩. ಭಾರತದ ಗ್ಯಾಸೆಟಿಯರ್, ಧಾರವಾಡ ಜಿಲ್ಲೆ, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ.

೪. ಭಾರತದ ಗ್ಯಾಸೆಟಿಯರ್, ಕರ್ನಾಟಕ ಕೈಪಿಡಿ, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು.

೫. Karnataka State Gazetteer, Decennial Supplement, (1983-94), Government of Karnataka.

೬. South Indian Inscriptions Vol-XVI, Archalogical survey of India, 1988.

**ವಿಶ್ವಕೋಶಗಳು/ನಿಘಂಟುಗಳು**

೧. ಕನ್ನಡ ಜಾನಪದ ವಿಶ್ವಕೋಶ

೨. ಕನ್ನಡ ಸಾಹಿತ್ಯ ಪರಿಷತ್ ನಿಘಂಟು, ಕನ್ನಡ–ಕನ್ನಡ

೩. ಕಸ್ತೂರಿ ಕೋಶ

೪. ಕಿಟಲ್ ಕೋಶ

೫. ಜಾನಪದ ನಿಘಂಟು

೬. ಸಂಸ್ಕೃತ ಕನ್ನಡ ನಿಘಂಟು

**ನಿಯತಕಾಲಿಕೆಗಳು/ಪತ್ರಿಕೆಗಳು**

೧. ಅರಹು-ಕುರುಹು, ಮೈಸೂರು.

೨. ಕರ್ನಾಟಕ ಭಾರತಿ, ಧಾರವಾಡ.

೩. ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, ಮೈಸೂರು.

೪. ಜಾನಪದ ಜಗತ್ತು, ಕರ್ನಾಟಕ ಜಾನಪದ ಟ್ರಸ್ಟ್, ಬೆಂಗಳೂರು.

೫. ಜಾನಪದ ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು.

೬. ವಾಲ್ಮೀಕಿ ಸಂಪದ, ಮಹಿರ್ಷಿ ವಾಲ್ಮೀಕಿ ಪೀಠ, ರಾಜನಹಳ್ಳಿ.

೭. ವಾಲ್ಮೀಕಿ ವಾಣಿ, ಚಿತ್ರದುರ್ಗ.

೮. ವಾಲ್ಮೀಕಿ ಕರ್ನಾಟಕ, ಬೆಂಗಳೂರು.

೯. ಸಂಕ್ರಮಣ, ಧಾರವಾಡ.

೧೦. ಪ್ರಜಾವಾಣಿ, ವಿಜಯವಾಣಿ, ವಿಜಯ ಕರ್ನಾಟಕ.

# ಛಾಯಾ ಚಿತ್ರಗಳು



ತಳವಾರರ ಖಡ್ಗ



ತಳವಾರರ ಕುರಿತಾದ ಶಾಸನ



ಭೀಮಪ್ಪ ಫಕೀರಪ್ಪ ಚಿಂದಿ
ಮಾಜಿ ತಳವಾರ, ಅಮ್ಮೀನಭಾವಿ



ಕನಕಪ್ಪ ಫಕೀರಪ್ಪ ಆದವಾನಿ
ನಿವೃತ ತಳವಾರ, ಬೆಳವಣಿಕೆ



ಹನುಮಂತಪ್ಪ ಕಾಗಿ, ಮಾಜಿ
ವಾಲೇಕಾರ, ಕೊಂಬಳಿ



ಯಮನಪ್ಪ ಹನುಮಪ್ಪ ಕತ್ತಿ
ವಾಲೇಕಾರ, ಅಮ್ಮೀನಗಡ



ಹನುಮಂತಪ್ಪ ಕಣಗೇರಿ
ಅಗಳಕೇರಿ



ಲಕ್ಷ್ಮಪ್ಪ ಯಮುನಪ್ಪ ಕನಕನ್ನವರ,
ವಾಲೇಕಾರ, ಗೊಡಚಿ



ಗೋವಿಂದಪ್ಪ ತಳವಾರ, ಕೌಜಲಗಿ



ವೀರಗಲ್ಲು, ತಳವಾರಘಟ್ಟ



ತಳವಾರರ ಖಡ್ಗಗಳು



ತಳವಾರಘಟ್ಟದ ಪ್ರವೇಶದ್ವಾರ



ತಳವಾರ ಚಾವಡಿ, ತಳವಾರಘಟ್ಟ



ಅಗಸಿ, ತಳವಾರಘಟ್ಟ



ತಳವಾರರ ಕಾವಲು ಸ್ಥಳ, ತಳವಾರಘಟ್ಟ



ಕೋಟೆ ಪ್ರದೇಶ, ತಳವಾರಘಟ್ಟ



ಕಾವಲುಗೋಪುರ, ಹಂಪೆ



ಮದುಮಗಳನ್ನು ರಕ್ಷಣೆಯೊಂದಿಗೆ ಕರೆದೊಯ್ಯುತ್ತಿರುವ ತಳವಾರರು, ಅಥಣಿ




ಮದುಮಕ್ಕಳಿಗೆ ರಕ್ಷಕರಾಗಿ ನಿಂತಿರುವ ತಳವಾರರು, ಆಥಣಿ

